ಪ್ರತಿಭಾವಂತ ಸಂಸದೀಯ ಪಟುಗಳ ಬದುಕು - ಬರಹ ಮಾಲಿಕೆ

# ಡಾ|| ರಾಂಮನೋಹರ ಲೋಹಿಯಾ



ಲೋಕಸಭಾ ಸಚಿವಾಲಯ, ನವದೆಹಲಿ
ಕನ್ನಡ ಅನುವಾದ - ಕರ್ನಾಟಕ ವಿಧಾನ ಮಂಡಲ ಕಾರ್ಯಾಲಯ
ವಿಧಾನಸೌಧ, ಬೆಂಗಳೂರು - 560 001

# ಪ್ರತಿಭಾವಂತ ಸಂಸದೀಯ ಪಟುಗಳು
## ಬದುಕು-ಬರಹ ಮಾಲಿಕೆ

**ಡಾ|| ರಾಂಮನೋಹರ ಲೋಹಿಯಾ**



## ಪರಿವಿಡಿ

ಪುಟ

III

# ಮುನ್ನುಡಿ

ನಮ್ಮ ರಾಷ್ಟ್ರ ಹಾಗೂ ಸಂಸದೀಯ ಬದುಕಿಗೆ ಅಗ್ರಮಾನ್ಯ ಸಂಸದೀಯ ಪಟುಗಳು ನೀಡಿರುವ ಕೊಡುಗೆಯನ್ನು ಸ್ಮರಿಸಿ ಗೌರವಿಸುವುದಕ್ಕಾಗಿ ಅವರುಗಳ ಜನ್ಮ ದಿನೋತ್ಸವವನ್ನು ಆಚರಿಸಬೇಕೆಂದು ಭಾರತದ ಸಂಸದೀಯ ಸಮುದಾಯವು ಆಶಿಸುತ್ತದೆ. ಈ ಸಂಬಂಧದಲ್ಲಿ ಅಗ್ರಮಾನ್ಯ ಸಂಸದರ ಬದುಕು-ಬರಹ ಮಾಲಿಕೆ ಎಂಬ ಹೆಸರಿನಲ್ಲಿ ಒಂದು ನವೀನ ಮಾಲಿಕೆಯ ಪುಸ್ತಕಗಳನ್ನು ಪ್ರಕಟಿಸಲು ಇಚ್ಛಿಸಿದೆ.

ಸಮಾಜವಾದಿ ನಾಯಕರಲ್ಲಿ ಅಗ್ರಗಣ್ಯರೂ, ವಿಶಿಷ್ಟ ವ್ಯಕ್ತಿತ್ವದ ಸಂಸದರೂ ಆಗಿದ್ದ ದಿವಂಗತ ಡಾ|| ರಾಂಮನೋಹರ ಲೋಹಿಯಾ ಅವರ ಸ್ಮರಣಾರ್ಥ 1990ರ ಮಾರ್ಚ್ 23 ರಂದು ಒಂದು ಸಮಾರಂಭವು ನಡೆಯಲಿದೆ. ಈ ಸಮಾರಂಭದ ಅಂಗಭಾಗವಾಗಿ ಹಿಂದಿ ಹಾಗೂ ಇಂಗ್ಲೀಷ್ ಭಾಷೆಗಳಲ್ಲಿ ಅವರ ಬದುಕು-ಬರಹ ಕುರಿತ ಹೊತ್ತಿಗೆಯೊಂದನ್ನು ಹೊರತರಲಾಗುತ್ತಿದೆ.

ಈ ಗ್ರಂಥದಲ್ಲಿ ಮೂರು ಭಾಗಗಳಿವೆ. ಮೊದಲನೇ ಭಾಗದಲ್ಲಿ ಅವರ ಸಂಕ್ಷಿಪ್ತ ವ್ಯಕ್ತಿಚಿತ್ರಣ ಇದೆ. ಅದರಲ್ಲಿ, ಅವರ ಬದುಕಿನ ಬಹುಮುಖ್ಯ ಘಟನಾವಳಿಗಳ ಇಣುಕು ನೋಟ ದೊರೆಯುತ್ತದೆ. ಎರಡನೇ ಭಾಗದಲ್ಲಿ ಮೂರು ಲೇಖನಗಳು ಇವೆ. ಅದರಲ್ಲಿ, ಮೊದಲ ಲೇಖನವನ್ನು ಉತ್ತರ ಪ್ರದೇಶದ ರಾಜ್ಯಪಾಲರಾದ ಮತ್ತು ಲೋಹಿಯಾ ಅವರ ನಿಕಟವರ್ತಿಗಳಾಗಿದ್ದ ಶ್ರೀ ಬಿ. ಸತ್ಯನಾರಾಯಣರೆಡ್ಡಿ ಅವರು ಬರೆದಿದ್ದು, ಎರಡನೇ ಲೇಖನವನ್ನು ಮಾಜಿ ಸಂಸತ್ ಸದಸ್ಯರೂ ಲೋಹಿಯಾ ಅವರ ಸಹ ಸಂಸದರೂ ಆಗಿದ್ದ ಶ್ರೀ ಸುರೇಂದ್ರನಾಥ ದ್ವಿವೇದಿ ಅವರು ಬರೆದಿದ್ದಾರೆ. ಮೂರನೇ ಲೇಖನವನ್ನು ಸುಪ್ರಸಿದ್ಧ ಪತ್ರಕರ್ತರೂ ಸಂಸತ್ ಕಲಾಪವನ್ನು ಕುರಿತು ಪತ್ರಿಕಾ ವರದಿ ಮಾಡುವಾಗ ಲೋಹಿಯಾ ಅವರನ್ನು ನಿಕಟವಾಗಿ ಗಮನಿಸಿದವರಾದ ಶ್ರೀ ಜಗದೀಶಪ್ರಸಾದ ಚತುರ್ವೇದಿಯವರು ಬರೆದಿದ್ದಾರೆ. ಅವರ ಈ ಅಮೂಲ್ಯ ಲೇಖನಗಳಿಗಾಗಿ ನಾವು ನಮ್ಮ ಕೃತಜ್ಞತೆಗಳನ್ನು ಸಮರ್ಪಿಸುತ್ತೇವೆ. ಡಾ|| ಲೋಹಿಯಾ ಅವರ ಇತರ ಸಮಕಾಲೀನರು ಮತ್ತು ಸಹವರ್ತಿಗಳಿಗೂ ಲೋಹಿಯಾ ಅವರನ್ನು ಕುರಿತಂತೆ ತಮ್ಮ ಹಳೆಯ ನೆನಪುಗಳನ್ನು ಬರೆದು ಕೊಡಬೇಕೆಂದು ವಿನಂತಿಸಿದ್ದೇವೆ. ಅವೂ ಬಂದು ತಲುಪಿದಲ್ಲಿ ಲೋಹಿಯಾ ಅವರ ಬದುಕು-ಬರಹದ ಬಗ್ಗೆ ಇನ್ನೂ ವಿಸ್ತೃತವಾದ ಹೊತ್ತಿಗೆಯನ್ನು ಪ್ರಕಟಿಸುವುದು ಸಾಧ್ಯವಾಗುತ್ತದೆ.

ಭಾಗ ಮೂರರಲ್ಲಿ, ಲೋಕಸಭೆಯಲ್ಲಿ ಡಾ|| ಲೋಹಿಯಾ ಅವರು ಮಾಡಿದ

ಕೆಲವು ಆಯ್ದ ಭಾಷಣಗಳ ಉದ್ಧೃತ ಭಾಗಗಳನ್ನು ಕೊಡಲಾಗಿದೆ. ಅವರು ಸಂಸತ್ ಸದಸ್ಯರಾಗಿದ್ದಾಗ, ಭಾರತವನ್ನು ಕಾಡುತ್ತಿದ್ದ ಅನೇಕ ಸಮಸ್ಯೆಗಳು ಮತ್ತು ವಿವಾದಗಳನ್ನು ಕುರಿತ ಚರ್ಚೆಯಲ್ಲಿ ಭಾಗವಹಿಸಿ ಅವರು ಹಿಂದಿಯಲ್ಲಿ ಈ ಭಾಷಣಗಳನ್ನು ಮಾಡಿದ್ದರು. ಈ ಭಾಷಣಗಳನ್ನು ಇಂಗ್ಲೀಷಿಗೆ ಭಾಷಾಂತರಿಸುವಾಗ ಅವರ ವಿಶಿಷ್ಟ ವಾದ ಭಾಷಣ ಶೈಲಿಯಲ್ಲಿದ್ದ ಮಾತಿನ ಹರಿತ ಹಾಗೂ ವಿಷಯದ ಒತ್ತುಗಳಿಗೆ ಊನವಾಗದಂತೆ ಆದಷ್ಟೂ ಎಚ್ಚರ ವಹಿಸಲಾಗಿದೆ. ತರುವಾಯ ನಾವು ತರಬೇಕೆಂದು ಆಲೋಚಿಸಿರುವ ಪರಿಷ್ಕೃತ ಆವೃತ್ತಿಯಲ್ಲಿ ಡಾ|| ಲೋಹಿಯಾ ಅವರ ಇತರ ಭಾಷಣಗಳನ್ನೂ ಸೇರಿಸಲು ಉದ್ದೇಶಿಸಲಾಗಿದೆ.

**ಡಾ|| ರಾಂಮನೋಹರ ಲೋಹಿಯಾ** ಅವರ ಜನ್ಮದಿನೋತ್ಸವದ ಈ ಸಂದರ್ಭದಲ್ಲಿ ಅವರಿಗೆ ಈ ಮೂಲಕ ನಮ್ಮ ಗೌರವಪೂರ್ಣ ನಮನಗಳನ್ನು ಸಲ್ಲಿಸುತ್ತೇವೆ ಮತ್ತು ಈ ಹೊತ್ತಿಗೆಯನ್ನು ಜನತೆ ಆಸಕ್ತಿಯಿಂದ ಓದುತ್ತಾರೆ ಮತ್ತು ಇದು ಉಪಯುಕ್ತ ಗ್ರಂಥವಾಗುತ್ತದೆ ಎಂದು ನಂಬುತ್ತೇವೆ.

ಸುಭಾಷ್ ಸಿ. ಕಶ್ಯಪ್
ಕಾರ್ಯದರ್ಶಿಗಳು, ಲೋಕಸಭೆ
ಮತ್ತು
ಮಹಾ ಕಾರ್ಯದರ್ಶಿಗಳು
ಭಾರತ ಸಂಸದೀಯ ಸಮುದಾಯ

ನವದೆಹಲಿ
16ನೇ ಮಾರ್ಚ್, 1990

# ಪೀಠಿಕೆ

ನಮ್ಮ ದೇಶ ಸ್ವಾತಂತ್ರ್ಯದ ಸುವರ್ಣ ಮಹೋತ್ಸವವನ್ನು ಆಚರಿಸುತ್ತಿರುವ ಈ ಸುಸಂದರ್ಭದಲ್ಲಿ ದೇಶಕ್ಕಾಗಿ ದುಡಿದು ಮಡಿದ ಹಾಗೂ ನವ ಭಾರತ ನಿರ್ಮಾಣಕ್ಕಾಗಿ ಶ್ರಮಿಸಿದ ಪ್ರತಿಭಾನ್ವಿತ ಸ್ವಾತಂತ್ರ್ಯ ಹೋರಾಟಗಾರರು ಮತ್ತು ಸಂಸದೀಯ ಪಟುಗಳನ್ನು ನೆನೆಸಬೇಕಾದುದು ನಮ್ಮೆಲ್ಲರ ಆದ್ಯ ಕರ್ತವ್ಯವಾಗಿರುತ್ತದೆ. ಈಗಾಗಲೇ ಲೋಕಸಭಾ ಕಾರ್ಯಾಲಯದವರು ಇಂತಹ ಗಣ್ಯರ ಬಗ್ಗೆ ಅನೇಕ ಕಿರುಹೊತ್ತಿಗೆಗಳನ್ನು ಹಿಂದಿ ಮತ್ತು ಆಂಗ್ಲ ಭಾಷೆಗಳಲ್ಲಿ ಹೊರ ತಂದಿರುತ್ತಾರೆ. ಆದರೆ ನಮ್ಮ ಕರ್ನಾಟಕ ರಾಜ್ಯದ ಜನಪ್ರತಿನಿಧಿಗಳಿಗೆ ಹಾಗೂ ಜನತೆಗೆ ಈ ಪ್ರತಿಭಾವಂತರುಗಳ ಬದುಕು-ಬರಹ ಮತ್ತು ಸಾಧನೆಗಳನ್ನು ಪರಿಚಯಿಸುವ ದೃಷ್ಟಿಯಿಂದ ಈ ಕಿರು ಹೊತ್ತಿಗೆಗಳನ್ನು ಕನ್ನಡ ಭಾಷೆಗೆ ಅನುವಾದಿಸಿ ಪ್ರಕಟಿಸುವ ಒಂದು ಕಾರ್ಯಕ್ರಮವನ್ನು ಹಮ್ಮಿಕೊಳ್ಳಬೇಕೆಂದು ವಿಧಾನ ಪರಿಷತ್ತಿನ ಸನ್ಮಾನ್ಯ ಸಭಾಪತಿಯವರಾದ ಶ್ರೀ ಡಿ.ಬಿ. ಕಲ್ಮಣ್‌ಕರ್ ಹಾಗೂ ವಿಧಾನ ಸಭೆಯ ಸನ್ಮಾನ್ಯ ಅಧ್ಯಕ್ಷರಾದ ಶ್ರೀ ರಮೇಶ್ ಕುಮಾರ್ ಅವರುಗಳು ಅಪೇಕ್ಷಿಸಿದಂತೆ ಈ ಕಾರ್ಯವನ್ನು ವಿಧಾನಸಭೆಯ ಸದಸ್ಯರಾದ ಶ್ರೀ ಬಿ.ಬಿ. ಶಿವಪ್ಪನವರ ಅಧ್ಯಕ್ಷತೆಯಲ್ಲಿ ರಚಿತವಾದ ವಿಧಾನಮಂಡಲದ ಗ್ರಂಥಾಲಯ ಉಪ ಸಮಿತಿಗೆ ವಹಿಸಲಾಗಿತ್ತು. ಈ ಉಪಸಮಿತಿಯು ಕಾರ್ಯ ಪ್ರವೃತ್ತವಾಗಿ ಭಾಷಾಂತರ ಕಾರ್ಯವನ್ನು ಕರ್ನಾಟಕ ರಾಜ್ಯದ ಭಾಷಾಂತರ ನಿರ್ದೇಶನಾಲಯದ ಸಹಯೋಗದೊಂದಿಗೆ ಹಾಗೂ ನುರಿತ ಭಾಷಾಂತರಕಾರರುಗಳ ಮೂಲಕ ತಯಾರಿಸಿರುವ **ಡಾ॥ ರಾಂಮನೋಹರ ಲೋಹಿಯಾ** ಅವರ ಕೃತಿಯನ್ನು ತಮ್ಮ ಮುಂದಿಡುತ್ತಿದ್ದೇನೆ.

ಇದು ಲೋಕಸಭಾ ಸಚಿವಾಲಯದವರು "Eminent Parliamentarians - Monograph Series" ಎಂಬ ಆಂಗ್ಲ ಭಾಷೆಯ ಕನ್ನಡಾನುವಾದವಾಗಿದ್ದು, ಸದರಿ ಗ್ರಂಥದ ಪ್ರಕಾಶಕರಾದ ಲೋಕಸಭಾ ಸಚಿವಾಲಯಕ್ಕೆ ಕೃತಜ್ಞತೆಗಳನ್ನು ಸಲ್ಲಿಸುತ್ತೇನೆ.

ಈ ಅನುವಾದವನ್ನು ನಿರ್ವಹಿಸಿಕೊಟ್ಟ ಭಾಷಾಂತರ ನಿರ್ದೇಶನಾಲಯದವರಿಗೂ, ನುರಿತ ಭಾಷಾಂತರಕಾರರಿಗೂ, ಅಂದವಾಗಿ ಮುದ್ರಿಸಿಕೊಟ್ಟ ಸರ್ಕಾರಿ ಮುದ್ರಣಾಲಯದ ನಿರ್ದೇಶಕರಿಗೂ ಹಾಗೂ ಉಪ ಸಮಿತಿಯ ಸದಸ್ಯರುಗಳಿಗೆ ಧನ್ಯವಾದಗಳನ್ನು ಅರ್ಪಿಸುತ್ತೇನೆ.

ಪ್ರತಿಭಾವಂತ ಸಂಸದೀಯ ಪಟುಗಳ ಬಗೆಗಿನ ಈ ಕಿರುಹೊತ್ತಿಗೆಗಳು ಮಾನ್ಯ ಸದಸ್ಯರುಗಳಿಗೆ ಸಂಸದೀಯ ವಿಷಯಗಳಲ್ಲಿ ಅನುಕೂಲ ಹಾಗೂ ಅನುಭವ ನೀಡುತ್ತದೆಂದು ಭಾವಿಸುತ್ತೇನೆ.

ಯಾಕೂಬ್ ಷರೀಫ್,<br>
ಕಾರ್ಯದರ್ಶಿ,<br>
ಕರ್ನಾಟಕ ವಿಧಾನ ಮಂಡಲ.

ಬೆಂಗಳೂರು<br>
ಫೆಬ್ರುವರಿ, 1998

# 1. ಡಾ॥ ರಾಮಮನೋಹರ ಲೋಹಿಯಾ : ವ್ಯಕ್ತಿಚಿತ್ರ

ಅಗ್ರಗಣ್ಯ ಸಮಾಜವಾದಿ ನಾಯಕರಾದ ಡಾ॥ ರಾಮಮನೋಹರ ಲೋಹಿಯಾ ಅವರು ಜನಿಸಿದ್ದು 1910ರ ಮಾರ್ಚ್ 23 ರಂದು . ಉತ್ತರ ಪ್ರದೇಶದ ಫೈಜಾಬಾದ್ ಜಿಲ್ಲೆಯ ಅಕ್ಬರ್‌ಪುರ್ ಇವರ ಹುಟ್ಟೂರು. ಇವರ ತಂದೆ ಶ್ರೀ ಹೀರಾಲಾಲ್ ಲೋಹಿಯಾ ವ್ಯಾಪಾರಸ್ಥರು. ಇವರ ಪೂರ್ವಿಕರು ಮೂಲತಃ ಉತ್ತರ ಪ್ರದೇಶದ ಮಿರ್ಜಾಪುರದಲ್ಲಿ ವಾಸಿಸುತ್ತಿದ್ದರು. ತಲೆತಲಾಂತರದಿಂದ 'ಲೋಹ'ದ (ಕಬ್ಬಿಣ ವಸ್ತುಗಳ) ವ್ಯಾಪಾರವನ್ನು ಮಾಡುತ್ತಿದ್ದುದರಿಂದ ಇವರ ಕುಟುಂಬಕ್ಕೆ 'ಲೋಹಿಯಾ' ಎಂಬ ಅಡ್ಡ ಹೆಸರು ಬಂದಿತು. ಲೋಹಿಯಾ ಅವರು ಎರಡೂವರೆ ವರ್ಷ ವಯಸ್ಸಿನವರಾಗಿದ್ದಾಗಲೇ ತಮ್ಮ ತಾಯಿಯನ್ನು ಕಳೆದುಕೊಂಡರು. ಅಜ್ಜಿ ಮತ್ತು ಅತ್ತೆಯ ಆರೈಕೆಯಲ್ಲಿ ಅವರು ಬೆಳೆದರು.

ಚಿಕ್ಕವರಿದ್ದಾಗಲೇ ಲೋಹಿಯಾ ಅವರು, ಜಾತಿ ಹಾಗೂ ಕೋಮು ಪೂರ್ವಾಗ್ರಹ ವಿಲ್ಲದ ಒಂದು ಮುಕ್ತ ವಾತಾವರಣದಲ್ಲಿ ಬೆಳೆದರು. ದೃಢ ರಾಷ್ಟ್ರೀಯತಾ ಮನೋಭಾವ ಇವರಿಗೆ ತಮ್ಮ ತಂದೆಯಿಂದ ಬಂದ ಬಳುವಳಿ, ಇವರ ತಂದೆ ಸಕ್ರಿಯ ಕಾಂಗ್ರೆಸ್ ಕಾರ್ಯಕರ್ತರಾಗಿದ್ದರಲ್ಲದೆ ಗಾಂಧೀಜಿಯವರ ಪರಮ ಭಕ್ತರಾಗಿದ್ದರು. ಚಿಕ್ಕವಯಸ್ಸಿನಿಂದಲೂ ಲೋಹಿಯಾ ಅವರಿಗೆ ಬಡಬಗ್ಗರನ್ನು ಕಂಡರೆ ಅನುಕಂಪ. ಹೀಗಾಗಿ, ಇವರು ಸದಾ ದೀನದಲಿತರಿಗೆ ಸಹಾಯ ಮಾಡುತ್ತಾ ಬಂದರು.

**ಶಿಕ್ಷಣ :**

ಇವರ ಆರಂಭದ ಶಿಕ್ಷಣ, ಅಕ್ಬರ್‌ಪುರದ ಟಂಡನ್ ಪಾಠಶಾಲೆ ಮತ್ತು ವಿಶ್ವೇಶ್ವರನಾಥ ಪ್ರೌಢಶಾಲೆಯಲ್ಲಿ ನಡೆಯಿತು. ಇವರು ತಮ್ಮ ತರಗತಿಯಲ್ಲಿ ಸದಾ ಮೊದಲನೆಯವರಾಗಿ ಉಪಾಧ್ಯಾಯರಿಗೆ ಪ್ರೀತಿಪಾತ್ರರಾಗಿದ್ದರು. ಅವರ ತಂದೆ ಅಕ್ಬರಪುರದಿಂದ ಮುಂಬೈಗೆ ಬಂದು ನೆಲೆಸಿದ ಮೇಲೆ, ಮುಂಬೈನ ಮಾರವಾಡಿ ಶಾಲೆಯಲ್ಲಿ ತಮ್ಮ ವಿದ್ಯಾಭ್ಯಾಸ ಮುಂದುವರಿಸಿದರು . ಮೆಟ್ರಿಕ್ಯುಲೇಷನ್ ಪರೀಕ್ಷೆಯಲ್ಲಿ ಪ್ರಥಮ ದರ್ಜೆಯಲ್ಲಿ 1925ರಲ್ಲಿ ಪಾಸಾದರು. ಅವರ ಇಂಟರ್‌ಮೀಡಿಯೆಟ್ ವ್ಯಾಸಂಗ ಬನಾರಸ್ ಹಿಂದೂವಿಶ್ವವಿದ್ಯಾಲಯದಲ್ಲಿ ಆಯಿತು. 1926ರಲ್ಲಿ ಅವರಿನ್ನೂ ಕೇವಲ 16 ವರ್ಷದವರಾಗಿದ್ದಾಗ ಗೌಹಾಟಿಯಲ್ಲಿ ಜರುಗಿದ ಇಂಡಿಯನ್ ನ್ಯಾಷನಲ್ ಕಾಂಗ್ರೆಸ್ಸಿನ ಅಧಿವೇಶನದಲ್ಲಿ ಭಾಗವಹಿಸಿದರು. 1927ರಲ್ಲಿ ಅವರು ಇಂಟರ್ ಮೀಡಿಯಟ್ ಪರೀಕ್ಷೆಯಲ್ಲಿ ಉತ್ತೀರ್ಣರಾಗಿ ಮುಂದಿನ ವಿದ್ಯಾಭ್ಯಾಸಕ್ಕಾಗಿ ಕಲ್ಕತ್ತಾಕ್ಕೆ ಹೋದರು.

ಇಲ್ಲಿ ಅವರ ಜೀವನದಲ್ಲಿ ನಡೆದ ಒಂದು ಘಟನೆಯನ್ನು ಹೇಳಲೇಬೇಕು. ಆ ಕಾಲದಲ್ಲಿ ಕಲ್ಕತ್ತಾದಲ್ಲಿ ಎರಡು ಹೆಸರಾಂತ ಸರ್ಕಾರಿ ಕಾಲೇಜುಗಳು ಇದ್ದವು. ಅವುಗಳಲ್ಲದೆ ವಿದ್ಯಾಸಾಗರ ಕಾಲೇಜು ಎಂಬ ಒಂದು ಖಾಸಗಿ ಕಾಲೇಜೂ ಇತ್ತು. ಇಲ್ಲಿನ ಉಪಾಧ್ಯಾಯರುಗಳು ರಾಷ್ಟ್ರೀಯತಾ ಮನೋಭಾವ ಉಳ್ಳವರಾಗಿದ್ದರು. ಯಾವ ಕಾಲೇಜಿಗೆ ಸೇರಬೇಕು ಎಂಬ ಪ್ರಶ್ನೆ ಬಂದಾಗ, ನಿಜವಾದ ರಾಷ್ಟ್ರೀಯತಾ ವಾದಿಯಾಗಿದ್ದ ಲೋಹಿಯಾ ಅವರು ಆ ಎರಡೂ ಸರ್ಕಾರಿ ಕಾಲೇಜುಗಳನ್ನು ಬಿಟ್ಟು ವಿದ್ಯಾಸಾಗರ ಕಾಲೇಜಿಗೆ ಸೇರಬೇಕೆಂದು ನಿರ್ಧರಿಸಿದರು. 1929 ರಲ್ಲಿ ಅವರು ಬಿ.ಎ. ಪದವಿ ಪರೀಕ್ಷೆಯಲ್ಲಿ ಉತ್ತೀರ್ಣರಾದರು. ಮೂರು ವರ್ಷಗಳ ತರುವಾಯ ಎಂದರೆ 1932 ರಲ್ಲಿ ಬರ್ಲಿನ್ ವಿಶ್ವವಿದ್ಯಾನಿಲಯದಲ್ಲಿ ಅರ್ಥಶಾಸ್ತ್ರದಲ್ಲಿ ಪಿ.ಎಚ್.ಡಿ ಪದವಿ ಪಡೆದುಕೊಂಡರು. ''ಉಪ್ಪು ಮತ್ತು ಅಸಹಕಾರ ಚಳುವಳಿ'' ಎಂಬುದು ಅವರ ಪಿ. ಎಚ್.ಡಿ ಪ್ರಬಂಧದ ವಿಷಯವಾಗಿತ್ತು. ಬರ್ಲಿನ್‌ನಲ್ಲಿ ಇರುವಾಗಲೇ ಅವರು ಮಾರ್ಕ್ಸ್ ಹಾಗೂ ಹೆಗೆಲ್ ಅವರ ಕೃತಿಗಳನ್ನು ಓದಿದರು. ಬರ್ಲಿನ್ ಬಿಡುವಾಗ ಅವರ ಮನಸ್ಸು ಸಮಾಜವಾದದ ಕಡೆಗೆ ಸ್ಪಷ್ಟವಾಗಿ ಒಲಿದಿತ್ತು. ಗಾಂಧೀಜಿ ಅವರ ಆದರ್ಶಗಳು, ಮೌಲ್ಯ ಹಾಗೂ ವಿಧಾನಗಳು ಅವರ ಮೇಲೆ ಗಾಢವಾದ ಪ್ರಭಾವವನ್ನು ಬೀರಿದ್ದವು.

ಡಾ॥ ಲೋಹಿಯಾ ಅವರು ಬನಾರಸ್ ಹಿಂದೂ ವಿಶ್ವವಿದ್ಯಾಲಯದಲ್ಲಿ ಕಳೆದ ಕಾಲಾವಧಿ ಅವರ ಬದುಕಿನ ಬಹು ಮುಖ್ಯವಾದ ಘಟ್ಟ. ಚಿಕ್ಕಂದಿನಿಂದಲೂ ಲೋಹಿಯಾ ಅವರು ಉತ್ತಮ ವಾಗ್ಮಿ. ವಿಶ್ವವಿದ್ಯಾನಿಲಯದಲ್ಲಿ ತೀಕ್ಷ್ಣಮತಿ ಧೀಮಂತರಾಗಿದ್ದ ಇವರು ತಮ್ಮದೇ ಆದ ತರ್ಕಬದ್ಧವಾದ ಭಾಷಣ ಶೈಲಿಯನ್ನು ರೂಪಿಸಿಕೊಂಡರು. ಕೇಳುಗರು ಬಹಳ ಆಸಕ್ತಿಯಿಂದ ಗಮನವಿಟ್ಟು ಕೇಳುವಂತಹ ಭಾಷಣ ಶೈಲಿ ಅವರದ್ದು. ಕಾಶಿ ವಿಶ್ವವಿದ್ಯಾಲಯವೆಂದು ಹೆಸರುವಾಸಿಯಾಗಿದ್ದ ಆ ವಿಶ್ವವಿದ್ಯಾನಿಲಯ, ದೇಶಕ್ಕೆ ಕೀರ್ತಿ ತರುವಂತಹ ಮತ್ತು ಅದಕ್ಕಾಗಿ ಎಂತಹ ತ್ಯಾಗಬಲಿದಾನಕ್ಕೂ ಸಿದ್ಧರಾದ ಪ್ರತಿಭಾವಂತ ಯುವಕರನ್ನು ತಯಾರು ಮಾಡುವುದಕ್ಕೆ ಪ್ರಸಿದ್ಧವಾಗಿತ್ತು. ಲೋಹಿಯಾ ಅಂಥ ಯುವಕರಲ್ಲಿ ಒಬ್ಬರು.

## ಸ್ವಾತಂತ್ರ್ಯ ಹೋರಾಟಗಾರ:

ಲೋಹಿಯಾ ಅವರು ಕಿರಿಯ ವಯಸ್ಸಿನಲ್ಲೇ ಸ್ವಾತಂತ್ರ್ಯ ಸಂಗ್ರಾಮಕ್ಕೆ ಧುಮುಕಿದರು. ಅವರ ಮನೆಯಲ್ಲಿದ್ದ ವಾತಾವರಣವೂ ರಾಜಕೀಯದ ಬಗ್ಗೆ ಇವರಲ್ಲಿ ಮೊಳೆತ ಆಸಕ್ತಿಗೆ ಪುಷ್ಟಿ ನೀಡಿತು. 1918 ರಲ್ಲಿ ತಂದೆ ಲೋಹಿಯಾ ಅವರನ್ನು ಕಾಂಗ್ರೆಸ್ಸಿನ ಅಹ್ಮದಾಬಾದ್ ಅಧಿವೇಶನಕ್ಕೆ ಕರೆದೊಯ್ದರು. ಕೇವಲ ಹತ್ತು ವರ್ಷದವರಾಗಿದ್ದಾಗಲೇ

ಲೋಕಮಾನ್ಯ ಬಾಲಗಂಗಾಧರ ತಿಲಕ್ ಅವರ ಮರಣದ ಸಂದರ್ಭದಲ್ಲಿ 1920 ರಲ್ಲಿ ವಿದ್ಯಾರ್ಥಿಗಳ ಸತ್ಯಾಗ್ರಹವನ್ನು ಮುಂದಾಳಾಗಿ ಸಂಘಟಿಸಿದರು. ಮಹಾನ್ ಸ್ವಾತಂತ್ರ್ಯ ಹೋರಾಟಗಾರರಾದ ಲೋಹಿಯಾ ಅವರು ಗಾಂಧೀಜಿ ಅವರ ಕರೆಗೆ ಓಗೊಟ್ಟು ಅಸಹಕಾರ ಚಳುವಳಿಯಲ್ಲಿ ಸಕ್ರಿಯವಾಗಿ ಪಾಲ್ಗೊಂಡರು. 1928 ರಲ್ಲಿ ಕಲ್ಕತ್ತಾದಲ್ಲಿ ಸೈಮನ್ ಕಮಿಷನ್‌ಗೆ ಬಹಿಷ್ಕಾರ ಹಾಕುವ ಒಂದು ಸಭೆಯ ಅಧ್ಯಕ್ಷತೆ ವಹಿಸಿದ್ದರು. ಕಲ್ಕತ್ತಾದ ಒಂದು ಯುವ ಅಧಿವೇಶನದಲ್ಲಿ ಲೋಹಿಯಾ ಅವರಿಗೆ ಪಂಡಿತ್ ನೆಹರೂ ಅವರ ಸಂಪರ್ಕ ಆಯಿತು. ಅಂದಿನಿಂದ ಅವರಿಬ್ಬರ ನಡುವೆ ನಿಕಟ ಸಂಬಂಧವೇರ್ಪಟ್ಟಿತು.

1933 ರಲ್ಲಿ , ಡಾ|| ಲೋಹಿಯಾ ಬರ್ಲಿನ್‌ನಿಂದ ಹಿಂತಿರುಗಿ ಬಂದ ಮೇಲೆ, ಕಾಂಗ್ರೆಸ್ಸಿನಲ್ಲಿ ಒಂದು ಐತಿಹಾಸಿಕ ಬೆಳವಣಿಗೆ ಉಂಟಾಯಿತು. ಇಂಡಿಯನ್ ನ್ಯಾಷನಲ್ ಕಾಂಗ್ರೆಸ್ಸಿನ ಒಳಗೇ ಕಾಂಗ್ರೆಸ್ ಸಮಾಜವಾದಿ ಪಕ್ಷವೊಂದು ರೂಪುಗೊಂಡಿತು. ಲೋಹಿಯಾ ಅವರು ಈ ಪಕ್ಷದ ಉಗಮಕ್ಕೆ ಮುಖ್ಯ ಕಾರಣರಾದರು ಮತ್ತು ಅದರ ಆಧಾರಸ್ತಂಬಗಳಲ್ಲಿ ಒಬ್ಬರು ಎಂದು ಪರಿಗಣಿತರಾದರು. ಈ ಪಕ್ಷವು ಸಮಾಜವಾದವೇ ತನ್ನ ಧ್ಯೇಯೋದ್ದೇಶ, ಮಾರ್ಕ್ಸ್ ಸಿದ್ಧಾಂತವೊಂದೇ ಸಾಮ್ರಾಜ್ಯಶಾಹಿ ವಿರುದ್ಧ ಹೋರಾಡುವ ಶಕ್ತಿಗಳನ್ನು ತಮ್ಮ ಗುರಿಯತ್ತ ಕೊಂಡೊಯ್ಯಬಲ್ಲದು ಎಂದು ಹೇಳಿತು ಮತ್ತು ಕಾಂಗ್ರೆಸ್ಸಿನಲ್ಲೂ ಸಹ ಪ್ರಜಾಪ್ರಭುತ್ವ ಸ್ವರೂಪ ಇರಬೇಕು ಎಂದು ಒತ್ತಾಯಿಸಿತು.

ಯುವ ಲೋಹಿಯಾ ಅವರನ್ನು 1936 ರಲ್ಲಿ ಕಾಂಗ್ರೆಸ್ ಪಕ್ಷದ ವಿದೇಶ ವ್ಯವಹಾರ ವಿಭಾಗದ ಕಾರ್ಯದರ್ಶಿಯನ್ನಾಗಿ ಮಾಡಲಾಯಿತು. 1938 ರ ಆಗಸ್ಟ್ ವರೆಗೂ ಆ ಸ್ಥಾನದಲ್ಲಿದ್ದ ಲೋಹಿಯಾ ಅವರು ಬಹಳ ವಿಶಿಷ್ಟವಾಗಿ ಕಾರ್ಯ ನಿರ್ವಹಿಸಿದರು. ಕಾಂಗ್ರೆಸ್ಸಿನ ವಿದೇಶ ವ್ಯವಹಾರದ ಕಾರ್ಯದರ್ಶಿಯಾಗಿ ಲೋಹಿಯಾ ಅವರು ಭಾರತದ ವಿದೇಶಾಂಗ ನೀತಿಯ ತಳಹದಿ ಹಾಕುವುದಕ್ಕೆ ಕಾರಣಕರ್ತರಾದರು. ವಿಶ್ವದ ಇತರ ಭಾಗಗಳಲ್ಲಿ ಆಗ ನಡೆಯುತ್ತಿದ್ದ ಸ್ವಾತಂತ್ರ್ಯ ಚಳುವಳಿಗಳೊಂದಿಗೆ ಇವರು ನಿಕಟ ಸಂಪರ್ಕ ಇಟ್ಟುಕೊಂಡಿದ್ದರು . ಏಷ್ಯಾ , ಆಫ್ರಿಕಾ ಮತ್ತು ಲ್ಯಾಟಿನ್ ಅಮೆರಿಕಾದ ಪ್ರಗತಿಪರ ಸಂಘಟನೆಗಳೊಂದಿಗೆ ನಿಕಟ ಸಂಬಂಧಗಳನ್ನು ಬೆಳೆಸಿಕೊಂಡರು. ಕಾರ್ಯದರ್ಶಿಯಾಗಿ ''ಇಂಡಿಯನ್ ನ್ಯಾಷನಲ್ ಕಾಂಗ್ರೆಸ್ ಹಾಗೂ ಬ್ರಿಟಿಷ್ ಲೇಬರ್ ಪಕ್ಷಗಳ ವಿದೇಶಾಂಗ ನೀತಿಗಳು'' ಎಂಬ ಒಂದು ಲೇಖನವನ್ನು ಬರೆದರು. ಇದನ್ನು ''ಅಪೂರ್ವ ಗುಣಮಟ್ಟದ ಕೃತಿ'' ಎಂದು ಪಂಡಿತ ನೆಹರೂ ಬಣ್ಣಿಸಿದ್ದಾರೆ.

ವಿದೇಶಗಳಲ್ಲಿರುವ ಭಾರತೀಯರ ಸಮಸ್ಯೆಗಳನ್ನು ಲೋಹಿಯಾ ಅವರು ಅರಿತಿದ್ದರು ಮತ್ತು ಭಾರತದ ಜನತೆಗೆ ಅವರ ದಾರುಣ ಸ್ಥಿತಿಯನ್ನು ವಿವರಿಸಿದರು.

ಭಾರತ ಮತ್ತು ಇತರ ರಾಷ್ಟ್ರಗಳಲ್ಲಿ ನಾಗರಿಕ ಸ್ವಾತಂತ್ರ್ಯ ಹೇಗೆ ದಮನಕ್ಕೆ ಈಡಾಗಿದೆ ಎಂಬುದನ್ನು ಜಗತ್ತಿನ ಗಮನಕ್ಕೆ ತಂದರು. 1939 ರ ಮೇ 24 ರಂದು ಅವರನ್ನು ಸರ್ಕಾರದ ವಿರುದ್ಧ ಭಾಷಣಗಳನ್ನು ಮಾಡಿದ್ದಕ್ಕಾಗಿ ಬಂಧಿಸಲಾಯಿತು. ಇದೇ ಅವರ ಮೊದಲ ಕಾರಾವಾಸ. ಆದರೆ ಮರುದಿನವೇ ಜಾಮೀನಿನ ಮೇಲೆ ಬಿಡಲಾಯಿತು. ರಾಷ್ಟ್ರಕ್ಕೆ ಸ್ವಾತಂತ್ರ ತಂತಾನೆ ದಕ್ಕುವುದಿಲ್ಲ ಎಂಬುದು ಅವರ ಅಭಿಪ್ರಾಯವಾಗಿತ್ತು. ಆದ್ದರಿಂದ ಲೇಖನಗಳು ಮತ್ತು ಕರಪತ್ರಗಳನ್ನು ಬರೆದು ಅವರು ಜನರಲ್ಲಿ ಜಾಗೃತಿ ಮೂಡಿಸಿದರು.

ಎರಡನೇ ವಿಶ್ವ ಮಹಾಯುದ್ಧದಲ್ಲಿ, ಭಾರತವು ಬ್ರಿಟಿಷರಿಗೆ ಯಾವುದೇ ಬೆಂಬಲ ನೀಡಬಾರದು ಎಂಬ ನಿಲುವು ಅವರದ್ದು. ಪರಿಪೂರ್ಣ ಅಸಹಕಾರವನ್ನು ಬೋಧಿಸಿದರು. ಅಂದಿನ ಸರ್ಕಾರಕ್ಕೆ ಜನವನ್ನಾಗಲಿ ಧನವನ್ನಾಗಲಿ ಕೊಡಬಾರದು ಎಂದು ಹೇಳಿದರು. ಅಖಿಲ ಭಾರತ ಕಾಂಗ್ರೆಸ್ ಸಮಿತಿ, 1939 ರಲ್ಲಿ, ಸಂಯುಕ್ತ ರಾಷ್ಟ್ರಕ್ಕೆ ಅದರ ಯುದ್ಧದ ಹೋರಾಟದಲ್ಲಿ ಬೆಂಬಲ ನೀಡಬೇಕು ಎಂಬ ಠರಾವನ್ನು ಅಂಗೀಕರಿಸಿದಾಗ ಲೋಹಿಯಾ ಅದನ್ನು ವಿರೋಧಿಸಿದರು ಮತ್ತು ''ಡೌನ್ ವಿತ್ ಅರ್ಮಮೆಂಟ್ಸ್'' ಎಂಬ ಲೇಖನ ಬರೆದರು. 1940 ರಲ್ಲಿ ಯುದ್ಧ ವಿರೋಧಿ ಭಾಷಣಗಳನ್ನು ಮಾಡಿದ್ದಕ್ಕಾಗಿ ಅವರನ್ನು ಬಂಧಿಸಲಾಯಿತು. ಮಹಾತ್ಮ ಗಾಂಧಿಯವರಿಗೆ ಇದು ಹಿಡಿಸಲಿಲ್ಲ ಮತ್ತು ತೀವ್ರ ಪ್ರತಿಕ್ರಿಯೆ ವ್ಯಕ್ತಪಡಿಸಿದರು. ಈ ಕ್ರಮವನ್ನು ಖಂಡಿಸುತ್ತಾ ಗಾಂಧೀಜಿಯವರು, ರಾಷ್ಟ್ರಭಕ್ತರಾದ ರಾಮಮನೋಹರ ಲೋಹಿಯಾ ಹಾಗೂ ಜಯಪ್ರಕಾಶ್ ಅವರುಗಳನ್ನು ಸೆರೆವಾಸಕ್ಕೀಡು ಮಾಡಿದ್ದನ್ನು ಸಹಿಸಲಾಗುವುದಿಲ್ಲ, ಜನತೆಯ ಸ್ವಾತಂತ್ರ್ಯಕ್ಕೆ ಮಾಡಿದ ಇಂತಹ ಅತಿಕ್ರಮವನ್ನು ತಾನು ಕೇವಲ ಮೂಕ ಸಾಕ್ಷಿಯಾಗಿ ನೋಡುತ್ತಾ ಕುಳಿತುಕೊಳ್ಳುವುದಿಲ್ಲ ಎಂದರು. 1940 ರಲ್ಲಿ ಗಾಂಧೀಜಿಯವರು ಆರಂಭಿಸಿದ ವ್ಯಕ್ತಿಗತ ನಾಗರಿಕ ಅಸಹಕಾರ ಚಳುವಳಿಯನ್ನು ಪ್ರಜಾಸತ್ತಾತ್ಮಕ ಸ್ವಾತಂತ್ರ್ಯ ಪಡೆಯಲು ಜನತೆಗಿರುವ ಹಕ್ಕನ್ನು ಒತ್ತಿ ಹೇಳಿ ಮನದಟ್ಟು ಮಾಡಿಸಲೆಂದೇ ರೂಪಿಸಲಾಗಿತ್ತು.

1942ರ 'ಕ್ವಿಟ್ ಇಂಡಿಯಾ' ಚಳುವಳಿಯಲ್ಲಿ ಲೋಹಿಯಾ ಅವರು ಬಹಳ ಗಮನಾರ್ಹ ಪಾತ್ರ ವಹಿಸಿದರು. ಭೂಗತರಾಗಿ ಈ ಚಳುವಳಿಗೆ ಚಾಲನೆ ನೀಡಿದರು ಸುಮಾರು ಎರಡು ವರ್ಷಗಳವರೆಗೆ ಅವರನ್ನು ಪತ್ತೆ ಹಚ್ಚುವುದು ಸಾಧ್ಯವಾಗಲಿಲ್ಲ. ಅವರು ಒಂದು ಭೂಗತ ರೇಡಿಯೋ ಕೇಂದ್ರವನ್ನು ಸ್ಥಾಪಿಸಿದರು. ತಮಗೆ ದೊರೆತ ಕಾಲಾವಧಿಯನ್ನು ಸ್ಫೂರ್ತಿದಾಯಕ ಕಿರುಪುಸ್ತಕಗಳು, ಕರಪತ್ರಗಳು ಮತ್ತು ಲೇಖನಗಳನ್ನು ಬರೆಯಲು ಬಳಸಿಕೊಂಡರು. ಅವರ ಕೆಲವು ಲೇಖನಗಳ ಶೀರ್ಷಿಕೆ ಹೀಗಿವೆ. ''ಸ್ವತಂತ್ರ ಸರ್ಕಾರವನ್ನು ಹೇಗೆ ಸ್ಥಾಪಿಸಬಹುದು'' ''ನಾನು ಸ್ವತಂತ್ರ'' ''ಕ್ರಾಂತಿಗೆ ಸಿದ್ಧರಾಗಿ''

ಮತ್ತು ''ಧೀರ ಹೋರಾಟಗಾರರೇ ಮುನ್ನುಗ್ಗಿ''. ಇದೇ ಕಾಲದಲ್ಲಿ ''ಮಾಡು ಅಥವಾ ಮಡಿ'' ಎಂಬ ಪತ್ರಿಕೆಯನ್ನು ಪ್ರಕಟಿಸಿದರು. ಅವರು ಭೂಗತರಾಗಿದ್ದಾಗಲೇ ''ಮಾರ್ಕ್ಸ್ ತರುವಾಯ ಅರ್ಥಶಾಸ್ತ್ರ'' ಎಂಬ ಪಾಂಡಿತ್ಯ ಪೂರ್ಣ ಲೇಖನವೊಂದನ್ನು ಬರೆದರು. 1944ರ ಮೇ 20 ರಂದು ಅವರನ್ನು ದಸ್ತಗಿರಿ ಮಾಡಲಾಯಿತು ಮತ್ತು 1946 ರ ಏಪ್ರಿಲ್ 11ರ ವರೆಗೆ ಕಾರಾವಾಸದಲ್ಲಿರಿಸಲಾಯಿತು. ಅವರು ಗೋವಾ ಹಾಗೂ ನೇಪಾಳದ ಜನತೆಯ ಸ್ವಾತಂತ್ರ್ಯಕ್ಕಾಗಿ ಕೂಡ ಹೋರಾಡಿದರು. ಭಾರತದ ಸ್ವಾತಂತ್ರ್ಯ ಚಳುವಳಿ, ಗೋವಾ, ನೇಪಾಳಗಳ ಸ್ವಾತಂತ್ರ್ಯ ಚಳುವಳಿ, ಸ್ವತಂತ್ರ ಭಾರತ ಹಾಗೂ ಅಮೇರಿಕಾದಲ್ಲಿ ನಾಗರೀಕ ಅಸಹಕಾರ ಆಂದೋಲನಗಳಲ್ಲಿ ಭಾಗವಹಿಸಿದ್ದಕ್ಕಾಗಿ ಡಾ|| ಲೋಹಿಯಾ ಅವರು ಸುಮಾರು ಇಪ್ಪತ್ತೈದು ಬಾರಿ ದಸ್ತಗಿರಿ ಆಗಿದ್ದಾರೆ.

**ಸಮಾಜವಾದಿಯಾಗಿ :**

1947 ರಲ್ಲಿ ಕಾಂಗ್ರೆಸ್ ಸಮಾಜವಾದಿ ಪಕ್ಷವು ಕಾಂಗ್ರೆಸ್ಸಿನ ಒಂದು ಅಂಗಭಾಗವಾಗಿಯೇ ಉಳಿದಿದ್ದರೂ ಕಾನ್ಪುರದಲ್ಲಿ ನಡೆದ ಒಂದು ಸಮಾವೇಶದಲ್ಲಿ ತನ್ನ ಹೆಸರಿನಿಂದ ಕಾಂಗ್ರೆಸ್ ಪದವನ್ನು ತೆಗೆದುಹಾಕಿ, ಕೇವಲ ''ಸಮಾಜವಾದಿ ಪಕ್ಷ'' ಎಂಬ ಹೆಸರನ್ನು ಉಳಿಸಿಕೊಂಡಿತು. 1948 ರಲ್ಲಿ ಲೋಹಿಯಾ ಸ್ಥಾಪಿಸಿದ ಈ ಸಮಾಜವಾದಿ ಪಕ್ಷ ಕಾಂಗ್ರೆಸ್ಸಿನಿಂದ ಬೇರ್ಪಟ್ಟಿತು. 1952 ರಲ್ಲಿ ಪ್ರಜಾ ಸೋಷಿಯಲಿಸ್ಟ್ ಪಕ್ಷ ರೂಪುಗೊಂಡಿತು. 1953 ರಲ್ಲಿ ಲೋಹಿಯಾ ಅವರನ್ನು ಅದರ ಪ್ರಧಾನ ಕಾರ್ಯದರ್ಶಿಯಾಗಿ ಆಯ್ಕೆ ಮಾಡಲಾಯಿತು. 1955 ರಲ್ಲಿ ಈ ಸಮಾಜವಾದಿಗಳು ಹೈದರಾಬಾದ್‌ನಲ್ಲಿ ಸಭೆ ಸೇರಿದರು. ಒಂದು ಹೊಸ ಭಾರತೀಯ ಸಮಾಜವಾದಿ ಪಕ್ಷವು ಲೋಹಿಯಾ ಅವರ ಅಧ್ಯಕ್ಷತೆಯಲ್ಲಿ ರೂಪುಗೊಂಡಿತು.

ಮಹಾನ್ ಸಮಾಜವಾದಿ ಆಗಿದ್ದ ಡಾ|| ಲೋಹಿಯಾ ಅವರು ಪ್ರಜಾಸತ್ತಾತ್ಮಕ ಸಮಾಜವಾದ ಮತ್ತು ಸಂಸದೀಯ ಮಾರ್ಗದ ಮೂಲಕ ಚುನಾಯಿತ ಜನಪ್ರತಿನಿಧಿಗಳಿಗೆ ಅಧಿಕಾರ ದೊರಕಬೇಕೆಂಬ ವಿಚಾರವನ್ನು ನಂಬಿದ್ದವರು. ಆದರೆ ಪ್ರತಿಯೊಂದು ಸಾಮಾಜಿಕ, ಆರ್ಥಿಕ ಮತ್ತು ರಾಜಕೀಯ ಅನ್ಯಾಯದ ವಿರುದ್ಧವೂ ನೇರವಾದ ಅಹಿಂಸಾತ್ಮಕವಾದ ಕ್ರಮವನ್ನು ಕೈಗೊಳ್ಳಬೇಕೆಂಬ ವಿಚಾರವನ್ನು ಬೆಂಬಲಿಸುತ್ತಿದ್ದರು. ಅವರ ಸೃಜನಶೀಲ ಮನಸ್ಸು ಹೊಸ ಹೊಸ ವಿಚಾರಗಳ ಬಗ್ಗೆ ಒಲವು ತೋರುತ್ತಿತ್ತು ಮತ್ತು ಸಾಮಾಜಿಕ, ರಾಜಕೀಯ, ಆರ್ಥಿಕ ಹಾಗೂ ವೈಚಾರಿಕ ಸಮಸ್ಯೆಗಳಿಗೆ ಸೈದ್ಧಾಂತಿಕ ವಿಧಾನದಲ್ಲಿ ಕ್ರಮಕ್ಕೆ ಗೊಳ್ಳಲೆಳಸುವುದನ್ನು ಒಪ್ಪುತ್ತಿರಲಿಲ್ಲ. ಎಲ್ಲ ಬಗೆಯ ಅನ್ಯಾಯದ ವಿರುದ್ಧ ಅವಿರತ ಹೋರಾಟ ನಡೆಸುತ್ತಿದ್ದ ಅವರು ಸಾಮಾಜಿಕ ಸಮಾನತೆ ಹಾಗೂ

ಸಮಾಜದಲ್ಲಿ ಸಾಮಾಜಿಕವಾಗಿ ದಲಿತರಾಗಿದ್ದ ಜನವರ್ಗಕ್ಕೆ ಅವರು ಶತಶತಮಾನಗಳಿಂದ ಅನುಭವಿಸಿಕೊಂಡುಬಂದ ಸಂಕಷ್ಟ ಪರಿಹರಿಸುವುದಕ್ಕಾಗಿ ಅವರಿಗೆ ಅವಕಾಶಗಳಲ್ಲಿ ಆದ್ಯ ಪುರಸ್ಕಾರ ದೊರೆಯಬೇಕೆಂದು ವಾದಿಸುತ್ತಿದ್ದರು.

ಡಾ॥ ಲೋಹಿಯಾ ಅವರು ಕೆಟ್ಟದ್ದನ್ನು ಪ್ರತಿಭಟಿಸುವುದಕ್ಕೆ ಹೆಚ್ಚಿನ ಒತ್ತು ನೀಡುತ್ತಿದ್ದರಾದರೂ, ಸೃಜನಶೀಲ ಚಟುವಟಿಕೆಗಳ ಮಹತ್ತ್ವವನ್ನೂ ಅರಿತಿದ್ದರು. ರಾಜಕೀಯ ಹಾಗೂ ಅಧಿಕಾರ ಎರಡೂ ಬೇರೆಬೇರೆ ಅಲ್ಲ ಎಂಬುದು ಅವರ ಅಭಿಪ್ರಾಯ. ಆದ್ದರಿಂದ ರಾಜಾಧಿಕಾರವನ್ನು ಜನಾಧಿಕಾರದಿಂದ ನಿಯಂತ್ರಿಸಿ, ಮಾರ್ಗದರ್ಶನ ನೀಡಿ ಪಳಗಿಸಬೇಕೆಂಬ ವಿಚಾರಕ್ಕೆ ಬೆಂಬಲ ನೀಡುತ್ತಿದ್ದರು. ಅದನ್ನು ಸಾಕಾರಗೊಳಿಸಲು ಜೈಲು, ಗುದ್ದಲಿ ಮತ್ತು ಓಟು ಒಡಗೂಡಿದ ಒಂದು ಸೂತ್ರವನ್ನು ರಾಷ್ಟ್ರದಲ್ಲಿ ಸಾಮಾಜಿಕ ಕ್ರಾಂತಿಯ ಸಾಧನೆಗಾಗಿ ಪ್ರತಿಪಾದಿಸಿದರು. ಯುವಕರು ರಾಷ್ಟ್ರಪುನರ್ ನಿರ್ಮಾಣಕ್ಕಾಗಿ ''ಒಂದು ಗಂಟೆಕಾಲ ಶ್ರಮದಾನ'' ಮಾಡಬೇಕೆಂದು ಕರೆ ಇತ್ತರು.

ಸಮಾಜವಾದಿ ಚಿಂತನೆಯಲ್ಲಿ ಗಾಂಧಿ ವಿಚಾರಧಾರೆಯನ್ನು ಸಮ್ಮಿಳನಗೊಳಿಸಿದ್ದೇ ಭಾರತೀಯ ರಾಜಕೀಯ ಚಿಂತನೆಗೆ ಅವರಿತ್ತ ಪ್ರಮುಖ ಕೊಡುಗೆ. ವಿಕೇಂದ್ರೀಕೃತ ಅರ್ಥವ್ಯವಸ್ಥೆಯನ್ನು ದೃಢವಾಗಿ ನಂಬಿದ್ದ ಇವರು ಕಡಿಮೆ ಬಂಡವಾಳ ಹೂಡಿ ಗರಿಷ್ಠ ಮಾನವಶಕ್ತಿಯನ್ನು ಬಳಸಲು ಅನುವುಮಾಡಿಕೊಡುವಂತಹ ಸಣ್ಣ ಯಂತ್ರಗಳುಳ್ಳ ಗುಡಿ ಕೈಗಾರಿಕೆ ಸ್ಥಾಪಿಸುವುದು ಅವಶ್ಯ ಎಂದು ಒತ್ತಿ ಹೇಳುತ್ತಿದ್ದರು.

ಭಾರತ ಹಳ್ಳಿಗರ ದೇಶ ಎಂಬುದನ್ನು ಲೋಹಿಯಾ ಅವರು ಚೆನ್ನಾಗಿ ಅರಿತಿದ್ದರು. ಆದ್ದರಿಂದ, ಅವರು ಬಡರೈತರ, ಭೂರಹಿತರ ಮತ್ತು ಕೃಷಿ ಕಾರ್ಮಿಕರ ಅಭೀಪ್ಸೆಯ ಸಂಕೇತವಾದರು. 1947 ರಿಂದಲೂ ಅವರು ರೈತರ ಜಾಥಾಗಳನ್ನು ಮತ್ತು ಹೋರಾಟಗಳನ್ನು ಸಂಘಟಿಸಿದರು. ನಮ್ಮ ಸಾಮಾಜಿಕ ಸಂಬಂಧಗಳಲ್ಲಿ ಮೂಲಭೂತ ಪುನರ್‌ವ್ಯವಸ್ಥೆಯಾಗಬೇಕಾದುದು ಅಗತ್ಯ ಎಂದು ವಾದಿಸಿದ್ದಷ್ಟೇ ಅಲ್ಲ, ಈ ಕ್ರಾಂತಿಕಾರಿ ಬದಲಾವಣೆಗೆ ಒಂದು ಸೈದ್ಧಾಂತಿಕ ನೆಲೆಗಟ್ಟನ್ನು ಒದಗಿಸಿದರು. ಅವರು ಯಾವಾಗಲೂ ಸಾಮ್ರಾಜ್ಯಶಾಹಿ ವಿರೋಧಿ ಹಾಗೂ ವಸಾಹತು ಶಾಹಿ ವಿರೋಧಿ ಆಂದೋಲನಕ್ಕೆ ಬೆಂಬಲವಾಗಿದ್ದರು. 1964 ರಲ್ಲಿ, ನೀಗ್ರೋಗಳಿಗೆ ಸಮಾನಹಕ್ಕು ದೊರಕಬೇಕೆಂಬ ಚಳುವಳಿಯಲ್ಲಿ ಭಾಗವಹಿಸಿದ್ದಕ್ಕಾಗಿ ಅಮೇರಿಕನ್ ಸರ್ಕಾರ ಅವರನ್ನು ದಸ್ತಗಿರಿ ಮಾಡಿತು.

ಸಾಮಾಜಿಕ ಸಮಾನತೆಯ ನಿರಂತರ ಹೋರಾಟಗಾರರಾಗಿ ಇವರು ಜಾತಿ ಪದ್ಧತಿ ಮತ್ತು ಹುಟ್ಟನ್ನು ಆಧರಿಸಿದ ಶ್ರೇಣೀಕೃತ ವ್ಯವಸ್ಥೆಯನ್ನು ತೀವ್ರವಾಗಿ ಖಂಡಿಸುತ್ತಿದ್ದರು.

ನಮ್ಮ ದೇಶದ ಅವನತಿಗೆ ಮತ್ತು ಪದೇಪದೇ ಪರಕೀಯರ ಆಕ್ರಮಣ ಮತ್ತು ವಿದೇಶಿಯರ ಆಳ್ವಿಕೆಗೆ ಒಳಗಾದುದಕ್ಕೆ ಇದೇ ಮೂಲ ಕಾರಣ ಎಂದು ಅವರು ಪರಿಗಣಿಸಿದ್ದರು. ''ಜಾತಿ ಪದ್ಧತಿ ತೊಲಗಿಸಿ'' ಆಂದೋಲನ ವನ್ನು ಅವರು ಪ್ರಾರಂಭಿಸಿದರು. ಪರಂಪರಾನುಗತವಾಗಿ ಅಸಮಾನತೆ ಉಳ್ಳ ಸಮಾಜದಲ್ಲಿ , ಕೇವಲ ಎಲ್ಲರಿಗೂ ಸಮಾನ ಅವಕಾಶ ಕಲ್ಪಿಸುವುದರಿಂದ ಸಮಾನತೆ ತರುವುದು ಸಾಧ್ಯವಿಲ್ಲ ಎಂದು ಅವರು ಘೋಷಿಸಿದರು. ಹಿಂದುಳಿದ ವರ್ಗಗಳು, ಮಹಿಳೆಯರು, ಹರಿಜನರು, ಆದಿವಾಸಿಗಳು ಮತ್ತು ಅಲ್ಪಸಂಖ್ಯಾತರಲ್ಲಿರುವ ಹಿಂದುಳಿದವರಿಗೆ ಅವರನ್ನು ಮುಂದುವರಿದವರ ಮಟ್ಟಕ್ಕೆ ತರುವುದಕ್ಕಾಗಿ ವಿಶೇಷ ಅವಕಾಶಗಳನ್ನು ಕಲ್ಪಿಸಿ ಕೊಡಬೇಕೆಂದು ಅವರು ಹೇಳಿದರು.

ಡಾ|| ಲೋಹಿಯಾ ಅವರದು ವಿಶ್ವಮಾನದ ದೃಷ್ಟಿ. ಒಂದು ರಾಷ್ಟ್ರ ಅಥವಾ ಒಂದು ಜನಾಂಗದ ಸೀಮಿತ ರೇಖೆಯೊಳಗೆ ವಿಹರಿಸದೆ ಮಾನಸಿಕ ನಾಗರಿಕತ್ವ ಹಾಗೂ ಆದರ್ಶಗಳ ನಾಗರಿಕತ್ವದ ಕಲ್ಪನೆಗೆ ಆವರು ಒಲಿದಿದ್ದರು. ವಿಶ್ವಾದ್ಯಾಂತ ಸಂಚರಿಸಿದ್ದ ಅವರು ವಿಶ್ವದ ಒಂದು ನಾಡಿನಿಂದ ಇನ್ನೊಂದು ನಾಡಿಗೆ ಯಾವುದೇ ರಹದಾರಿ ಅಥವಾ ವೀಸಾ ಇಲ್ಲದೆ ಸಂಚರಿಸಲು ಮುಕ್ತ ಅವಕಾಶವುಳ್ಳ ಒಂದು ಅಂತಾರಾಷ್ಟ್ರೀಯ ವ್ಯವಸ್ಥೆಯ ಕನಸನ್ನು ಕಾಣುತ್ತಿದ್ದರು. ವಿಶ್ವ ಸಂಪತ್ತು ಹಾಗೂ ವಿಶ್ವಸರ್ಕಾರವೊಂದು ಸ್ಥಾಪಿತವಾಗಬೇಕು. ಅದಕ್ಕೆ ಸಾರ್ವಭೌಮ ರಾಷ್ಟ್ರಗಳು ಸ್ವಯಿಚ್ಛೆಯಿಂದ ತಮ್ಮ ಸಾರ್ವಭೌಮತ್ವದ ಒಂದು ಅಂಶವನ್ನು ವರ್ಗಾಯಿಸಬೇಕು ಎಂಬುದು ಅವರ ವಿಚಾರವಾಗಿತ್ತು. 1949 ರಲ್ಲಿ ನಡೆದ ವಿಶ್ವಸರ್ಕಾರ ಕುರಿತ ಸಮ್ಮೇಳನಕ್ಕೆ ಅವರನ್ನು ಭಾರತದ ಪ್ರತಿನಿಧಿಯಾಗಿ ಆಯ್ಕೆ ಮಾಡಲಾಗಿತ್ತು.

ಕ್ರಾಂತಿಯ ವಿಚಾರದಲ್ಲೂ ಲೋಹಿಯಾ ಅವರಿಗೆ ತಮ್ಮದೇ ವಿಚಾರಗಳಿದ್ದವು. ಈ ಮುಂದಿನ ಯಾವುದಾದರೂ ಪರಿಸ್ಥಿತಿ ಒದಗಿದಾಗ ಕ್ರಾಂತಿ ನಡೆಸುವುದು ಸೂಕ್ತ ಎನ್ನುತ್ತಿದ್ದರು (i) ಮಹಿಳೆಯರು ಮತ್ತು ಪುರುಷರ ನಡುವೆ ಸಂಪೂರ್ಣ ಸಮಾನತೆ ಉಂಟು ಮಾಡಲು ದಂಗೆ ಏಳುವುದು; (ii) ಮೈ ಬಣ್ಣದ ಆಧಾರದ ಮೇಲೆ ಆರ್ಥಿಕ, ರಾಜಕೀಯ ಮತ್ತು ಸಾಮಾಜಿಕ ತಾರತಮ್ಯಮಾಡುವುದರ ವಿರುದ್ಧ ದಂಗೆ ಏಳುವುದು; (iii) ಹುಟ್ಟಿನ ಆಧಾರದ ಮೇಲೆ ಪರಂಪರಾನುಗತ ಜಾತಿ ಕಲ್ಪನೆಯ ವಿರುದ್ಧ ಹಾಗೂ ಹಿಂದುಳಿದವರಿಗೆ ವಿಶೇಷಾವಕಾಶ ಕಲ್ಪಿಸುವುದಕ್ಕಾಗಿ ದಂಗೆ ಏಳುವುದು; (iv) ವಿದೇಶಿ ಆಳ್ವಿಕೆಯನ್ನು ಕಿತ್ತೊಗೆ ಯುವುದಕ್ಕಾಗಿ, ಸ್ವಾತಂತ್ರ್ಯಕ್ಕಾಗಿ ಮತ್ತು ಪ್ರಜಾಸತ್ತಾತ್ಮಕ ಸರ್ಕಾರದ ಸ್ಥಾಪನೆಗಾಗಿ ದಂಗೆ ಏಳುವುದು; (v) ಬಂಡವಾಳ ಸಂಗ್ರಹದಲ್ಲಿ ಏರುಪೇರು ಆಗುತ್ತಿರುವುದರ ವಿರುದ್ಧ ಮತ್ತು ಆರ್ಥಿಕ ಸಮಾನತೆ ಹಾಗೂ ಉತ್ಪನ್ನದ ಯೋಜಿತ ವೃದ್ಧಿ ಇವುಗಳಿಗಾಗಿ ಹೋರಾಟ; (vi) ನಾಗರಿಕರ ಖಾಸಗಿ

ಬದುಕಿನಲ್ಲಿ ಹಸ್ತಕ್ಷೇಪದ ವಿರುದ್ಧ ಮತ್ತು ಪ್ರಜಾಸತ್ತಾತ್ಮಕ ಆಡಳಿತವನ್ನು ಜಾರಿಗೆ ತರುವುದಕ್ಕಾಗಿ ಹೋರಾಟ; (vii) ಸಾಂಪ್ರದಾಯಕ ಶಸ್ತ್ರಾಸ್ತ್ರ ಹಾಗೂ ಅಣ್ವಸ್ತ್ರಗಳ ವಿರುದ್ಧ ಹಾಗೂ ಸತ್ಯಾಗ್ರಹವು ನ್ಯಾಯಬದ್ಧವಾದ ಅಸ್ತ್ರ ಎಂದು ಪರಿಗಣಿಸಬೇಕೆಂದು ಸಮರ್ಥಿಸಿ ಹೋರಾಟ ನಡೆಸಿದಾಗ ಕ್ರಾಂತಿ ಸಮರ್ಥನೀಯ ಎಂಬುದು ಅವರ ವಿಚಾರವಾಗಿತ್ತು.

**ಜನತಾ ಮುಖಂಡರಾಗಿ**

ಸರಳತೆ ಮತ್ತು ತನ್ನ ದೇಶ ಬಾಂಧವರ ಬಗ್ಗೆ ಇದ್ದ ಅಪಾರ ಪ್ರೀತಿ ಡಾ||ಲೋಹಿಯಾ ಅವರಲ್ಲಿದ್ದ ಬಲು ದೊಡ್ಡಗುಣ. ಜನತೆಯ ನೋವು ನಲಿವುಗಳಿಗೆ ತುಂಬುಹಾಳಜಿಯಿಂದ ಪಡಿಮಿಡಿಯುತ್ತಿದ್ದರು. ಅವರು ಶ್ರದ್ಧಾಭಕ್ತಿ, ಪ್ರೇಮ, ಸಜ್ಜನಿಕೆ, ಅಕ್ರೋಶ ಹಾಗೂ ಕಷ್ಟ ಸಹಿಷ್ಣುತೆಗಳ ಅಪೂರ್ವ ಸಂಗಮ . ನಿರಂತರ ಕ್ರಾಂತಿಕಾರಿಯಾಗಿದ್ದ ಅವರು ಚೈತನ್ಯಶೀಲ ರಾಜಕೀಯ ಹಾಗೂ ಆರ್ಥಿಕ ವಿಚಾರಗಳನ್ನು ಪ್ರತಿಪಾದಿಸಿದ್ದರು. ಜನಸಾಮಾನ್ಯರ ನಾಯಕರಾಗಿದ್ದ ಲೋಹಿಯಾ ಅವರು ಸದಾ ಅವರ ಭಾಷೆಯಲ್ಲಿಯೇ ಮಾತನಾಡುತ್ತಿದ್ದರು. ಲೋಕಸಭೆಯಲ್ಲಿ ಕೋಲಾಹಲ ಎಬ್ಬಿಸುತ್ತಿದ್ದುದಷ್ಟೇ ಅಲ್ಲ, ಸದನದಲ್ಲಿ ಹಾಗೂ ಹೊರಗೆ ವಿಶಾಲವಾದ ರಾಷ್ಟ್ರೀಯ ಬದುಕಿನಲ್ಲೂ ಅಂದಿನ ಸರ್ಕಾರದ ಕಾರ್ಯನೀತಿಯನ್ನು ಜಾಲಾಡುತ್ತಿದ್ದರು.

ನಿಜವಾದ ರಾಷ್ಟ್ರೀಯವಾದಿ ಆಗಿದ್ದ ಅವರು ದೇಶದ ಯುವಕರು ಮತ್ತು ಯುವತಿಯರು ಪಾಶ್ಚಾತ್ಯ ಬದುಕನ್ನು ಅನುಕರಿಸುತ್ತಿರುವುದನ್ನು ವಿರೋಧಿಸುತ್ತಿದ್ದರು. ಅವರು ಭಾರತೀಯ ನಾಗರಿಕತೆಯ ಕಟ್ಟಾ ಅನುಯಾಯಿಗಳಾಗಿದ್ದರು. ಹಿಂದಿ ಭಾಷೆ, ಇತರ ಭಾರತೀಯ ಭಾಷೆಗಳೊಂದಿಗೆ ನಮ್ಮ ರಾಷ್ಟ್ರಭಾಷೆಯಾಗಿ ಅಭಿವೃದ್ಧಿಯಾಗಬೇಕು , ಇಂಗ್ಲಿಷ್ ಭಾರತ ಬಿಟ್ಟು ತೊಲಗಬೇಕೆಂಬುದು ಅವರ ಇಚ್ಛೆಯಾಗಿತ್ತು. ಇಂಗ್ಲಿಷ್ ವ್ಯಾಮೋಹ ಪಾಪದ ಕೆಲಸ ಎಂದು ವರ್ಣಿಸುತ್ತಿದ್ದರು.

ಗಾಂಧೀಜಿಯವರಂತೆ, ಲೋಹಿಯಾ ಅವರೂ, ದಮನಕಾರಿ ಮತ್ತು ಕ್ರೂರ ಕಾನೂನುಗಳು ಹಾಗೂ ನಿಯಮಗಳಿಗೆ ಅವಿಧೇಯತೆ ತೋರುತ್ತಿದ್ದರು. ಅವರಿಗೆ ಅಂಥ ಕಾನೂನು ಮತ್ತು ನಿಯಮಾವಳಿ ಇರುವುದೆ ಅಸಹನೀಯವಾಗಿತ್ತು. ಲೋಹಿಯಾ ಅವರು ವೈಯಕ್ತಿಕವಾಗಿ ಭಾರತದ ವಿಭಜನೆಯನ್ನು ವಿರೋಧಿಸುತ್ತಿದ್ದರು. ಹಿಂದೂ ಮುಸ್ಲಿಂ ಐಕಮತ್ಯ ಸಾಧಿಸಲು ಅವರು ಮನ ಪೂರ್ವಕವಾಗಿ ಪ್ರಯತ್ನಿಸಿದರು. ಭಾರತಕ್ಕೆ ಸ್ವಾತಂತ್ರ್ಯ ಬಂದು ಅದು ವಿಭಜನೆಯಾದಾಗ ಅವರು ಭಾರತದ ವಿವಿಧ ಭಾಗದಲ್ಲಿ ಕೋಮು ಸೌಹಾರ್ದ ಮತ್ತು ಐಕಮತ್ಯವನ್ನು ಕಾಪಾಡಿಕೊಂಡು ಬರುವುದಕ್ಕಾಗಿ ಅವಿರತವಾಗಿ ಮತ್ತು ದಿಟ್ಟತನದಿಂದ ಕೆಲಸ ಮಾಡಿದರು.

**ಲೇಖಕರಾಗಿ :**

ಲೋಹಿಯಾ ಅವರು ಉದ್ದಾಮ ಲೇಖಕರು. ಬಹಳಷ್ಟು ಕೃತಿಗಳನ್ನು ರಚಿಸಿದ್ದಾರೆ. ಅವರ ವಿಚಾರಗಳೆಲ್ಲಾ ಸ್ವೋಪಜ್ಞವಾದವು ಮತ್ತು ಜನಸಮುದಾಯದಲ್ಲಿ ಜಾಗೃತಿಯನ್ನು ಮೂಡಿಸುವಂತಹವು. ಸ್ವಾತಂತ್ರ್ಯ ಚಳುವಳಿಯ ಕಾಲದಲ್ಲಿ ಅವರು ತಮ್ಮ ಬರಹಗಳ ಮೂಲಕ ಜನತೆಗೆ ಸ್ವಾತಂತ್ರ್ಯದ ಹಾದಿಯನ್ನು ತೋರಿಸಿಕೊಟ್ಟರು ಮತ್ತು ಅವರ ಮನದಲ್ಲಿ ತಮ್ಮ ವಿಚಾರಗಳ ಮುದ್ರೆಯನ್ನು ಅಚ್ಚಳಿಯದಂತೆ ಮೂಡಿಸಿದರು. ಅವರ ಪ್ರಕಟಣೆಗಳಲ್ಲಿ ಕೆಲವು ಹೀಗಿವೆ: ''ಸರ್ ಸ್ಟಾಫರ್ಡ್ ಕ್ರಿಪ್ಸ್‌ನ ರಹಸ್ಯ'', ''ಸಮಾಜವಾದಿ ನೀತಿಯ ಮುಖಗಳು'', ''ಇತಿಹಾಸ ಚಕ್ರ'', ''ಸಂಕಲ್ಪ ಶಕ್ತಿ'' ಮತ್ತಿತರ ಲೇಖನಗಳು ''ಭಾರತ ವಿಭಜನೆಯ ತಪ್ಪಿತಸ್ಥರು'', ''ಮಾರ್ಕ್ಸ್ ಗಾಂಧಿ ಮತ್ತು ಸಮಾಜವಾದ'' ''ಭಾರತ, ಚೀನ ಮತ್ತು ಉತ್ತರದ ಗಡಿಗಳು'' 'ಜಾತಿ ಪದ್ಧತಿ', 'ವಿಶ್ವ ಮನಸ್ಸಿನ ತುಣುಕುಗಳು', 'ಭಾಷೆ', ಟಿಪ್ಪಣಿಗಳು ಮತ್ತು ಟೀಕೆಗಳು 'ರಾಜಕೀಯದ ನಡುವೆ ಬಿಡುವು', 'ವಿದೇಶಿನೀತಿ', 'ಕೃಷ್ಣ ವಾಲ್ಮೀಕಿ ಮತ್ತು ವಸಿಷ್ಠ', 'ಕ್ರಾಂತಿಗಾಗಿ ಸಂಘಟನೆ', 'ಭಾರತದಲ್ಲಿ ಕೃಷಿ', 'ಸಮಾಜವಾದ', 'ಹಿಂದುತ್ವ', 'ಇಂಡಿಯಾ ಮತ್ತು ಪಾಕಿಸ್ತಾನ', 'ಹಿಂದು ಮತ್ತು ಮುಸಲ್ಮಾನ' 'ಸಮಾಜವಾದಿ ಏಕತೆ', 'ನಿರಾಶೆಯ ಕರ್ತವ್ಯ', 'ಕ್ರಾಂತಿಕರಣ', 'ಸಾರ್ಕ್ಟ್', 'ಮಠ ಮತ್ತು ಕುಜಾತ ಗಾಂಧಿವಾದಿ', ಅವರು 'ಮ್ಯಾನ್‌ಕೈಂಡ್' ಹಾಗೂ 'ಜನ' ಪತ್ರಿಕೆಗಳ ಸಂಪಾದಕ ಮಂಡಳಿಯ ಅಧ್ಯಕ್ಷರೂ ಆಗಿದ್ದರು.

**ಹೊಸ ಸಿದ್ಧಾಂತಗಳ ಪ್ರವರ್ತಕರಾಗಿ :**

ಮೂಲಭೂತ ವಿಚಾರವಾದಿಯಾಗಿ ಅವರು ಈ ಮುಂದಿನ ವಿಷಯಗಳನ್ನು ಕುರಿತು ತನ್ನ ಸಿದ್ಧಾಂತ ವ್ಯಕ್ತಪಡಿಸಿದರು. ''ಬಂಡವಾಳಶಾಹಿ ಮತ್ತು ಸಾಮ್ರಾಜ್ಯ ಶಾಹಿಗಳ ಅವಳಿ ಉಗಮ'', ''ಸಣ್ಣ ಘಟಕ ಯಂತ್ರ'', ''ಸಮಾನ ಅಸಂಗತತೆ'', 'ಮೂರನೇ ಶಿಬಿರ' 'ಜರೂರು ಅಗತ್ಯ', 'ವರ್ಗ ಮತ್ತು ಜಾತಿ ನಡುವಣ ಆಂದೋಲನ', 'ದಕ್ಷತೆ ಪರಿಪೂರ್ಣ ಅಥವಾ ಗರಿಷ್ಠ', 'ಮಾನವರ ದೈಹಿಕ ಮತ್ತು ಸಾಂಸ್ಕೃತಿಕ ಸಾಮಿಪ್ಯಸಾಧನೆ 'ಶಾಶ್ವತ ನಾಗರಿಕ ಸಹಕಾರ', 'ಸಹಬಾಳ್ವೆ ಮತ್ತು ನಿಕಟತೆ', 'ಸಾಮಾನ್ಯ ಮತ್ತು ಆರ್ಥಿಕ ಗುರಿಗಳ ಸ್ವಾಯತ್ತ ಸಂಬಂಧ ಅಥವಾ ವಸ್ತು ಚೇತನ''. ''ಅಂತರಿಕ ಸಂಘರ್ಷ ಮತ್ತು ವಿದೇಶಿ ಆಕ್ರಮಣಗಳ ವಿಲೋಮ ಸಂಬಂಧ'', ''ಹಿಂದುಳಿದ ವರ್ಗಗಳಿಗೆ ಸಮಾನ ಅವಕಾಶಗಳ ಬದಲು ಆದ್ಯತಾ ಅವಕಾಶಗಳು'' ಮತ್ತು ಏಳು ಕ್ರಾಂತಿಗಳು.

**ಸಂಸದರಾಗಿ :**

ಡಾ॥ ಲೋಹಿಯಾ ಅವರು ಮೂರನೇ ಲೋಕಸಭೆಗೆ ಉತ್ತರ ಪ್ರದೇಶದ ಫರೂಖಾಬಾದ್ ಕ್ಷೇತ್ರದಿಂದ 1963 ರ ಉಪಚುನಾವಣೆಯಲ್ಲಿ ಆಯ್ಕೆಯಾದರು. ಅವರು ಲೋಕಸಭಾ ಸದಸ್ಯರಾಗಿ 1965ರ ಆಗಸ್ಟ್ 13 ರಂದು ಪ್ರಮಾಣ ವಚನ ಸ್ವೀಕರಿಸಿದರು. ಲೋಹಿಯಾ ಅವರು ಲೋಕಸಭೆಗೆ ಕಾಲಿಟ್ಟ ಮೊದಲ ದಿನ ಸದನಕ್ಕೆ ಹೊಸ ಮಿಂಚುಸಂಚಾರವಾದಂತಾಯಿತು. ಸದನದಲ್ಲಿದ್ದ ಎಲ್ಲರೂ ಎದ್ದು ನಿಂತು ಸ್ವಾಗತಿಸಿದರು. ಅವರು ಮೊದಲ ಬಾರಿ ಲೋಕಸಭೆಗೆ ಆಯ್ಕೆಯಾದದ್ದಕ್ಕೆ ದೆಹಲಿಯ ರಾಮಲೀಲಾ ಮೈದಾನದಲ್ಲಿ ನಾಗರೀಕ ಸನ್ಮಾನ ಮಾಡಲಾಯಿತು. 1967ರ ಮಾರ್ಚ್‌ನಲ್ಲಿ ಅವರು ಉತ್ತರ ಪ್ರದೇಶದ ಕನೌಜ್ ಕ್ಷೇತ್ರದಿಂದ ಮತ್ತೆ ನಾಲ್ಕನೇ ಲೋಕಸಭೆಗೆ ಆಯ್ಕೆಯಾದರು.

ತುಂಬುನಿಷ್ಠೆಯ ಸಂಸದರಾದ ಶ್ರೀ ಲೋಹಿಯಾ ಅವರು ಸದನದ ಕಲಾಪದಲ್ಲಿ ತುಂಬಾ ಆಸಕ್ತಿಯಿಂದ ಭಾಗವಹಿಸುತ್ತಿದ್ದರು. ಸಂಸತ್ತಿನ ಚರ್ಚೆ ಮತ್ತು ಸಂವಾದಗಳಿಗೆ ಪೂರ್ಣಸಿದ್ಧರಾಗಿ ಬರುತ್ತಿದ್ದರು. ಅವರ ಲೋಕಸಭಾ ಭಾಷಣಗಳು ಭಾರತದ ರಾಜಕೀಯ ಚಿಂತನೆಗೆ ಹೊಸ ತಿರುವು ನಿಡುತ್ತಿದ್ದವು ಮತ್ತು ಚಿಂತನೆಗೆ ನಿಜವಾದ ಆಹಾರ ಒದಗಿಸುತ್ತಿದ್ದವು. ಅದು ಅಲಿಪ್ತ ನೀತಿಕುರಿತ ವಿಷಯವಾಗಿರಲಿ ಅಥವಾ ಭ್ರಷ್ಟಾಚಾರದ ಸಮಸ್ಯೆಯಾಗಿರಲಿ ಅವರು ಅಂದಿನ ಸರ್ಕಾರವನ್ನು ತರಾಟೆಗೆ ತೆಗೆದು ಕೊಳ್ಳುತ್ತಿದ್ದರು. ಸರ್ಕಾರದ ನೀತಿಯ ಪೊಳ್ಳುತನವನ್ನು ಅವರು ಸದನದಲ್ಲಿ ತಮ್ಮ ಭಾಷಣದಲ್ಲಿ ಬೊಟ್ಟು ಮಾಡಿ ತೋರಿಸುತ್ತಿದ್ದರು. ಪ್ರಧಾನ ಮಂತ್ರಿ ಇರಬಹುದು ಅಥವಾ ಇತರ ಯಾರೇ ಮಂತ್ರಿ ಇರಬಹುದು ಅವರು ಯಾರನ್ನೂ ಬಿಡುತ್ತಿರಲಿಲ್ಲ. ಯಾವುದೇ ಅಕ್ರಮ ಅಥವಾ ಯಾವುದೇ ಅನ್ಯಾಯ ಆಗಿರಲಿ ಅವರು ಸದಾ ಜಾಗೃತರಾಗಿದ್ದು ಅದನ್ನು ಸದನದಲ್ಲಿ ಪ್ರಶ್ನಿಸುತ್ತಿದ್ದರು. ''ಮೂರು ಆಣೆ ವಿರುದ್ಧ ಹದಿನೈದು ಆಣೆ' ಎಂದೇ ಪ್ರಸಿದ್ಧವಾದ, ಸದನದ ಚರ್ಚೆಯಲ್ಲಿ ಅವರು ಮಾಡಿದ ವಾದವು ದೇಶದ ಜನತೆಗೆ ಕಣ್ತೆರೆಸುವಂತಿತ್ತು. ಅಂದಿನ ಸರ್ಕಾರವು , ''ದೇಶದ ಶ್ರೀಸಾಮಾನ್ಯರ ಸರಾಸರಿ ಆದಾಯ 15 ಆಣೆ'' ಎಂದು ನೀಡಿದ್ದ ಹೇಳಿಕೆ ತಪ್ಪು ದಾರಿಗೆ ಎಳೆಯುವಂತಹದ್ದು ಮತ್ತು ಅಪ್ಪಟ ಸುಳ್ಳು ಎಂದು ಅವರು ಖಚಿತವಾಗಿ ಆರೋಪಿಸಿದರು. ಅಂಕಿ ಅಂಶಗಳನ್ನು ನೀಡಿ ಅವರು ಆ ಕಾಲದಲ್ಲಿ ಭಾರತದ ಪ್ರತಿ ಯೊಬ್ಬ ವ್ಯಕ್ತಿಯ ಸರಾಸರಿ ಆದಾಯ ದಿನಕ್ಕೆ ಮೂರೂವರೆ ಆಣೆ ಅಥವಾ ನಾಲ್ಕು ಆಣೆ. ಎಂಬುದನ್ನು ರುಜುವಾತು ಪಡಿಸಿದರು. ಇವರ ಮಾತುಗಳಿಂದ ಸ್ಫೂರ್ತಿಗೊಂಡು ಅವರ ನೇತೃತ್ವದಲ್ಲಿ 1964 ರ ಮಾರ್ಚ್ 13 ರಂದು ದೆಹಲಿಯಲ್ಲಿ 'ಜನವಾಣಿ ದಿನ' ವನ್ನು ಆಚರಿಸಲಾಯಿತು.

ಲೋಹಿಯಾ ಅವರಂಥ ಮೇಧಾವಿ ಬಹುಕಾಲ ಬದುಕುಳಿಯದಿದ್ದುದು ಅತ್ಯಂತ ದುರದೃಷ್ಟದ ಸಂಗತಿ. ಸ್ವೋಪಜ್ಞ ವಿಚಾರವಾದಿ, ಅನುಪಮನೇತಾರ ಮತ್ತು ಅಗ್ರಗಣ್ಯ ಸಂಸದರೂ, ಹಾಗೂ ಹೋರಾಟಗಾರರೂ ಆದ ಡಾ|| ಲೋಹಿಯಾ ಅವರು 1967 ರ ಅಕ್ಟೋಬರ್ 12 ರಂದು ನವದೆಹಲಿಯಲ್ಲಿ ಕಾಲವಶರಾದರು. ಆಗ ಅವರಿಗೆ 57 ವರ್ಷ ವಯಸ್ಸು. ಅವರ ಮರಣದ ಸುದ್ದಿ ಕಾಳ್ಗಿಚ್ಚಿನಂತೆ ಹಬ್ಬಿತು. ಇಡೀ ರಾಷ್ಟ್ರ ಶೋಕಸಾಗರದಲ್ಲಿ ಮುಳುಗಿತು.

ಸಂಸತ್ತಿನ ಎರಡೂ ಸದನಗಳಲ್ಲಿ ಲೋಹಿಯಾ ಅವರಿಗೆ ಅಭೂತಪೂರ್ವ ಶ್ರದ್ಧಾಂಜಲಿಯನ್ನು ಅರ್ಪಿಸಲಾಯಿತು. ಅವರ ಸಾವು ದೇಶಕ್ಕೆ ದೊಡ್ಡ ನಷ್ಟ ಆದರಲ್ಲೂ ಸಂಸತ್ತಿಗೆ ಅತಿದೊಡ್ಡ ನಷ್ಟ ಎಂದು ವರ್ಣಿಸಲಾಯಿತು. ಅವರನ್ನು ನಿಜವಾದ ಧೀರ ಹೋರಾಟಗಾರ, ಮಹಾನ್ ವಿಚಾರವಾದಿ ಮತ್ತು ಕ್ರಿಯಾ ಶೀಲ ವ್ಯಕ್ತಿ ಎಂದು ಬಣ್ಣಿಸಿದರು.

ಅವರದು ಅಕಾಲ ಮೃತ್ಯು ಎಂದು ವರ್ಣಿಸಿದ ಅಂದಿನ ಲೋಕ ಸಭಾಧ್ಯಕ್ಷರಾದ ಡಾ|| ಎನ್. ಸಂಜೀವರೆಡ್ಡಿ ಯವರು ''ಮೃತ್ಯು ಭಾರತದ ರಾಜಕೀಯ ರಂಗದಿಂದ ಹಾಗೂ ಈ ಸದನದಿಂದ ಒಬ್ಬ ಉದ್ದಾಮ ನಾಯಕನನ್ನು ಕಸಿದುಕೊಂಡಿದೆ'' ಎಂದು ಹೇಳಿದರು. ಅಂದಿನ ಪ್ರಧಾನ ಮಂತ್ರಿಗಳಾದ ದಿವಂಗತ ಶ್ರೀಮತಿ ಇಂದಿರಾಗಾಂಧಿಯವರು ಲೋಹಿಯಾ ಅವರನ್ನು ಅಗ್ರಮಾನ್ಯ ಸಂಸತ್ ಸದಸ್ಯರು ಎಂದು ವರ್ಣಿಸಿದರಲ್ಲದೆ ಅವರ ಅಕಾಲ ಮರಣದಿಂದ ರಾಷ್ಟ್ರವು ಒಬ್ಬ ಧೀಮಂತ ವಿಚಾರವಾದಿಯನ್ನು ಮತ್ತು ಕ್ರಿಯಾಶೀಲ ವ್ಯಕ್ತಿಯನ್ನು ಕಳೆದುಕೊಂಡಿದೆ ಎಂದು ಹೇಳಿದರು. ಆಕೆಯ ಪ್ರಕಾರ, ಅವರ ಇಡೀ ಬದುಕು ''ತಮಗೆ ಅತ್ಯಂತ ಪ್ರಿಯವಾದ ಉದ್ದೇಶಗಳಿಗೆ ಎಂದರೆ ದಲಿತರು ಮತ್ತು ನಿರ್ಗತಿಕರಿಗಾಗಿ ಹೋರಾಡುವುದಕ್ಕೆ'' ಮುಡಿಪಾಗಿತ್ತು.

ಅವರು ಎಂದೂ ರಾಜ್ಯಸಭೆಯ ಸದಸ್ಯರಾಗಿರಲಿಲ್ಲ. ಆದರೆ, ಆ ಸದನದಲ್ಲೂ ಅವರಿಗೆ ಮನಮಿಡಿಯುವ ಶ್ರದ್ಧಾಂಜಲಿಯನ್ನು ಅರ್ಪಿಸಲಾಯಿತು. ಅಂದಿನ ರಾಜ್ಯ ಸಭಾಧ್ಯಕ್ಷರಾಗಿದ್ದ ದಿವಂಗತ ಶ್ರೀ ವಿ.ವಿ. ಗಿರಿಯವರು ಅವರನ್ನು ರಾಷ್ಟ್ರದ ಸಮಾಜವಾದಿ ಆಂದೋಲನದ ಪ್ರವರ್ತಕ '' ಎಂದು ವರ್ಣಿಸಿದರು. ಲೋಕಸಭಾಸದಸ್ಯರಾಗಿ ಶ್ರೀ ಲೋಹಿಯಾ ಅವರು ತಮ್ಮ ಶಕ್ತಿಯುತ ಭಾಷಣಗಳಿಗಾಗಿ ಮತ್ತು ವಿಶಿಷ್ಟ ಸಂಸದರೆಂಬ ಶ್ರೇಯಸ್ಸಿಗೆ ಪಾತ್ರರಾಗಿದ್ದರು. ಮುಂದುವರೆದು ''ಶ್ರೀ ಲೋಹಿಯಾ ಅವರು ಸರ್ಕಾರದ ನೀತಿಗಳನ್ನು ಕಟುವಾಗಿ ಟೀಕಿಸುತ್ತಿದ್ದರೂ ಅವರ ಉದ್ದೇಶದ ಬಗ್ಗೆಯಾಗಲಿ ಅವರ

5

ನಿಷ್ಠೆಯ ಬಗ್ಗೆ ಯಾಗಲಿ ಯಾರಿಗೂ ಸಂಶಯವಿರುತ್ತಿರಲಿಲ್ಲ. ಏಕೆಂದರೆ ಅವರ ಮನಸ್ಸಿನಲ್ಲಿ ಸದಾ ಜನತೆಯ ಏಳ್ಗೆಯೇ ತುಂಬಿರುತ್ತಿತ್ತು'' ಎಂದರು

ಡಾ|| ಲೋಹಿಯಾ ಅವರು ಅವಿವಾಹಿತರಾಗಿದ್ದರು. ಅವರು ಮರಣ ಹೊಂದಿದಾಗ ಯಾವುದೇ ಕುಟುಂಬ ಇಲ್ಲವೇ ಆಸ್ತಿಪಾಸ್ತಿಯನ್ನು ಬಿಟ್ಟು ಹೋಗಲಿಲ್ಲ. ಅವರು ಬಿಟ್ಟು ಹೋದದ್ದು ತಮ್ಮ ಮಹಾನ್ ವಿಚಾರಧಾರೆಗಳನ್ನು ಮಾತ್ರ.

-:=:-

**ಮೂಲ :**


1. ಆರ್ಮುಗನ್ ಎಂ. ಸೋಷಿಯಲ್ ಥಾಟ್ ಇನ್ ಇಂಡಿಯಾ, ನವದೆಹಲಿ, ಸ್ಟರ್ಲಿಂಗ್ ಪಬ್ಲಿಷರ್ಸ್, 1978.

2. ಕೌಶಿಕ್, ಕರುಣ, ರಷ್ಯನ್ ರೆವಲ್ಯೂಷನ್ ಅಂಡ್ ಇಂಡಿಯನ್ ನ್ಯಾಷನ್ಯಲಿಸಂ ದೆಹಲಿ, ಚಾಣಕ್ಯ ಪಬ್ಲಿಕೇಷನ್ಸ್ 1984.

3. ಪರಮೇಶ್ವರನ್, ಪಿ. (ಸಂಪಾದಿತ) ಗಾಂಧಿ, ಲೋಹಿಯಾ ಮತ್ತು ದೀನ ದಯಾಳ್, ದೀನದಯಾಳ್ ರಿಸರ್ಚ್ ಇನ್ಸ್ಟಿಟ್ಯೂಟ್ 1978.

4. ಸೇನ್, ಎಸ್, ಪಿ. (ಸಂಪಾದಿತ); ಡಿಕ್ಷನರಿ ಆಫ್ ನ್ಯಾಷನಲ್ ಬಯಾಗ್ರಫೀಸ್ ಸಂಪುಟ - 11, ಕಲ್ಕತ್ತಾ ಇನ್ಸ್ಟಿಟ್ಯೂಟ್ ಆಫ್ ಹಿಸ್ಟಾರಿಕಲ್ ಸ್ಟಡೀಸ್, 1973.

5. ಶರದ್, ಓಂಕಾರ್, ಲೋಹಿಯಾ : ಎ ಬಯಾಗ್ರಫಿ , ಲಕ್ನೋ, ಪ್ರಕಾಶನ ಕೇಂದ್ರ, 1972 .

6. ವಿಷ್ಣುಭಗವಾನ್ ; ಇಂಡಿಯನ್ ಪೊಲಿಟಿಕಲ್ ಥಿಂಕರ್ಸ್ ಡೆಲ್ಲಿ ಆತ್ಮಾರಾಮ್ ಮತ್ತು ಸನ್ಸ್ 1976 .

7. ಹೂ ಇಸ್ ಹೂ, ನಾಲ್ಕನೇ ಲೋಕಸಭೆ, 1967 .


-:=:||:=:-

## 2. ಡಾ|| ರಾಮಮನೋಹರ್ ಲೋಹಿಯಾ ಮತ್ತು ಸಮಾಜವಾದ.

-ಬಿ. ಸತ್ಯನಾರಾಯಣ ರೆಡ್ಡಿ.*

ಭಾರತದ ಸ್ವಾತಂತ್ರ್ಯ ಸಂಗ್ರಾಮದಲ್ಲಿ ಮತ್ತು ಸಮಾಜವಾದಿ ಆಂದೋಲನದಲ್ಲಿ ಮಿನುಗಿದ ಮಹಾನ್ ತಾರೆಗಳ ಸಾಲಿನಲ್ಲಿ ಡಾ. ರಾಮ ಮನೋಹರ್ ಲೋಹಿಯಾ ಅವರು ಅಗ್ರಗಣ್ಯರು. ದೀನರು, ದಲಿತರು ಮತ್ತು ಶೋಷಿತರ ಉದ್ಧಾರಕ್ಕಾಗಿ ಹೋರಾಡಿದ ಶ್ರೀ ಲೋಹಿಯಾ ಅವರು ರೈತರು, ಕಾರ್ಮಿಕರು ಮತ್ತು ಮಹಿಳೆಯರ ಹಿತೈಷಿಯೆಂದೇ ಹೆಸರುವಾಸಿಯಾಗಿದ್ದರು. ಸಮಾಜ ಸೇವೆ ಹಾಗೂ ಸಮಾಜವಾದವನ್ನು ರಾಷ್ಟ್ರದಲ್ಲಿ ನೆಲೆಗೊಳಿಸುವುದೇ ಅವರ ಬದುಕಿನ ಏಕೈಕ ಗುರಿ. ಇದಕ್ಕಾಗಿ ಅವರು ತಮ್ಮ ಬಾಳಿನುದ್ದಕ್ಕೂ ಶ್ರಮಿಸಿ ಹೋರಾಡಿದರು. ರಾಷ್ಟ್ರೀಯ ಮತ್ತು ಅಂತಾರಾಷ್ಟ್ರೀಯ ಮಟ್ಟದಲ್ಲಿ ಅಸಮಾನತೆ, ಬಡತನ, ನಿರುದ್ಯೋಗ ಅಥವಾ ಅನ್ಯಾಯಗಳನ್ನು ಕಂಡಾಗ ಸಿಡಿದೆದ್ದು ಅವುಗಳ ವಿರುದ್ಧ ಅದಮ್ಯ ಧೈರ್ಯ ಮತ್ತು ಆತ್ಮವಿಶ್ವಾಸದಿಂದ ಹೋರಾಟವನ್ನು ನಡೆಸುತ್ತಿದ್ದರು. ರಾಷ್ಟ್ರಕ್ಕೆ ಒಂದು ಹೊಸ ದಿಶೆಯನ್ನು ತೋರಿಸಲು ಶ್ರಮಿಸಿದರು ಮತ್ತು ತಮ್ಮ ದೇಶ ಬಾಂಧವರಲ್ಲಿ ಹೊಸ ಉತ್ಸಾಹ ಹಾಗೂ ಹೊಸ ಪ್ರಜ್ಞೆಯನ್ನು ಮೂಡಿಸಿದರು. ಸಂಕಷ್ಟದಲ್ಲಿರುವ ಜನತೆಯ ಸರ್ವಾಂಗೀಣ ಅಭಿವೃದ್ಧಿಗಾಗಿ ದುಡಿಯಲು ಸ್ವಯಂ ನಿರ್ಧಾರವನ್ನು ಕೈಗೊಂಡು ಅವರು ಒಮ್ಮೆ ಹೊರಕ್ಕೆ ಕಾಲಿಟ್ಟರೆಂದರೆ ಮತ್ತೆ ಹಿಂದಿರುಗಿ ನೋಡುತ್ತಿರಲಿಲ್ಲ. ಯಾವುದೇ ರಾಜಿ ಮಾಡಿಕೊಳ್ಳುತ್ತಿರಲಿಲ್ಲ , ಎಂಥ ಪದವಿ ನೀಡುತ್ತೇನೆಂದರೂ ಅಥವಾ ಯಾವುದೇ ಬಗೆಯ ಆಮಿಷ ಒಡ್ಡಿದರೂ ತಮ್ಮ ಏಕೈಕ ಗುರಿಯಾದ ಸಮಾಜವಾದದ ಗುರಿಬಿಟ್ಟು ಅತ್ತಿತ್ತ ಕದಲುತ್ತಿರಲಿಲ್ಲ.

1910ರ ಮಾರ್ಚ್ 23 ರಂದು ಉತ್ತರ ಪ್ರದೇಶದ ಅಕ್ಬರ್‌ಪುರ್ (ಫೈಜಾಬಾದ್) ನಲ್ಲಿ ಜನಿಸಿದ ಇವರು ತಮ್ಮ ಆರಂಭದ ವಿದ್ಯಾಭ್ಯಾಸ ಮುಂಬಯಿ ಮತ್ತು ಕಲ್ಕತ್ತಾದಲ್ಲಿ ಆಯಿತು. ಇದಾದ ನಂತರ, ಜರ್ಮನಿಗೆ ತೆರಳಿದರು. ಅಲ್ಲಿ ಅವರು ಅರ್ಥಶಾಸ್ತ್ರದಲ್ಲಿ ಡಾಕ್ಟರೇಟ್ ಪದವಿ ಪಡೆದು ರಾಜಕೀಯ ರಂಗಕ್ಕೆ ಪದಾರ್ಪಣ ಮಾಡಿದರು. ತಮ್ಮ ಇಡೀ ಜೀವನ ಅದಕ್ಕೆ ಮುಡಿಪಾಗಿಟ್ಟು ಶ್ರದ್ಧೆಯಿಂದ ದುಡಿದರು. ತಮ್ಮ 16ನೇ ವಯಸ್ಸಿನಲ್ಲಿಯೆ ಕಾಂಗ್ರೆಸ್ ಅಧಿವೇಶನದಲ್ಲಿ ಭಾಗವಹಿಸಿದ್ದರು. ಜರ್ಮನಿ ಯಿಂದ ಹಿಂದಿರುಗಿ ಬಂದ ಮೇಲೆ ಸಂಪೂರ್ಣವಾಗಿ ರಾಜಕೀಯರಂಗಕ್ಕೆ ಒಲಿದ ಇವರು ಆರಂಭದಲ್ಲಿ ಭಾರತದ ವಿದೇಶಾಂಗ ನೀತಿಯನ್ನು ರೂಪಿಸುವುದಕ್ಕೆ ಮಾರ್ಗ ನಿರ್ದೇಶನ

* ಶ್ರೀ ರೆಡ್ಡಿ ಇವರು ಉತ್ತರ ಪ್ರದೇಶದ ರಾಜ್ಯಪಾಲರು.

ಒದಗಿಸಿದರು. ಇದರಿಂದ ಜನತೆಯ ಮನಸ್ಸಿನಲ್ಲಿ ಅವರ ಬುದ್ಧಿ ಶ್ರೀಮಂತಿಕೆಯ ಅರಿವು ಅಚ್ಚಳಿಯದೆ ಉಳಿಯಿತು. ಅವರು ನಿರ್ಭೀತರಾಗಿ ಸ್ವಾತಂತ್ರ್ಯ ಸಂಗ್ರಾಮದಲ್ಲಿ ಸಕ್ರಿಯವಾಗಿ ಪಾಲ್ಗೊಂಡರು. 1932ರ ತರುವಾಯ ಅನೇಕ ಬಾರಿ ಕಾರಾವಾಸ ಅನುಭವಿಸಿದರು. ಅಷ್ಟೇ ಅಲ್ಲ, ಭಾರತಕ್ಕೆ ಸ್ವಾತಂತ್ರ್ಯ ಬಂದ ತರುವಾಯವೂ ಸಮಾಜ ಸುಧಾರಣೆಯ ಹೋರಾಟದಲ್ಲಿ ಎಡಬಿಡದೆ ನಿರತರಾಗಿ ಅನೇಕ ಬಾರಿ ದಸ್ತಗಿರಿಯಾದರು. ಇಷ್ಟಾದರೂ ಹಿಂದೆಗೆಯದೆ ಸಮಾಜವಾದದ ಗುರಿಯನ್ನು ಸಾಧಿಸುವತ್ತ ದೃಢ ನಿಶ್ಚಯದಿಂದ ಕಾರ್ಯಬದ್ಧರಾಗಿದ್ದರು.

ಜನರು ಲೋಹಿಯಾ ಅವರನ್ನು ರಾಜಕೀಯ ಧುರೀಣರೆಂದು ಭಾವಿಸಿದರೂ, ಅವರೆಲ್ಲ ಚಟುವಟಿಕೆಗಳಲ್ಲಿ ಮತ್ತು ಕೃತಿಗಳಲ್ಲಿ ಅವರ ಸಮಾಜವಾದಿ ಚಿಂತನೆ ಎದ್ದು ಕಾಣುತ್ತಿತ್ತು. ತಕ್ಷಣವೇ ಸುಧಾರಣೆ ಆಗಬೇಕು ಎಂದು ಪಟ್ಟು ಹಿಡಿಯುತ್ತಿದ್ದುದಷ್ಟೇ ಅಲ್ಲ, ಭಾರತವನ್ನು ಭವಿಷ್ಯದಲ್ಲಿ ಆದರ್ಶ ರಾಷ್ಟ್ರವಾಗಿ ನಿರ್ಮಿಸುವ ಬಲವಾದ ಇಚ್ಛೆಯನ್ನೂ ತನ್ನ ಎದೆಯಾಳದಲ್ಲಿ ಇಟ್ಟುಕೊಂಡಿದ್ದ ಒಬ್ಬ ಮಹಾನ್ ವಿಚಾರವಾದಿ ಶ್ರೀ ಲೋಹಿಯಾ ಅವರು, ಮಹಾತ್ಮಾಗಾಂಧಿ ಮತ್ತು ನೆಹರೂ ಅವರ ಜೊತೆ ಸಾಕಷ್ಟು ದೀರ್ಘಕಾಲ ಕೆಲಸ ಮಾಡಿದರು. ರಾಷ್ಟ್ರದ ಹಿತಾಸಕ್ತಿಯ ಪುರೋಭಿವೃದ್ಧಿಗಾಗಿ ಹೃತ್ಪೂರ್ವಕ ಶ್ರದ್ಧೆ ಮತ್ತು ಬದ್ಧತೆಯಿಂದ ದುಡಿದರು. ಸಮಾಜವಾದ ಚಿಂತನೆಯ ಹರಿಕಾರನೆಂದೇ ಅವರನ್ನು ವಿಶೇಷವಾಗಿ ಸಮಾಜದಲ್ಲಿ ಗುರುತಿಸಲಾಗುತ್ತಿತ್ತು. ಇದೇ ಕಾರಣದಿಂದ, ಕೆಲವು ರಾಷ್ಟ್ರೀಯ ನಾಯಕರಲ್ಲಿ ಸಮಾಜವಾದ ಕುರಿತಂತೆ ಭಿನ್ನಾಭಿಪ್ರಾಯಗಳು ತಲೆದೋರಿದಾಗ ಅವರು ಸಮಾಜವಾದಿ ನಾಯಕರುಗಳಾದ ಶ್ರೀ ಜಯಪ್ರಕಾಶ್ ನಾರಾಯಣ್, ಆಚಾರ್ಯ ನರೇಂದ್ರದೇವ, ಶ್ರೀ ಅಶೋಕ ಮೆಹತಾ, ಶ್ರೀಮತಿ ಅರುಣಾ ಆಸಫ್ ಅಲಿ ಮತ್ತು ಶ್ರೀ ಅಚ್ಯುತ್ ಪಟವರ್ಧನ್ ಅವರುಗಳೊಂದಿಗೆ ಕಾಂಗ್ರೆಸ್ ಪಕ್ಷವನ್ನು ಬಿಟ್ಟು ಹೊರಬಂದು ಸಮಾಜವಾದಿ ಪಕ್ಷವನ್ನು ಕಟ್ಟಿದರು. ಈ ಪಕ್ಷದ ಧ್ಯೇಯೋದ್ದೇಶಗಳನ್ನು ಸ್ಥೂಲವಾಗಿ ವಿವರಿಸುತ್ತಾ ಡಾ॥ಲೋಹಿಯಾ ಅವರು ''ಸಮಾಜದಲ್ಲಿ ಒಂದಿಷ್ಟು ಸುಧಾರಣೆಯನ್ನು ತಂದ ಮಾತ್ರಕ್ಕೇ ಸಮಾಜವಾದಿ ಪಕ್ಷ ತೃಪ್ತಿಪಡಬಾರದು, ಅದರ ಬದಲು, ಇಡೀ ಸಮಾಜಿಕ ವ್ಯವಸ್ಥೆಯಲ್ಲೇ ಮೂಲಭೂತ ಬದಲಾವಣೆ ತರಬೇಕು. ದೃಢ ಸಂಕಲ್ಪದೊಂದಿಗೆ ವಿವೇಚನೆಯನ್ನು ಬೆರಸಿ, ನಿಯಮಗಳು ಮತ್ತು ಯುಕ್ತಾಯುಕ್ತತೆಯ ಶಿಸ್ತಿಗೆ ತಮ್ಮ ಕಾರ್ಯವನ್ನು ಒಳಪಡಿಸಿದಾಗ ಮಾತ್ರ ಇದು ಸಾಧ್ಯ'' ಎಂದು ಪದೇ ಪದೇ ಹೇಳುತ್ತಿದ್ದರು. ಇಲ್ಲದೇ ಹೋದಲ್ಲಿ, ಸಮಾಜವಾದಿ ಪಕ್ಷ ಪ್ರಗತಿಯನ್ನು ಕಾಣುವುದು ಅಸಾಧ್ಯ ಎಂಬುದು ಅವರ ವಿಚಾರವಾಗಿತ್ತು.

ವಾಸ್ತವವಾಗಿ ''ಸಂಯುಕ್ತ ಸಮಾಜವಾದಿ ಪಕ್ಷ'' ಅವರ ಕನಸಿನ ಕೂಸು. ಏನೇ ಬರಲಿ ರಾಷ್ಟ್ರದಲ್ಲಿ ಸಮಾಜವಾದವನ್ನು ತರಬೇಕು. ಆದರೆ ಯಾವುದೇ ಬಗೆಯ

ಹಿಂಸಾಚಾರ ಅಥವಾ ರಕ್ತಪಾತ ವಿಲ್ಲದಂತೆ ತರಬೇಕು ಎನ್ನುವ ಏಕೈಕ ಉದ್ದೇಶ ದಿಂದ ಪ್ರಜಾಸತ್ತಾತ್ಮಕ ರೀತಿಯಲ್ಲಿ ಅದನ್ನು ರಚಿಸಲು ಅವರು ಉದ್ದೇಶಿಸಿದ್ದರು. ಹೀಗೆ ಲೋಹಿಯಾ ಅವರು ತಮ್ಮ ವಿಶಿಷ್ಟವಾದ ಹಾಗೂ ಅನನ್ಯ ಚಿಂತನೆಗಳ ಮೂಲಕ ಸಮಾಜವಾದಿ ಆಂದೋಲನಕ್ಕೆ ಒಂದು ನವೀನ ಕ್ರಾಂತಿಕಾರಿ ಹಾಗೂ ಸಾಮಾಜಿಕ ಆಯಾಮವನ್ನು ಕಲ್ಪಿಸಿಕೊಟ್ಟರು. ಮತ್ತು ಅದನ್ನು ಶಕ್ತಿಶಾಲಿ ಯನ್ನಾಗಿ ಹಾಗೂ ಜನಪ್ರಿಯವನ್ನಾಗಿ ಮಾಡಲು ಸರ್ವ ಪ್ರಯತ್ನ ಮಾಡಿದರು. ಅವರು, ದೂರದೃಷ್ಟಿ ಹಾಗೂ ಸೃಜನಶೀಲ ಪ್ರತಿಭೆಯುಳ್ಳ ವ್ಯಕ್ತಿಯಾಗಿದ್ದರು. ಭಾರತದಲ್ಲಿ ವರ್ಗ ವ್ಯವಸ್ಥೆ ವಿರುದ್ಧ ಹೋರಾಟ ನಡೆಸಿ ವರ್ಗ ತಾರತಮ್ಯವನ್ನು ನಿರ್ಮೂಲ ಮಾಡುವ ವಿಚಾರವನ್ನು ಕೆಲವರು ಮುಂದಿಟ್ಟಾಗ, ವರ್ಗದ ವಿರುದ್ಧ ಹೋರಾಟದ ಜೊತೆಗೆ ಜಾತಿ ಪದ್ಧತಿಯನ್ನು ಕೊನೆಗೊಳಿಸಲು ಹೋರಾಟವನ್ನು ಪ್ರಾರಂಭಿಸದೇ ಹೋದಲ್ಲಿ ನಿಮ್ಮ ಕ್ರಾಂತಿ ಅಪೂರ್ಣವಾಗುತ್ತದೆ ಎಂದು ಅವರು ತುಂಬಾ ಸ್ಪಷ್ಟವಾಗಿ ಹೇಳಿದರು. ಹಿಂದುಳಿದ ಜನತೆಯ ಏಳಿಗೆಗೆ ಪೂರ್ಣ ಅವಕಾಶ ಒದಗಿಸುವುದಕ್ಕಾಗಿ ವರ್ಗ ಸಂಘರ್ಷ ಮತ್ತು ವರ್ಗ ರಹಿತ ಸಮಾಜದ ನಿರ್ಮಾಣದ ಕಲ್ಪನೆಯನ್ನುಳ್ಳ ಮಾರ್ಕ್ಸ್ ಸಿದ್ಧಾಂತವನ್ನು ಇನ್ನಷ್ಟು ವಿಕಾಸಗೊಳಿಸ ಬೇಕಾಗಿದೆ ಎಂದು ಅವರು ಪದೇ ಪದೇ ಒತ್ತಿ ಹೇಳುತ್ತಿದ್ದರು.

ಡಾ|| ಲೋಹಿಯಾ ಅವರು ಸಮಾನತೆಯ ಕಟ್ಟಾ ಪ್ರತಿಪಾದಕರು. ಜಾತಿ ಪದ್ಧತಿ ಮತ್ತು ವರ್ಗ ಸಂಘರ್ಷಗಳೇ ಭಾರತದ ಅವನತಿಗೆ ಮುಖ್ಯ ಕಾರಣ ಎಂದು ಅವರು ನಂಬಿದ್ದರು. ಈ ಹಿನ್ನೆಲೆಯಲ್ಲಿ ಅವರು ತಾರತಮ್ಯಗಳು ಸಂಪ್ರದಾಯ ಬದ್ಧವಾಗಿ ರೂಢಮೂಲವಾಗಿರುವಂಥ ಒಂದು ಸಮಾಜದಲ್ಲಿ ಎಲ್ಲರಿಗೂ ಸಮಾನ ಅವಕಾಶಗಳನ್ನು ಒದಗಿಸುವುದರಿಂದ ಮಾತ್ರವೇ ಸಮಾನತೆಯನ್ನು ಸಾಧಿಸಲು ಸಾಧ್ಯವಿಲ್ಲ. ಹಿಂದುಳಿದ ವರ್ಗಗಳಿಗೆ ಸೇರಿದವರು, ಮಹಿಳೆಯರು, ಹರಿಜನರು, ಆದಿವಾಸಿಗಳು ಮತ್ತು ನಿರ್ಲಕ್ಷ್ಯಕ್ಕೊಳಗಾದ ಅಲ್ಪಸಂಖ್ಯಾತರು ಮುಂದುವರಿದ ಜನಗಳಂತೆಯೇ ಏಳಿಗೆ ಹೊಂದ ಬೇಕಾದರೆ ಅವರಿಗೆ ವಿಶೇಷ ಅವಕಾಶಗಳನ್ನು ಕಲ್ಪಿಸಿಕೊಡಬೇಕು ಆಗ ಮಾತ್ರ ಅದು ಏಳಿಗೆ ಸಾಧ್ಯ ಎಂಬ ಅಭಿಪ್ರಾಯ ಅವರದು.

ಲೋಹಿಯಾ ಅವರು, ನವನಾಗರೀಕತೆಯನ್ನು ಟೀಕಿಸುತ್ತಿದ್ದರೂ ಸಮಾನತೆಯನ್ನು ತರಲು ನಡೆಸುವ ಆಂದೋಲನದ ಬಗ್ಗೆ ತುಂಬು ಪ್ರಶಂಸೆ ಉಳ್ಳವರಾಗಿದ್ದರು. ಭಾರತೀಯ ಸಮಾಜದಲ್ಲಿ ಇರುವಂತಹ ಆರ್ಥಿಕ ತಾರತಮ್ಯ ಮತ್ತು ಸಾಮಾಜಿಕ ಅನ್ಯಾಯಗಳು ತನ್ನ ದುಷ್ಟದ ಸಾಮಾಜಿಕ ವ್ಯವಸ್ಥೆಯಲ್ಲಿ ಮೂಲಭೂತ ಬದಲಾವಣೆ ತರಬೇಕೆಂಬ ಉತ್ಕಟ ಆಕಾಂಕ್ಷೆಯನ್ನು ಅವರಲ್ಲಿ ಮೂಡಿಸಿತ್ತು. ಆದ್ದರಿಂದ, ಅವರು ಏಳು ಕ್ರಾಂತಿಗಳ ಒಂದು ಸಿದ್ಧಾಂತ ಮಂಡಿಸಿದರು. ಈ ಏಳು ಕ್ರಾಂತಿಗಳನ್ನು ಪೂರ್ಣ ಸ್ವರೂಪದಲ್ಲಿ

6

ಯಶಸ್ವಿಯಾಗಿ ಜಾರಿಗೆ ತಂದರೆ ಅವು ಭಾರತವನ್ನಷ್ಟೇ ಅಲ್ಲ, ಇಡೀ ವಿಶ್ವವನ್ನೇ ಬದಲಾಯಿಸುವ ಸಾಮರ್ಥ್ಯವನ್ನು ಹೊಂದಿವೆ ಎಂದು ಅವರು ದೃಢವಾಗಿ ನಂಬಿದ್ದರು. ಈ ಏಳು ಸಮಾಜವಾದಿ ಕ್ರಾಂತಿಗಳು ಈಗ ವಿಶ್ವಾದಂತ್ಯ ಪ್ರಸಿದ್ಧವಾಗಿವೆ. (1) ಗಂಡಸರು ಮತ್ತು ಹೆಂಗಸರು ನಡುವೆ ಸಮಾನತೆ ಸಾಧಿಸಲು ಹೋರಾಟ. (2) ಮೈ ಬಣ್ಣದ ಆಧಾರದ ಮೇಲೆ ಮಾಡುವ ರಾಜಕೀಯ ಆರ್ಥಿಕ ಮತ್ತು, ಆಧ್ಯಾತ್ಮಿಕ ತಾರತಮ್ಯವನ್ನು ನೀಗಿಸಲು ಹೋರಾಟ. (3) ಪರಂಪರಾನುಗತ ಕಲ್ಪನೆಯ ಆಧಾರದ ಮೇಲೆ ಮುಂದುವರಿದ ಮತ್ತು ಹಿಂದುಳಿದ ಗುಂಪು ಅಥವಾ ಜಾತಿಗಳ ನಡುವೆ ಮಾಡುವ ತಾರತಮ್ಯವನ್ನು ವಿರೋಧಿಸಿ ಮತ್ತು ಹಿಂದುಳಿದವರಿಗೆ ವಿಶೇಷ ಅವಕಾಶ ಕಲ್ಪಿಸಿಕೊಡಬೇಕೆಂಬುದನ್ನು ಸಮರ್ಥಿಸಿ ಮಾಡುವ ಹೋರಾಟ. (4) ವಿದೇಶಿ ಆಳ್ವಿಕೆಯನ್ನು ಕಿತ್ತೊಗೆಯಲು ಮಾಡುವ ಮತ್ತು ಪ್ರಜಾಸತ್ತಾತ್ಮಕ ತತ್ವಗಳನ್ನು ಆಧರಿಸಿ ವಿಶ್ವಸರ್ಕಾರವನ್ನು ರಚಿಸುವುದಕ್ಕೆ ಬೆಂಬಲ ನೀಡಿ ಮಾಡುವ ಹೋರಾಟ. (5) ಬಂಡವಾಳ ಒಂದೆಡೆಯೇ ಸಂಚಯವಾಗುವುದನ್ನು ವಿರೋಧಿಸಿ ಆರ್ಥಿಕ ಸಮಾನತೆ ಮತ್ತು ಯೋಜಿತ ಉತ್ಪಾದನೆಯನ್ನು ಸಮರ್ಥಿಸಿ ಮಾಡುವ ಹೋರಾಟ. (6) ಪ್ರಜೆಗಳ ಖಾಸಗಿ ಬದುಕಿನಲ್ಲಿ ಕಾನೂನು ವಿರುದ್ಧವಾದ ಹಸ್ತಕ್ಷೇಪವನ್ನು ವಿರೋಧಿಸಿ ಮತ್ತು ಪ್ರಜಾಸತ್ತಾತ್ಮಕ ವ್ಯವಸ್ಥೆಯನ್ನು ಸಮರ್ಥಿಸಿ ಮಾಡುವ ಹೋರಾಟ ಹಾಗೂ (7) ಶಸ್ತ್ರಾಸ್ತ್ರಗಳನ್ನು ವಿರೋಧಿಸಿ ಹಾಗೂ ಸತ್ಯಾಗ್ರಹವನ್ನು ಬೆಂಬಲಿಸಿ ಮಾಡುವ ಹೋರಾಟ. 20ನೇ ಶತಮಾನದಲ್ಲಿ ಒಂದು ಆರೋಗ್ಯಕರ ವಾತಾವರಣವು ಒಡಮೂಡಬೇಕಾದರೆ ಈ ಏಳು ಕ್ರಾಂತಿಗಳು ಆಗಬೇಕು ಎಂದು ಲೋಹಿಯಾ ಅವರು ಹೇಳಿದರು. ಈ ಶತಮಾನವನ್ನು ಕಾಡುತ್ತಿರುವ ಮಹಾನ್ ಪಿಡುಗುಗಳೆಂದರೆ ಕ್ರೌರ್ಯ, ದಾರಿದ್ರ್ಯ ಮತ್ತು ನಿರುದ್ಯೋಗ. ಆದುದರಿಂದ ಅವುಗಳನ್ನು ನಿರ್ಮೂಲ ಮಾಡಲು ಒಗ್ಗೂಡಿ ಪ್ರಯತ್ನ ಮಾಡಬೇಕಾದ ಅಗತ್ಯವಿದೆ ಎಂದು ಅವರು ಒತ್ತಿ ಹೇಳುತ್ತಿದ್ದರು.

ಲೋಹಿಯಾ ಅವರ ಪ್ರಕಾರ ಸಮಾಜವಾದ ಮತ್ತು ಪ್ರಜಾತಂತ್ರ ಎರಡೂ ಬೇರೆ ಬೇರೆ ಅಲ್ಲ. ಅವು ಒಂದಕ್ಕೊಂದು ಪೂರಕ. ಸಮಾಜವಾದಕ್ಕೆ ಯಾವ ಹೆಸರನ್ನಿಟ್ಟು ಕರೆದರೂ, ಅಂದರೆ, ಪ್ರಜಾತಂತ್ರ, ಕ್ರಾಂತಿಕಾರಿ ಅಥವಾ ವೈಜ್ಞಾನಿಕ ಅಥವಾ ಇವೆಲ್ಲವನ್ನೂ ಒಂದು ಬೇರೆಯದೇ ಆದ ಹೆಸರಿಟ್ಟು ಕರೆದರೂ ಅದು ಸಮಾಜವಾದವಾಗಿಯೇ ಉಳಿದಿರುತ್ತದೆ. ಯೂರೋಪ್ ದೇಶದಲ್ಲಿನ ದಾರುಣ ಪರಿಸ್ಥಿತಿಗಳನ್ನು ಎತ್ತಿ ತೋರಿಸುವ ಉದ್ದೇಶದಿಂದ ಅದರ ಹೆಸರನ್ನು ಸೋಶಿಯಲ್ ಡೆಮಾಕ್ರಸಿ ಎಂಬುದರ ಬದಲಾಗಿ ಡೆಮಾಕ್ರೆಟಿಕ್ ಸೋಶಿಯಲಿಸಂ ಎಂದು ಕರೆದಿದ್ದಾರೆ. ಈ ಪ್ರಯತ್ನ ಏನಿದ್ದರೂ, ದೇಶದಲ್ಲಿ ಸಮಾಜವಾದವನ್ನು ತರಲು ಉದ್ದೇಶಿಸಿದ ಒಂದು ಹೋರಾಟ ಆಗಿದೆ. ಭಾರತದ ಸಮಾಜವಾದವನ್ನು, ಅವರನ್ನೇ ಅನುಸರಿಸಿ ವಿವಿಧ ಗುಣವಾಚಕಗಳನ್ನು ಬಳಸಿ ಕರೆಯಲಾಗಿದೆ. ಕೇವಲ ಗುಣವಾಚಕಗಳನ್ನು ಹೆಸರಿನ ಮುಂದೆ

ಹಾಕುವುದರಿಂದ ಸಮಾಜವಾದವನ್ನು ಇತರ ಪದ್ಧತಿಗಿಂತ ಭಿನ್ನ ಎಂದು ತೋರಿಸಲಾಗದು. ನಾವು ಹಾಕಿಕೊಳ್ಳುವಂತಹ ಕಾರ್ಯಕ್ರಮಗಳು ಮತ್ತು ಕೈಗೊಳ್ಳುವ ಕ್ರಮಗಳು ಅದಕ್ಕೆ ಸಾಕ್ಷಿಯಾಗಬೇಕು. ಸಲ್ಲದ ವ್ಯಾಕರಣ ವಿವಾದದಲ್ಲಿ ತೊಡಗುವುದರ ಬದಲು ಸಮಾಜವಾದ ಎಂಬ ಹೆಸರಿನಿಂದಲೇ ಅದನ್ನು ಕರೆಯುವುದು ಸೂಕ್ತ. ಅಭಿವ್ಯಕ್ತಿ ಸ್ವಾತಂತ್ರ್ಯವನ್ನು ಖಾತರಿಗೊಳಿಸುವುದೇ ಅದರ ಏಕೈಕ ಗುರಿಯಾಗಬೇಕು ಎಂದು ಹೇಳುತ್ತಿದ್ದರು.

ಸಮಾನತೆ, ಪ್ರಜಾತಂತ್ರ, ಅಹಿಂಸೆ, ವಿಕೇಂದ್ರೀಕರಣ ಮತ್ತು ಸಮಾಜವಾದವನ್ನು ಆಧರಿಸಿದ ಸಿದ್ಧಾಂತಗಳು ಸಮಾಜವಾದ ವ್ಯವಸ್ಥೆಯ ಐದು ಪ್ರಮುಖ ಧ್ಯೇಯೋದ್ದೇಶಗಳಾಗಬೇಕು. ಇವು ಭಾರತಕ್ಕಷ್ಟೇ ಅಲ್ಲ , ಇಡೀ ವಿಶ್ವಕ್ಕೆ ಬಹಳ ಮಹತ್ವದ್ದಾಗಿದೆ. ಸಮಾಜವಾದ ಎಂದರೇನು? ಡಾ|| ಲೋಹಿಯಾ ಇದನ್ನು ಬಹಳ ಸ್ವಾರಸ್ಯಕರವಾಗಿ ವಿವರಿಸುತ್ತಿದ್ದರು. 1965 ಮಾರ್ಚ್, 16ರಂದು ಲೋಕಸಭೆಯಲ್ಲಿ ಮಾತನಾಡುತ್ತಾ ಅವರು ಸಮಾಜವಾದದ ಲಕ್ಷಣವನ್ನು ಈ ರೀತಿ ತಿಳಿಸಿದ್ದರು. ''ಸಮಾಜವಾದದ ಏಣಿಯಲ್ಲಿ ಒಂದು ಮೆಟ್ಟಿಲು ಕೆಳಗಿಳಿದರೆ ಸಮಾನತೆ ದೊರಕುತ್ತದೆ. ಇನ್ನೊಂದು ಮೆಟ್ಟಲು ಕೆಳಗಿಳಿದರೆ ಆರ್ಥಿಕ ಸಮಾನತೆ, ಸಾಮಾಜಿಕ ಸಮಾನತೆ, ಆಡಳಿತದಲ್ಲಿ ಸಮಾನತೆ ಮತ್ತು ಧಾರ್ಮಿಕ ಸಮಾನತೆಗಳು ಬರುತ್ತವೆ. ಇನ್ನೂ ಒಂದು ಮೆಟ್ಟಲು ಕೆಳಗಿಳಿದರೆ ಆರ್ಥಿಕ ಸಮಾನತೆ ದೊರೆಯುತ್ತದೆ. ಇದಾದ ಮೇಲೆ ಬರುತ್ತದೆ. ಪೂರ್ಣ ಸಮಾನತೆ ಮತ್ತು ಸರ್ವ ಸಮಾನತಾವಾದ''.

ಡಾ|| ಲೋಹಿಯಾ ಅವರು ಮಹಾನ್ ದೇಶಭಕ್ತರು. ಆದರೆ, ಸಂಕುಚಿತ ವಿಚಾರಗಳು ಮತ್ತು ಪ್ರಾದೇಶಿಕ ಭಾವನೆಗಳಿಂದ ಅವರು ಎಂದು ವಿಚಲಿತರಾಗುತ್ತಿರಲಿಲ್ಲ. ಅವರು ವಿಶ್ವ ಮಾನವ ಧೋರಣೆಯ ದಾರ್ಶನಿಕ ಹಾಗೂ ವಿದ್ವಾಂಸರಾಗಿದ್ದರು. ಬಂಡವಾಳ ಶಾಹಿಯಾಗಲೀ ಅಥವಾ ಸಮತಾವಾದವಾಗಲೀ (ಕಮ್ಯೂನಿಸಂ) ಮಾನವ ಸ್ವಾತಂತ್ರ್ಯ ಮತ್ತು ವಿಶ್ವ ಏಕತೆಯನ್ನು ಖಾತರಿಯಾಗಿ ನೀಡಲಾರವು. ಏಕೆಂದರೆ ಆ ಗುರಿಗಳನ್ನು ಸಾಧಿಸುವ ಉದ್ದೇಶಕ್ಕಾಗಿಯೇ ಆ ಪದ್ಧತಿಗಳು ರೂಪಿತವಾಗಿಲ್ಲ ಎಂಬುದು ಅವರ ದೃಢ ನಂಬಿಕೆ.

ಡಾ|| ಲೋಹಿಯಾ ಅವರು ಸಾರ್ವಜನಿಕ ವ್ಯವಹಾರ ಮತ್ತು ಆಡಳಿತದಲ್ಲಿ ಸಾಮಂತ ಶೈಲಿಯ ಭಾಷೆಯನ್ನು ಬಳಸುವುದನ್ನು ಕಟುವಾಗಿ ವಿರೋಧಿಸಿದರು. ಜಮೀನ್ದಾರಿ ವೇಷ ಭೂಷಣ ಮತ್ತು ಅರಮನೆಯಂತಹ ಕಟ್ಟಡಗಳನ್ನು ಅವರು

ಖಂಡಿಸುತ್ತಿದ್ದರು. ಅವರ ಪ್ರಕಾರ ಶ್ರೀ ಸಾಮಾನ್ಯನು ಕಷ್ಟ ಕಾರ್ಪಣ್ಯದಲ್ಲಿ ಮತ್ತು ದಾರಿದ್ರ್ಯದಲ್ಲಿ ತೊಳಲಿರುವಾಗ ಈ ಐಷಾರಾಮುಗಳಿಗೆ ಯಾವುದೇ ಹಕ್ಕಿಲ್ಲ. ವಿದೇಶಿಯರ ಭಾಷೆಯನ್ನು ನಮ್ಮ ರಾಷ್ಟ್ರದಲ್ಲಿ ನಾವು ಬಳಸಿದಷ್ಟೂ ಕಾಲ, ಜನಸಾಮಾನ್ಯರಿಗೆ ಒಂದು ಹೊಸ ಯುಗದ ನಾಂದಿ ಹಾಡುವುದಕ್ಕೆ ಸಾಧ್ಯವಾಗುವುದೇ ಇಲ್ಲ ಎಂದು ಹೇಳುತ್ತಿದ್ದರು. ಲೋಹಿಯಾ ಅವರಿಂದಲೇ ಸ್ಫೂರ್ತಿಪಡೆದು ನಾವು ಲೋಕಸಭೆಯಲ್ಲಿ ತಮಿಳು, ತೆಲುಗುಗಳಂತಹ ದಕ್ಷಿಣ ಭಾರತದ ಭಾಷೆಗಳನ್ನು ಜಾರಿಗೆ ತಂದೆವು. ಲೋಹಿಯಾ ಅವರ ನೇತೃತ್ವದಲ್ಲಿ, ಹಿಂದಿಯೇತರ ಭಾಷೆಯಲ್ಲಿ ಮಾತನಾಡುವಂತಹ ನನ್ನಂಥವರು ಲೋಕಸಭೆ ಒಳಗೆ ಮತ್ತು ಹೊರಗೆ ಹಿಂದಿ ಮತ್ತಿತರ ಭಾರತೀಯ ಭಾಷೆಗಳನ್ನು ಬಳಸುವುದು ಅಗತ್ಯ ಎಂದು ಒತ್ತಿ ಹೇಳಿದೆವು. ನಾನು ಒಂದು ದಿನ ಕಾಲವಶವಾಗುತ್ತೇನೆ, ಆದರೆ, ಇಡೀ ಮಾನವ ಸಮುದಾಯವಂತೂ ಇದ್ದೇ ಇರುತ್ತದೆ ಮತ್ತು ಅಂತಿಮವಾಗಿ ಸಮಾಜವಾದವೇ ಜಯಶೀಲವಾಗುತ್ತದೆ ಎಂಬ ದೃಢ ನಂಬಿಕೆಯಿಂದ ಡಾ॥ಲೋಹಿಯಾ ಸಾಮಾಜಿಕ ಸಮಾನತೆಯನ್ನು ಸಾಧಿಸುವುದಕ್ಕಾಗಿ ಅವಿರತವಾಗಿ ಹೋರಾಡಿದರು. ಇಂತಹ ಮಹಾನ್ ವಿಚಾರವಾದಿ ಮತ್ತು ತತ್ವಜ್ಞಾನಿ, ಸಮಾಜವಾದವನ್ನು ಸ್ಥಿರವಾಗಿ ಸ್ಥಾಪಿಸಬೇಕೆಂದು ಹೋರಾಡುತ್ತಿರುವಾಗಲೇ ಅಕಾಲಮೃತ್ಯುವಿಗೆ ತುತ್ತಾದದ್ದು ದೇಶಕ್ಕೆ ಸಮಾಜಕ್ಕೆ ಹಾಗೂ ರಾಜಕೀಯ ರಂಗಕ್ಕೆ ಭರಿಸಲಾಗದ ನಷ್ಟ ಎಂದೇ ಹೇಳಬೇಕು. ಈ ರಾಷ್ಟ್ರದ ಜನತೆಗೆ ಸಾಮಾಜಿಕ ವ್ಯವಸ್ಥೆಯ ಬಗ್ಗೆ ಒಂದು ಪರಿಕಲ್ಪನೆಯನ್ನು ಹಾಗೂ ಒಂದು ಸಿದ್ಧಾಂತವನ್ನು ಅವರು ಬಿಟ್ಟು ಹೋದರು. ಅದಕ್ಕಾಗಿ ಈ ದೇಶದ ಮುಂಬರುವ ಪೀಳಿಗೆಗಳು ಅವರನ್ನು ಸದಾ ಸ್ಮರಿಸಿ ಗೌರವಿಸುತ್ತಾರೆ. ಸಮಾಜವಾದದ ಚರಿತ್ರೆಯಲ್ಲಿ ಅವರ ಹೆಸರನ್ನು ಸುವರ್ಣಾಕ್ಷರದಲ್ಲಿ ಬರೆಯಲಾಗುತ್ತದೆ ಮತ್ತು ಅದು ಸದಾ ಉಜ್ವಲವಾಗಿರುತ್ತದೆ.

ಸರ್ಕಾರವು ಅವರ ಆರೋಗ್ಯದ ಬಗ್ಗೆ, ಚಿಕಿತ್ಸೆ ಬಗ್ಗೆ, ಸರಿಯಾದ ಎಚ್ಚರಿಕೆ ವಹಿಸದೇ ಇದ್ದ ಕಾರಣ ಡಾ॥ ಲೋಹಿಯಾ ಅವರು 1967 ರ ಅಕ್ಟೋಬರ್ 12 ರಂದು ಕೊನೆಯುಸಿರೆಳೆದರು. ಹುಟ್ಟುವಾಗಲೂ ಬರಿಗೈಯಲ್ಲೇ ಬಂದಿದ್ದರು. ಅವರು ಸಾಯುವಾಗಲೂ ಏನೂ ಇರಲಿಲ್ಲ. ಸಂಪತ್ತು, ಮನೆ, ಮಠ, ಕುಟುಂಬ ಈ ಯಾವ ಐಹಿಕ ಲಿಪ್ತತೆ ಇಲ್ಲದೆ, ಪೂರ್ಣ ಮುಕ್ತರಾಗಿ ಅವರು ತೆರಳಿದರು. ಇಡೀ ಮಾನವ ಸಮುದಾಯವೇ ಅವರ ಕುಟುಂಬವಾಗಿತ್ತು ''ವಸುಧೈವ ಕುಟುಂಬಕಂ'' (ವಿಶ್ವಕುಟುಂಬ) ಎಂಬ ಆರ್ಯಸೂಕ್ತಿಯನ್ನು ಅವರು ನಂಬಿದ್ದರು ಮತ್ತು ಪಾಲಿಸಿದ್ದರು.

ಇನ್ನೊಂದು ವಿಷಯವನ್ನು ಹೇಳಲೇಬೇಕು, ದಿನನಿತ್ಯವೂ ಅನೇಕ ಬಡವರ ಅನಾಥ ಶವಗಳನ್ನು ದಹನ ಮಾಡುವ ದೆಹಲಿಯ ವಿದ್ಯುತ್ ಚಿತಾಗಾರದಲ್ಲಿಯೇ ಡಾ॥ಲೋಹಿಯಾ ಅವರ ಪಾರ್ಥಿವ ಶರೀರವನ್ನು ದಹನ ಮಾಡಲಾಯಿತು. ಇದು ಬಡವರ ಬಗ್ಗೆ ಅವರಿಗಿದ್ದ ಪ್ರೀತಿ ಮತ್ತು ವಿಶ್ವಾಸ ಹಾಗೂ ಸಾಯುಜ್ಯಕ್ಕೆ ನಿದರ್ಶನವಾಗಿದೆ.

-:=:=:-

## 3. ಮಹಾನ್ ಸಮಾಜವಾದಿ - ಡಾ|| ರಾಮಮನೋಹರ್ ಲೋಹಿಯಾ.

-ಸುರೇಂದ್ರನಾಥ ದ್ವಿವೇದಿ *

ಡಾ|| ರಾಮ ಮನೋಹರ್ ಲೋಹಿಯಾ ನನ್ನ ಒಬ್ಬ ಕಾಮ್ರೇಡ್ ಹಾಗೂ ನಾಯಕರಾಗಿದ್ದರು. ನಾವು ಮೂರು ದಶಕಗಳಿಗೂ ಹೆಚ್ಚು ಕಾಲ ಸಮಾಜವಾದಿ ಆಂದೋಲನದಲ್ಲಿ ಒಟ್ಟಿಗೆ ದುಡಿದಿದ್ದೆವು. ಸಮಾಜವಾದಿ ಆಂದೋಲನದ ಬಹಳ ಪ್ರಮುಖವಾದಂತಹ ಘಟ್ಟದಲ್ಲಿ ಇವರು ಅಕಾಲ ಮೃತ್ಯುಗೀಡಾಗಿದ್ದು ಇಡೀ ರಾಷ್ಟ್ರಕ್ಕೇ ಒಂದು ತುಂಬಲಾಗದ ನಷ್ಟ.

ನಮ್ಮ ಪೀಳಿಗೆಯಲ್ಲೇ ಮಾಹಾನ್ ಎತ್ತರಕ್ಕೆ ಏರಿದ ಏಕೈಕ ವ್ಯಕ್ತಿ ಇವರು. ಈ ದೇಶದ ಧೀರ ಸ್ವಾತಂತ್ರ್ಯ ಹೋರಾಟಗಾರರು ಮತ್ತು ರಾಷ್ಟ್ರಮಟ್ಟದ ನಾಯಕರುಗಳ ತಾರಪುಂಜದಲ್ಲಿ ಇವರ ಹೆಸರು ಸದಾ ಉಜ್ವಲ. ಇವರು ಅನೇಕ ಬಾರಿ ಕಾರಾವಾಸಕ್ಕೆ ಈಡಾಗಿದ್ದಾರೆ. ಬ್ರಿಟಿಷ್ ಆಡಳಿತಕ್ಕಿಂತಲೂ ಕಾಂಗ್ರೆಸ್‌ನ ಆಡಳಿತದಲ್ಲಿ ಇವರು ಸೆರೆಗೆ ಹೋದದ್ದೇ ಹೆಚ್ಚು. ಅನ್ಯಾಯ ಕಂಡರೆ ಅವರಿಗೆ ಸಹಿಸುವುದಕ್ಕೆ ಆಗುತ್ತಿರಲಿಲ್ಲ. ಅನ್ಯಾಯ ಎಲ್ಲಿ ಕಂಡು ಬಂದರೂ ಸರಿಯೇ ಎಲ್ಲ ವಿಧದಲ್ಲೂ, ಒಮ್ಮೊಮ್ಮೆ ಒಬ್ಬಂಟಿಯಾಗಿಯೂ, ಪ್ರತಿಭಟಿಸುತ್ತಿದ್ದಂತಹ ಮಹಾನ್ ಹೋರಾಟಗಾರರು ಅವರು. ಭಾರತದ ಮಣ್ಣಿನಿಂದ ಬ್ರಿಟಿಷ್ ಸಾಮ್ರಾಜ್ಯ ಶಾಹಿ ಮತ್ತು ಊಳಿಗಮಾನ್ಯ ಪದ್ಧತಿಯ ಕಟ್ಟಕಡೆಯ ಕುರುಹುಗಳೂ ಇಲ್ಲವಾಗುವ ವರೆಗೆ ವಿರಮಿಸಲು ಅವರು ಇಚ್ಛಿಸುತ್ತಿರಲಿಲ್ಲ. ಸ್ವತಂತ್ರ ಭಾರತದ ಅವರ ಕನಸು ಕೈಲಾಸ ಮಾನಸ ಸರೋವರದಿಂದ ಹಿಡಿದು ಕನ್ಯಾಕುಮಾರಿಯವರೆಗೂ ವ್ಯಾಪಿಸಿತ್ತು. ಹೀಗಾಗಿ ಪೊರ್ಚುಗೀಸ್ ಸಾಮ್ರಾಜ್ಯ ಶಾಹಿಯ ವಿರುದ್ಧ ಪ್ರತಿಭಟಿಸಿ ಗಟ್ಟಿ ಧ್ವನಿಯನ್ನೆತ್ತಿದರು. ಗೋವಾದಲ್ಲಿ ಸೆರೆವಾಸಕ್ಕೆ ಈಡಾದ ಪ್ರಪ್ರಥಮ ಭಾರತೀಯರು ಅವರು. ಇದೇ ರೀತಿ ಈಶಾನ್ಯ ಭಾಗಗಳಲ್ಲಿ ಇನ್ನರ್ ಲೈನ್ ಬಾರ್ ವಿರುದ್ಧ ಪ್ರತಿಭಟಿಸಿದರು. ಮಣಿಪುರದಲ್ಲೂ ಬಂಧನಕ್ಕೀಡಾದರು. ಅವರದು ಕ್ರಾಂತಿಕಾರಿ ಮನಸ್ಸು. ಗಾಂಧೀಜಿಯವರ ನಂತರ ಲೋಹಿಯಾ ಅವರೇ ಸ್ವತಂತ್ರ ಭಾರತದಲ್ಲಿ ಪ್ರತಿಭಟನಾ ಆಂದೋಲನದ ಸಂಕೇತ.

ಬರ್ಲಿನ್ ವಿಶ್ವವಿದ್ಯಾಲಯದಲ್ಲಿ ಡಾಕ್ಟರೇಟ್ ಪದವಿ ಪಡೆದ ತರುವಾಯ ಭಾರತಕ್ಕೆ ಹಿಂದಿರುಗಿ ಬಂದ ಕ್ಷಣದಿಂದ ಸಮಾಜವಾದಿ ಆಂದೋಲನಕ್ಕೆ ಸೇರಿಕೊಂಡರು.

* ಶ್ರೀ ದ್ವಿವೇದಿಯವರು ಮಾಜಿ ಸಂಸತ್ ಸದಸ್ಯರು.

7

ಜರ್ಮನಿಯಲ್ಲಿ ನಾಝಿ ಚಳುವಳಿಯ ಭೀಕರತೆಯನ್ನು ಕಣ್ಣಾರೆ ಕಂಡಿದ್ದ ಅವರು ಹಿಂಸೆ ಮತ್ತು ನಾಝಿಸಂ ಅನ್ನು ಬಹಳವಾಗಿ ದ್ವೇಷಿಸುತ್ತಿದ್ದರು.

ಭಾರತದ ಸಮಾಜವಾದಕ್ಕೆ ಒಂದು ಹೊಸ ಕಲ್ಪನೆ ಹಾಗೂ ತಾತ್ವಿಕ ಹಿನ್ನೆಲೆ ಕೊಡುವುದಕ್ಕಾಗಿ ಅವರು ಶ್ರಮಿಸಿದರು ಮತ್ತು ಹೋರಾಡಿದರು. ಅಂದು ಕಾಂಗ್ರೆಸ್ ಸಮಾಜವಾದಿ ಪಕ್ಷ ಕಮ್ಯೂನಿಸ್ಟ್‌ರೊಂದಿಗೆ ಸಂಯುಕ್ತ ರಂಗವನ್ನು ಮಾಡಿಕೊಳ್ಳುವ ನೀತಿಯನ್ನು ಅನುಸರಿಸುತ್ತಿತ್ತು. ಇದಕ್ಕೆ ವಿರುದ್ಧವಾಗಿ ಬಂಡೆದ್ದ ಸಮಾಜವಾದಿ ನಾಯಕರುಗಳಲ್ಲಿ ಲೋಹಿಯಾ ಮೊದಲಿಗರು. ಈ ದೃಷ್ಟಿಯಲ್ಲಿ ನೋಡಿದಾಗ ಅವರು ಒಬ್ಬ ಸಾಂಪ್ರಾದಾಯಿಕ ಸಮಾಜವಾದಿ ಆಗಿರಲಿಲ್ಲ. ಮಾರ್ಕ್ಸ್‌ವಾದ ಮತ್ತು ಕಮ್ಯೂನಿಸ್ಟ್ ನಿರಂಕುಶವಾದ ಎರಡನ್ನೂ ಅವರು ವಿರೋಧಿಸುತ್ತಿದ್ದರು. ಭಾರತದ ಸಮಾಜವಾದಿ ಹೋರಾಟ ಮಾರ್ಕ್ಸ್ ವಿಚಾರಧಾರೆಯಿಂದ ಮತ್ತು ಕಾರ್ಯ ವಿಧಾನಗಳಿಂದ ಮುಕ್ತವಾಗಬೇಕೆಂದು ಅವರು ಬಯಸಿದರು. ಗಾಂಧೀಜಿಯ ಅಹಿಂಸಾವಾದದಲ್ಲಿ ಅವರಿಗೆ ತುಂಬಾ ನಂಬಿಕೆ ಇತ್ತು. ಆದುದರಿಂದ , ಗಾಂಧಿ ವಿಚಾರಧಾರೆ ಹಾಗೂ ಮಾರ್ಕ್ಸ್ ವಿಚಾರಧಾರೆ ಎರಡನ್ನೂ ಒಂದು ಬೆಸೆದು ಸುಂದರ ಸಮನ್ವಯ ತರಲು ಮಹಾನ್ ಪಾತ್ರ ವಹಿಸಿದರು. ಬಂಡವಾಳ ಶಾಹಿಯ ವಿರುದ್ಧ ಸಮಾಜವಾದಿ ಪಕ್ಷ ಬಹಳ ಪರಿಣಾಮಕಾರಿಯಾದ ಆಯುಧವಾಗುವಂತೆ ಅದಕ್ಕೆ ಹೊಸ ಅರ್ಥ ಹಾಗೂ ಕಾರ್ಯ ವಿಧಾನವನ್ನು ನೀಡಿದ್ದು ಅವರ ಅತ್ಯುತ್ತಮ ಕೊಡುಗೆ. ಕಮ್ಯೂನಿಸಂ ಮತ್ತು ಬಂಡವಾಳ ಶಾಹಿ ಎರಡೂ ಒಂದೇ ನಾಣ್ಯದ ಎರಡು ಮುಖಗಳು. ಎರಡೂ ಕೇಂದ್ರೀಕೃತ ಆಡಳಿತ ಹಾಗೂ ಮಾನವ ಸ್ವಾತಂತ್ರ್ಯ ಮತ್ತು ಹಕ್ಕುಗಳ ದಮನದ ಬಗ್ಗೆ ನಂಬಿಕೆ ಇಟ್ಟುಕೊಂಡಿವೆ ಎಂದು ಅವರು ಹೇಳುತ್ತಿದ್ದರು. ಆಚಾರ್ಯ ನರೇಂದ್ರ ದೇವ ಮತ್ತು ಜಯಪ್ರಕಾಶ್ ನಾರಾಯಣರಂತಹ ಮಾರ್ಕ್ಸ್‌ವಾದಿಗಳು ಕೊನೆಗೆ ಕಮ್ಯೂನಿಸ್ಟ್‌ರ ಸಹವಾಸವನ್ನು ತೊರೆದು ಬರಬೇಕಾಯಿತು.

ಆಗ ಇಡೀ ಸಮಾಜವಾದಿ ಆಂದೋಲನ ಈ ಮೂವರು ನಾಯಕರ ವಿಚಾರ ಮತ್ತು ಕಾರ್ಯಗಳ ಪ್ರಭಾವಕ್ಕೆ ಒಳಗಾಯಿತು. ಕಮ್ಯೂನಿಸ್ಟರ ನಿರಂಕುಶವಾದದಿಂದ ಸಂಪೂರ್ಣವಾಗಿ ಪ್ರತ್ಯೇಕಗೊಂಡ ಸಮಾಜವಾದಿಗಳು ಒಂದು ಸಕಾರಾತ್ಮಕ ಮತ್ತು ವಸ್ತುನಿಷ್ಠ ದೃಷ್ಟಿಕೋನ ಬೆಳೆಸಿಕೊಂಡರು. ಪ್ರಜಾಸತ್ತಾತ್ಮಕ ಸಮಾಜವಾದ ಅವರ ಆದರ್ಶ, ಗುರಿ ಮತ್ತು ಧ್ಯೇಯವಾಗಿತ್ತು. ಸೋವಿಯತ್ ರಷ್ಯಾ ಹಾಗೂ ಪೂರ್ವ ಯೂರೋಪಿನಲ್ಲಿ ಕಮ್ಯೂನಿಸ್ಟ್ ಸಾಮ್ರಾಜ್ಯ ಕುಸಿದುಬಿದ್ದು ಅದರ ಸ್ಥಾನದಲ್ಲಿ ಪ್ರಜಾಸತ್ತಾತ್ಮಕ ಸಮಾಜವಾದವು ಕ್ರಮೇಣ ನೆಲೆಗೊಳ್ಳುತ್ತಿರುವುದು, ಭಾರತದ ಸಮಾಜವಾದಿಗಳಿಗೆ ಹೆಮ್ಮೆಯ ವಿಷಯವಾಗಿದೆ. ಇದರಿಂದ ನಮಗೆ ಮಹಾನ್ ಸಮರ್ಥನೆ ದೊರೆತಿದೆ. ಇಂತಹ

ಸಮಯದಲ್ಲಿ ಜೆ.ಪಿ. ಲೋಹಿಯಾ ಮತ್ತು ಆಚಾರ್ಯ ನರೇಂದ್ರ ದೇವರು ಬದುಕಿದ್ದಿದ್ದರೆ ಇಡೀ ದೇಶ ಸಂಭ್ರಮದಿಂದ ಅವರನ್ನು ಸನ್ಮಾನಿಸುತ್ತಿತ್ತು. ಅವರೆಲ್ಲೆಲ್ಲಾ ವಯಸ್ಸಿನಲ್ಲಿ ಕಿರಿಯರಾಗಿದ್ದ ಲೋಹಿಯಾ ಅವರು ಬದುಕಿದ್ದಿದ್ದರೆ ಇಡೀ ಭಾರತದ ರಾಜಕಾರಣವೇ ಒಂದು ಕ್ರಾಂತಿಕಾರಿ ಬದಲಾವಣೆ ಪಡೆಯುತ್ತಿತ್ತು ಎಂದು ನಾನು ದೃಢವಾಗಿ ನಂಬಿದ್ದೇನೆ.

ಲೋಹಿಯಾ ಅವರ ಕಡಾಖಂಡಿತವಾಗಿ ಹೇಳುವ ಧೋರಣೆಯಿಂದ ಮತ್ತು ಅವರ ಆದ್ಯ ಪ್ರವರ್ತಕ ಪಾತ್ರದಿಂದಲೇ ಭಾರತದ ಸಮಾಜವಾದಿಗಳು ತಮ್ಮ ಅಂತರಾಷ್ಟ್ರೀಯ ನೀತಿಯನ್ನು ಬೆಳೆಸಿಕೊಳ್ಳುವುದು ಸಾಧ್ಯವಾಯಿತು. ಅವರು ವಿದೇಶಾಂಗ ವ್ಯವಹಾರಗಳಲ್ಲಿ ತೃತೀಯ ವಿಶ್ವವೊಂದು ರೂಪುಗೊಳ್ಳಬೇಕು ಎಂದು ವಾದಿಸುತ್ತಿದ್ದರು. ಈ ನೀತಿಗೆ ಅನುಗುಣವಾಗಿ ಅಂತಾರಾಷ್ಟ್ರೀಯ ಸಮಾಜವಾದಿ ನೀತಿಯನ್ನು ರೂಪಿಸಲಾಯಿತು. ನಾವು ಸೋಶಿಯಲಿಸ್ಟ್ ಇಂಟರ್ ನ್ಯಾಷನಲ್ ಅವರ ಜೊತೆಗೋ ಅಥವಾ ಕಮ್ಯೂನಿಸ್ಟ್ ಇಂಟರ್ ನ್ಯಾಷನಲ್ ಅವರ ಜೊತೆಗೋ ಸೇರದೆ ಇವೆರಡೂ ಸಂಸ್ಥೆಗಳಿಗೆ ಭಿನ್ನವಾದಂತಹ, ಆದರೆ ಸ್ವತಂತ್ರವಾದಂತಹ ಒಂದು ಏಶಿಯನ್ ಸೋಶಿಯಲಿಸ್ಟ್ ಫ್ರಂಟ್ ಸೃಜಿಸಬೇಕೆಂದು ಅವರು ಇಚ್ಚಿಸಿದರು. ಲೋಹಿಯಾ ಬಹುಪಾಲು ಎಲ್ಲ ದಕ್ಷಿಣ ಏಷ್ಯಾ ರಾಷ್ಟ್ರಗಳಿಗೂ ಭೇಟಿ ಇತ್ತಿದ್ದರು. ಸೋದರ ಸಮಾಜವಾದಿ ಪಕ್ಷಗಳೊಂದಿಗೆ ಸಂಪರ್ಕ ಬೆಳೆಸಿಕೊಂಡರು ಈ ಪರಿಣಾಮವಾಗಿ, 1953ರಲ್ಲಿ ರಂಗೂನ್‌ನಲ್ಲಿ ''ಏಷಿಯನ್ ಸಮಾಜವಾದಿ ಸಮ್ಮೇಳನ'' ಜರುಗಿತು. ಜಯಪ್ರಕಾಶ್ ನಾರಾಯಣ್ ಅವರು ಈ ಸಮ್ಮೇಳನವನ್ನು ಉದ್ಘಾಟಿಸಿದರು. ಅದೇನೂ ಕಮ್ಯೂನಿಸ್ಟ್ ವಿರೋಧಿ ಸಮ್ಮೇಳನವಾಗಿರಲಿಲ್ಲ, ಆದರೆ ಪ್ರಜಾಸತ್ತಾತ್ಮಕ ಸಮಾಜವಾದಿ ಆದರ್ಶವನ್ನು ಒಪ್ಪಿಕೊಂಡಂತಹ ಏಷಿಯನ್ ಸಮಾಜವಾದಿಗಳ ಸಮಾವೇಶವಾಗಿತ್ತು. ಏಷಿಯನ್ ಸೋಶಿಯಲಿಸ್ಟ್ ಬ್ಯೂರೋ ಕೆಲ ವರ್ಷಗಳ ಕಾಲ ಕೆಲಸ ಮಾಡಿತು. ಆದರೆ ಭಾರತವೂ ಸೇರಿದಂತೆ ಏಷಿಯಾದ ರಾಷ್ಟ್ರಗಳಲ್ಲಿ ಸಮಾಜವಾದಿ ಪಕ್ಷಗಳು ಕ್ಷೀಣವಾಗುತ್ತಾ ಬಂದಂತೆ ಕ್ರಮೇಣ ಇದು ಸಹಜವಾಗಿ ಸಾವನ್ನಪ್ಪಿತು. ಇಲ್ಲಿ ನಾನು ಮನವರಿಕೆ ಮಾಡಿಕೊಡಬಯಸುವುದೇನೆಂದರೆ ಬಹಳ ದೂರ ದೃಷ್ಟಿಯನ್ನು ಇಟ್ಟುಕೊಂಡು, ಲೋಹಿಯಾ ಅವರು ಸಮಾಜವಾದಿ ಆಂದೋಲನಕ್ಕೆ ಒಂದು ಸ್ಪಷ್ಟವಾದ ಅಂತಾರಾಷ್ಟ್ರೀಯ ಹಾಗೂ ಆಂತರಿಕ ರೂಪವನ್ನು ನೀಡಿದರು. ಅಭಿವೃದ್ಧಿ ಶೀಲ ಪ್ರಜಾಸತ್ತಾತ್ಮಕ ಸಮಾಜವಾದಿ ಆದರ್ಶದ ಬಗ್ಗೆ ಆಸಕ್ತರಾಗಿರುವವರೆಲ್ಲಾ ಸಮಾಜವಾದಿ ಆಂದೋಲನದ ಸಂದರ್ಭದಲ್ಲಿ ಹೊರ ಬಂದ ಸಾಹಿತ್ಯವನ್ನು ಓದಿದಲ್ಲಿ ಬಹಳಷ್ಟು ಅನುಕೂಲ ಪಡೆಯುತ್ತಾರೆ ಎಂಬ ನಂಬಿಕೆ ನನಗಿದೆ.

ಲೋಹಿಯಾ ಒಬ್ಬ ಮಹಾನ್ ಪ್ರತಿಭಾಶಾಲಿ. ಸ್ವೋಪಜ್ಞ, ಚಿಂತಕ ಹಾಗೂ ಮಹಾನ್ ಸಮಾಜವಾದಿ ಹೋರಾಟಗಾರ ಎಂಬುದು ನಿರ್ವಿವಾದ. ಆದರೆ, ಅವರು ಸಮಾಜವಾದಿ ಆಂದೋಲನದಲ್ಲಿ ಒಗ್ಗಟ್ಟನ್ನು ಉಳಿಸಿಕೊಂಡು ಬರುವಲ್ಲಿ ವಿಫಲರಾದರು. ಸಮಾಜವಾದಿ ಸೋದರರಲ್ಲಿ ಮೂಲಭೂತವಾದ ಮತ್ತು ಬುನಾದಿ ಸ್ವರೂಪದ ಭಿನ್ನಾಭಿಪ್ರಾಯವಿದ್ದವು ಎಂಬ ಮಾತನ್ನು ನಾನು ಒಪ್ಪುವುದಿಲ್ಲ. ಆದರೆ ವಿವಿಧ ಹಂತದ ಸಮಾಜವಾದಿ ನಾಯಕರುಗಳಲ್ಲಿ ವೈಯಕ್ತಿಕ ಕಿತ್ತಾಟ, ಅಸಹನೆ, ಅಸೂಯೆ, ಬೆಳೆದು ಸಮಾಜವಾದಿ ಪಕ್ಷ ಒಡೆಯಲು ಕಾರಣವಾಯಿತು. ಇವತ್ತು ಸಮಾಜವಾದಿ ಸಂಸ್ಥೆಯನ್ನು ಹತ್ತಿರತ್ತಿರ ಹೋಲುವಂತಹ ಯಾವ ಸಂಸ್ಥೆಯೂ ಅಸ್ತಿತ್ವದಲ್ಲಿಲ್ಲದಿರುವುದು ಬಲು ದೊಡ್ಡ ದುರಂತ. ಇಡೀ ಸಮಾಜವಾದಿ ಸೌಧವೇ ಚೂರು ಚೂರಾಗಿ ಒಡೆದು ಹೋಗಿದೆ. ಈಗ ಉಳಿದಿರುವುದೇನಿದ್ದರೂ ಐತಿಹಾಸಿಕ ದಾಖಲೆ ಮಾತ್ರ.

-:=:-

# 4. ಕ್ರಾಂತಿಕಾರಿಯಾಗಿ ಡಾ|| ರಾಮಮನೋಹರ ಲೋಹಿಯಾ

- ಜಗದೀಶ ಪ್ರಸಾದ ಚತುರ್ವೇದಿ *

ಡಾ|| ರಾಮಮನೋಹರ ಲೋಹಿಯಾ ಅವರು ಭಾರತದಲ್ಲಿ ಹೊಸಯುಗದ ಪ್ರವರ್ತಕರಾದ ಶ್ರೇಷ್ಠ ರಾಜಕಾರಣಿಯಾಗಿದ್ದರು. ಇಂಥ ಒಬ್ಬ ಮುತ್ಸದ್ದಿಯ ಶ್ರೇಷ್ಠತೆಯ ಮಹತ್ತ್ವವನ್ನು ಭಾರತದಲ್ಲಾಗಲಿ ಪರದೇಶಗಳಲ್ಲಾಗಲಿ ಸುಲಭವಾಗಿ ಗುರುತಿಸಲಾಗಲಿಲ್ಲವೆಂಬುದು ಸತ್ಯಸಂಗತಿ. ಆದಾಗ್ಯೂ ಡಾ||ರಾಮಮನೋಹರ ಲೋಹಿಯಾ ಅವರು ಸ್ವತಂತ್ರ ಭಾರತದ ರಾಜಕಾರಣದ ಮೇಲೆ ಬೀರಿರುವ ದೂರದೃಷ್ಟಿಯ ಪರಿಣಾಮಗಳನ್ನು ನಾವೀಗ ಕಾಣುತ್ತಿರುವುದೂ ಅಷ್ಟೇ ನಿಜ. ಭಾರತದ ಸ್ವಾತಂತ್ರ್ಯ ಹೋರಾಟದಲ್ಲಿ ಡಾ|| ರಾಮಮನೋಹರ ಲೋಹಿಯಾ ಅವರು ವಹಿಸಿದ್ದ ನಿರ್ಣಾಯಕ ಪಾತ್ರವನ್ನು ನಾವು ಬಹುಮಟ್ಟಿಗೆ ಮರೆಯುತ್ತೇವೆ. ಏಕೆಂದರೆ ಪ್ರಾಯಶಃ ಮಹಾತ್ಮಗಾಂಧಿ, ಜವಹರಲಾಲ್ ನೆಹರೂ, ಆಚಾರ್ಯ ನರೇಂದ್ರ ದೇವ್, ಡಾ|| ರಾಜೇಂದ್ರ ಪ್ರಸಾದರಂಥ ಹಿರಿಯ ಧುರೀಣರು ಆ ಸಮಯದಲ್ಲಿ ಇದ್ದುದು ಇದಕ್ಕೆ ಕಾರಣವಿರುಬಹುದು. ಅಂಥವರಿಗೆ ಹೋಲಿಸಿದಾಗ ಡಾ|| ಲೋಹಿಯಾರನ್ನು ಸ್ವಲ್ಪಮಟ್ಟಿಗೆ ಕೆಳದರ್ಜೆಯಲ್ಲಿ ಪರಿಗಣಿಸಲಾಗುತ್ತಿತ್ತು. ಕೇವಲ ತಮ್ಮ ತತ್ವಗಳಿಗೆ ಬದ್ಧರಾಗಿದ್ದುದು ಮಾತ್ರವಲ್ಲ, ಇತರರಿಗೆ ಮರ್ಯಾದೆಯನ್ನು ನೀಡಲೋಸುಗ ಡಾ|| ಲೋಹಿಯಾ ಅವರು ಅನೇಕ ಉನ್ನತ ಸ್ಥಾನಗಳನ್ನು ಅಲಂಕರಿಸುವುದನ್ನು ತಪ್ಪಿಸಿಕೊಂಡರು! ತತ್ಫಲವಾಗಿ, ಅವರು ಹೊಂದಬೇಕಾಗಿದ್ದ ಪದವಿಗಳನ್ನು ಪಡೆದ ವ್ಯಕ್ತಿಗಳು ಹೆಚ್ಚು ಪ್ರಸಿದ್ಧರಾದರು. ನಾನು ಹೇಳಿದ ಆ ವ್ಯಕ್ತಿಗಳಿಗೆ ಹೋಲಿಸಿದಾಗ ಡಾ|| ಲೋಹಿಯಾ ಅವರು ಇನ್ನೂ ಹೆಚ್ಚಿನ ಕೊಡುಗೆ ನೀಡಿದ್ದಾರೆಂದು ಹೇಳುತ್ತಿಲ್ಲ. ಆದರೆ ಆ ಮುಖಂಡರು ಭಾರತಕ್ಕೆ ಅಂದಿನ ಮುಖಂಡರಾಗಿದ್ದರೆ ಡಾ|| ಲೋಹಿಯಾ ಅವರು ಭಾರತದ ಮುಂದಿನ ನಾಯಕರಾಗಿದ್ದರು! ಬಹುಶಃ ಈಗ ಅವರು ಬದುಕಿದ್ದಿದ್ದರೆ ಅತ್ಯಂತ ಗೌರವಾನ್ವಿತ ಪ್ರಭಾವಶಾಲಿ ಮಹನೀಯರೆಂದು ಪರಿಗಣಿತರಾಗುತ್ತಿದ್ದರು. ಇಂದು ನಾವು ಕಾಣುತ್ತಿರುವ ರಾಷ್ಟ್ರ ರಚನೆ ಡಾ|| ಲೋಹಿಯಾರವರ ಕಲ್ಪನೆಯ ಕೂಸು.

ಡಾ|| ಲೋಹಿಯಾ ಅವರು ತಮ್ಮ ಕಾಲಕ್ಕಿಂತ ಅದೆಷ್ಟೋ ಮುಂದಿನ ಭವಿಷ್ಯದ ಕಲ್ಪನೆಯನ್ನು ಮೂಡಿಸಿಕೊಂಡಿದ್ದೇ ಅವರ ದುರದೃಷ್ಟವೆನ್ನಬಹುದು. ಜೊತೆಗೆ ಅವರು ನಂಬಿದ್ದ ಅನೇಕ ಸಹಚರ ರಾಜಕಾರಣಿಗಳು ಅವರಿಗೆ ವಿಶ್ವಾಸದ್ರೋಹ ಬಗೆದರು.

---

* ಖ್ಯಾತ ಪತ್ರಕರ್ತ

ಡಾ॥ ಲೋಹಿಯಾರು ತಮ್ಮ ತತ್ವಗಳಿಗೆ ಹೆಚ್ಚುಹೆಚ್ಚು ಅಂಟಿಕೊಂಡರೆ, ಆ ಜನರು ಅಧಿಕಾರ ಸ್ಥರ ಕಡೆಗೆ ವಾಲಿದರು. ಡಾ॥ ಲೋಹಿಯಾರವರು ಪ್ರಾಸ್ಟೇಟ್ ಗ್ರಂಥಿ ಶಸ್ತ್ರಚಿಕಿತ್ಸೆಯ ಸಲುವಾಗಿ ವೆಲಿಂಗಡನ್ ಆಸ್ಪತ್ರೆ ಸೇರಿದ ದಿನ ಅಥವಾ ಅದರ ಹಿಂದಿನ ದಿನದಂದು ನನಗೆ ಅವರೊಡನೆ ಅತ್ಯಂತ ಆತ್ಮೀಯವಾಗಿ ಮಾತನಾಡುವ ಸಂದರ್ಭವೊದಗಿತ್ತು. ಆಗ ಸಂಜೆ ಸಮಯ, ಸೆಂಟ್ರಲ್ ಹಾಲ್‌ನಲ್ಲಿ ಕೆಲವೇ ಮಂದಿ ಕುಳಿತಿದ್ದರು, ನಾವಿಬ್ಬರೂ ಅಕ್ಕಪಕ್ಕ ತೀರಾ ಹತ್ತಿರದಲ್ಲಿ ಕುಳಿತು, ಸುಮಾರು ಹೊತ್ತು ಮಾತನಾಡುತ್ತಿದ್ದೆವು. ಆ ಮಾತುಕತೆ ಈಗ ನನಗೆ ನೆನಪಾದಾಗ, ಹೃದಯಾಂತರಾಳದ ಏಕಾಂತದಿಂದ ತಮ್ಮ ಜೀವನದ ಕೊನೆಯ ದಿನಗಳಲ್ಲಿ ಅವರು ಆಡುತ್ತಿರುವ ಮಾತುಗಳನ್ನು ಕೇವಲ ನಾನೊಬ್ಬನೇ ಕುಳಿತು ಅವರ ಆಳ ಚಿಂತನೆಗಳನ್ನು ಆಲಿಸುತ್ತಿದ್ದಂತೆ ನನಗೆ ಅನ್ನಿಸುತ್ತದೆ. ಅವರು ಮಾತನಾಡುತ್ತ ಹೀಗೆ ಹೇಳಿದರು: 'ಚತುರ್ವೇದಿ, ಜೀವನ ನನಗೆ ಸಂತಸವನ್ನು ಕೊಡಲಿಲ್ಲ'', ನಾನು ಹೇಳಿದೆ ನೀವು ಕೇವಲ ಸಂಜ್ಞೆ ಮಾಡಿದರೆ ಸಾಕು, ಜನತೆ ನಿಮಗಾಗಿ ಏನು ಬೇಕಾದರೂ ಮಾಡಿಯಾರು'' ಅದಕ್ಕೆ ಅವರು ಹೀಗಂದರು; ''ಇಲ್ಲ, ಯಾರೂ ನನ್ನ ಮಾತು ಕೇಳುವುದಿಲ್ಲ''. ನಾನು, ''ನಿಮ್ಮ ಭಾಷಣವನ್ನು ಜನ ಮಂತ್ರಮುಗ್ಧರಾಗಿ ಕೇಳುತ್ತಾರೆಂದೂ, ಅವರ ಸಭೆಗಳಲ್ಲಿ ಸೂಜಿ ಬಿದ್ದರೂ ಕೇಳುದಂಥ ನಿಶ್ಯಬ್ಧ ವಾತಾವರಣವಿರುತ್ತದೆಂದೂ, ಅವರು ಏನನ್ನು ಬರೆದರೂ ಜನರು ಅದನ್ನು ಅತ್ಯಂತ ಗೌರವದಿಂದ ಓದುತ್ತಾರೆ ಮಾತ್ರವಲ್ಲ ವೇದವಾಕ್ಯವೆಂದು ಭಾವಿಸುತ್ತಾರೆಂದೂ'' ಹೇಳಿದೆ. ಆದರೂ ತಾವೊಂದು ಆದರ್ಶದ ಪ್ರತೀಕವಾಗಲಿಲ್ಲವೆಂದು ನೊಂದುಕೊಂಡರು. ನಾನು ತಮಾಷೆಯಾಗಿ ಹೇಳಿದೆ. ''ಡಾಕ್ಟರ್ ಸಾಹೇಬರೆ, ಆದರ್ಶದ ಇಮೇಜು ಕೊಡಲು ನಿಮಗೆ ಸಮಯವಾದರೂ ಎಲ್ಲಿತ್ತು? ನೀವು ಇನ್ನೊಬ್ಬರ ಇಮೇಜಿಗೆ ಮಸಿ ಬಳಿಯುವುದಕ್ಕೇ ನಿಮ್ಮ ಸಮಯವನ್ನೆಲ್ಲ ಮೀಸಲಿಡುತ್ತಿದ್ದಿರಲ್ಲ''! ಆದರೆ, ಈಗ ಡಾ॥ ಲೋಹಿಯಾರ ಆ ದೂರು ಸತ್ಯವಾಗಿದ್ದಿತಲ್ಲದೆ ಅದು ಇಡೀ ಭಾರತ ಸಮಾಜದ ವಿರುದ್ಧವಾಗಿಯೂ ಇದ್ದಿತೆಂಬುದು ನನ್ನ ಅರಿವಿಗೆ ಬರುತ್ತಿದೆ. ಅವರ ದೇಶಬಾಂಧವರು ಡಾ॥ ಲೋಹಿಯಾ ಬದುಕಿದ್ದಾಗ ಅವರ ಮಹತ್ವವನ್ನು ಗುರುತಿಸಲಿಲ್ಲ. ಇದಕ್ಕೆ ಬಹುಶಃ ಎರಡು ಕಾರಣಗಳಿದ್ದವು ಮೊದಲನೆಯಾಗಿ, ಅವರೆಷ್ಟು ನಿಷ್ಠುರರಾಗಿದ್ದರೆಂದರೆ, ಅತ್ಯಂತ ದೊಡ್ಡ ವ್ಯಕ್ತಿಯ ತೀರ ಸಣ್ಣ ತಪ್ಪನ್ನೂ ಕೂಡ ತುಂಬಾ ದೊಡ್ಡದುಮಾಡಿಹೇಳಲು ಸ್ವಲ್ಪವೂ ಹಿಂಜರಿಯುತ್ತಿರಲಿಲ್ಲ! ಎರಡನೆಯದಾಗಿ, ತಮ್ಮ ಸಾಧನೆಗಳ ಬಗ್ಗೆ ತಾವೇ ಎಂದೂ ಡಂಗುರ ಸಾರಲಿಲ್ಲ, ಬೇರೆಯವರಿಗೂ ಹಾಗೆ ಮಾಡಲು ಆಸ್ಪದ ನೀಡಲಿಲ್ಲ.

1936 ರಲ್ಲಿ ಪಂಡಿತ್ ಜವಾಹರಲಾಲ್ ನೆಹರೂ ಅವರು ಭಾರತದ ರಾಷ್ಟ್ರೀಯ ಕಾಂಗ್ರೆಸ್ಸಿನ ಅಧ್ಯಕ್ಷರಾಗಿ ಚುನಾಯಿತರಾದಾಗ, ಮೊಟ್ಟಮೊದಲ ಬಾರಿಗೆ ನಾನು .ಡಾ॥ ರಾಮಮನೋಹರ ಲೋಹಿಯಾ ಅವರ ಹೆಸರನ್ನು ಕೇಳಿದೆ. ಆಚಾರ್ಯ ಕೃಪಲಾನಿ

ಅವರು ಜನರಲ್ ಸೆಕ್ರೆಟರಿಯಾಗಿದ್ದು, ಇತರ ನಾಲ್ಕು ಮಂದಿ ವಿದ್ಯಾವಂತ ತರುಣರನ್ನು ಅಖಿಲ ಭಾರತ ಕಾಂಗ್ರೆಸ್ ಸಮಿತಿ ಆಡಳಿತ ವಿಭಾಗದ ಕಾರ್ಯದರ್ಶಿಗಳನ್ನಾಗಿ ಮಾಡಲಾಗಿತ್ತು. ಅವರುಗಳೆಂದರೆ, ಡಾ|| ರಾಮಮನೋಹರ.ಲೋಹಿಯಾ, ಡಾ|| ಕೆ.ಎಂ. ಅಷರಫ್, ಡಾ|| ಜೈನಲ್ ಅಬೆದಿನ್ ಅಹಮದ (ಜೆಡ್ ಎ ಅಹಮದ) ಮತ್ತು ನಾಲ್ಕನೆಯವರು ಬಹುಶಃ ಒಬ್ಬ ಯೂರೋಪಿಯನ್ ಲಿಯೋನಾರ್ಡ್ ಹಿಫ್ ಡಾ|| ಲೋಹಿಯಾ ಅವರು ಜರ್ಮನಿಯಲ್ಲಿ ತಮ್ಮ ಡಾಕ್ಟರೇಟ್ ಪದವಿಯನ್ನು ಪಡೆದು ಭಾರತಕ್ಕೆ ಹಿಂದಿರುಗಿದ್ದು, ಆರ್ಥಿಕ ವ್ಯವಹಾರ ತಜ್ಞರಾಗಿದ್ದರು. ಆ ವೇಳೆಗಾಗಲೇ ಕಾಂಗ್ರೆಸ್ ಸಮಾಜವಾದಿ ಪಕ್ಷವಾಗಿಬಿಟ್ಟಿತ್ತು. ಡಾ|| ಲೋಹಿಯಾರಿಗೆ ಅದರ ಬಗ್ಗೆ ಸಹಾನುಭೂತಿ. ಹಾಗೂ ಉಳಿದ ಮೂವರು ಕಮ್ಯೂನಿಸ್ಟ್ ಸಿದ್ಧಾಂತದ ಅನುಯಾಯಿಗಳೆಂದು ಪರಿಗಣಿತರಾಗಿದ್ದರು. ಆಚಾರ್ಯ ನರೇಂದ್ರದೇವ್, ಶ್ರೀ ಜಯಪ್ರಕಾಶ್ ನಾರಾಯಣ್ ಮತ್ತು ಶ್ರೀ ಅಚ್ಯುತ ಪಟವರ್ಧನ ಅವರು ಆ ವೇಳೆಗಾಗಲೇ ಕಾಂಗ್ರೆಸ್ ಕಾರ್ಯಕಾರಿ ಸಮಿತಿಯಲ್ಲಿದ್ದರು. ಮಹಾತ್ಮ ಗಾಂಧಿಯವರು ಅವರನ್ನು ಅದರಲ್ಲೂ ವಿಶೇಷವಾಗಿ ಆಚಾರ್ಯ ನರೇಂದ್ರ ದೇವ್ ಮತ್ತು ಶ್ರೀ ಜಯಪ್ರಕಾಶ್ ನಾರಾಯಣ್ ಅವರ ಗುಣ ಪ್ರಶಂಸೆ ಮಾಡುತ್ತಿದ್ದರೂ ಕೂಡ, ಅವರಿಗೆ ಕಾಂಗ್ರೆಸ್ ಸಮಾಜವಾದಿಗಳ ಸಿದ್ಧಾಂತದ ಬಗ್ಗೆ ಸಮಾಧಾನವಿರಲಿಲ್ಲ. 1942 ರ 'ಮಾಡು ಇಲ್ಲವೆ ಮಡಿ' ಚಳುವಳಿಯು ಆರಂಭವಾಗಿ ಮಹಾತ್ಮ ಗಾಂಧಿಯವರನ್ನೂ ಒಳಗೊಂಡು ರಾಷ್ಟ್ರದ ಹಿರಿಯ ಮುಖಂಡರುಗಳ ಬಂಧನವಾದಾಗ, 'ಆಗಸ್ಟ್ ಕ್ರಾಂತಿ' ಎಂದೇ ಕರೆಯಬಹುದಾದ ಆ ಚಳವಳಿಯನ್ನು ಪೊಲೀಸ್ ಕಾರ್ಯಾಚರಣೆಯ ಕಣ್ತಪ್ಪಿಸಿ ನಡೆಸಿದ್ದು ಡಾ|| ರಾಮಮನೋಹರ ಲೋಹಿಯಾ ಮತ್ತು ಅವರ ಅನುಯಾಯಿಗಳೇ! ಆಗ ಪೋಲಿಸರು ಬಂಧಿಸಲಾಗದ ನಾಯಕರಲ್ಲಿ ಅವರೂ ಒಬ್ಬರಾಗಿದ್ದರು. ತದನಂತರ, ಬ್ರಿಟಿಷರ ವಿರುದ್ಧ ಒಂದು ಬಗೆಯ ಉಗ್ರ ಕ್ರಾಂತಿಯನ್ನು ಮಹಾರಾಷ್ಟ್ರದಲ್ಲಿ ಬೊಂಬಾಯಿ ಮತ್ತಿತರ ಸ್ಥಳಗಳಲ್ಲಿ, ಬಿಹಾರ, ಬಂಗಾಳದ ಕಲ್ಕತ್ತ ಮತ್ತಿತರ ಸ್ಥಳಗಳಲ್ಲಿ ಹಾಗೂ ಉತ್ತರ ಪ್ರದೇಶದಲ್ಲಿ ಕೂಡ ನಡೆಸಿದರು. ಹಜಾರಿಬಾಗ್ ಜೈಲಿನಲ್ಲಿದ್ದ ಶ್ರೀ ಜಯಪ್ರಕಾಶ್ ನಾರಾಯಣ್ ಅದೇ ಹೊತ್ತಿನಲ್ಲಿ ತಮ್ಮ ಕೆಲವು ಸಂಗಡಿಗರೊಡನೆ ಹಜಾರಿಬಾಗ್ ಜೈಲಿನಿಂದ ತಪ್ಪಿಸಿಕೊಂಡರು. ಈ ವಿಷಯ ರಾಷ್ಟ್ರಾದ್ಯಂತ ಕಾಳ್ಗಿಚ್ಚಿನಂತೆ ಹಬ್ಬಿಬಿಡುವುದೆಂದು ಸರ್ಕಾರಕ್ಕೆ ತಿಳಿದುದ್ದರಿಂದ ಅಸೋಸಿಯೇಟೆಡ್ ಪ್ರೆಸ್, ಹಜಾರಿಬಾಗ್ ಜೈಲಿನಿಂದ ತಪ್ಪಿಸಿಕೊಂಡವರ ಬಗ್ಗೆ ಚಿಕ್ಕದಾಗಿ ಪಟ್ಟಿಯೊಂದನ್ನು ಪ್ರಕಟಿಸಿದ್ದು ಅದರಲ್ಲಿ ಶ್ರೀ ಜಯಪ್ರಕಾಶ ನಾರಾಯಣ್ ಹಾಗೂ ಇತರ ಐದು ಜನರ ಹೆಸರುಗಳೂ ಇದ್ದವು. ಸಮಾಚಾರ ಪತ್ರಿಕೆಗಳಿಗೆ ಈ ಸುದ್ದಿಯ ಮಹತ್ವವನ್ನು ತಿಳಿಯಲು ಸಾಧ್ಯವಾಗದೆ 'ಸ್ಟೇಟ್ಸ್ ಮನ್' ಪತ್ರಿಕೆಯ ದೆಹಲಿ ಆವೃತ್ತಿಯಲ್ಲಿ ಮತ್ತು 'ನ್ಯಾಷನಲ್ ಕಾಲ್' ಪತ್ರಿಕೆಯಲ್ಲಿ ಸಣ್ಣ ಸುದ್ದಿಯಾಗಿ ಅಚ್ಚು ಮಾಡಲಾಗಿತ್ತು. ಆದರೆ, ದೆಹಲಿಯಿಂದ ಪ್ರಕಟವಾಗುತ್ತಿದ್ದ

'ವಿಶ್ವಮಿತ್ರ' ದಿನಪತ್ರಿಕೆಯ ಸಂಪಾದಕರಾದ ಶ್ರೀ ಸತ್ಯದೇವ ವಿದ್ಯಾಲಂಕಾರ್ ಅವರು ಈ ಸುದ್ದಿಯ ಪ್ರಾಮುಖ್ಯತೆಯನ್ನು ಅರಿತು ''ಜಯಪ್ರಕಾಶ್ ನಾರಾಯಣ್ ಜೈಲ್ ಸೆ ಭಾಗ್ ಗಯೇ'' (ಜಯಪ್ರಕಾಶ್ ಜೈಲಿನಿಂದ ತಪ್ಪಿಸಿಕೊಂಡಿದ್ದಾರೆ) ಎಂಬ ಶೀರ್ಷಿಕೆಯಡಿ ದೊಡ್ಡದಾಗಿ ಪ್ರಕಟಿಸಿಬಿಟ್ಟರು! ಹಜಾರಿಬಾಗ್‌ನಿಂದ ಬಂದ ಜಯಪ್ರಕಾಶ್ ನಾರಾಯಣ್ ಬನಾರಸನ್ನು ತಲುಪಿದರು. ಅನಂತರ ಅವರೊಂದಿಗೆ ''ಅಜಾದ ದಾಸ್ತಾ''ದಲ್ಲಿ ಶ್ರೀ ಜಯಪ್ರಕಾಶ್ ನಾರಾಯಣ್ ಮತ್ತು ಶ್ರೀ ರಾಮಮನೋಹರ ಲೋಹಿಯಾ - ಇಬ್ಬರೂ ಮುಖಂಡರು ಸೇರಿಕೊಂಡರು. ಬಿಹಾರದ ಪಕ್ಕದಲ್ಲಿರುವ ನೇಪಾಳದಲ್ಲಿ ಪ್ರಸಾರ ಕೇಂದ್ರವನ್ನು

ಸ್ಥಾಪಿಸಲಾಯಿತು. ಡಾ॥ ಲೋಹಿಯಾ ಅವರು ಟ್ರಾನ್ಸಮಿಟರ್ ಸಹಿತ ಬಂದು ಪ್ರಸಾರ ಕೇಂದ್ರದ ನಿರ್ದೇಶಕರಾದರು. ಅವರ ಹೇಳಿಕೆಗಳು ಹಿಂದಿ ಪ್ರದೇಶಗಳಲ್ಲಿ ಕಿಚ್ಚೆಬ್ಬಿಸಿದವು. ಬ್ರಿಟಿಷ್ ಸರ್ಕಾರ ಅಸ್ವಸ್ಥವಾಯಿತು. ಮುಂದೆ ಕ್ರಾಂತಿಯಾದ ಈ ಚಳುವಳಿಯ ರೂಪುರೇಷೆಯು ಡಾ॥ ಲೋಹಿಯಾರ ಪರಿಕಲ್ಪನೆ. ಅವರು ಅದನ್ನು ''ಕ್ರಾಂತಿ ಕೀ ತೈಯಾರಿ ಕರೊ (ಕ್ರಾಂತಿಗೆ ಸಿದ್ಧರಾಗಿ)'' ಎಂಬ ಲೇಖನದಲ್ಲಿ ''ಕ್ರಾಂತಿಯು ಆರಂಭವಾಗುತ್ತಿದ್ದಂತೆ ಐದು ಜನ ವಿದ್ಯಾವಂತ ಹಾಗೂ ಶ್ರದ್ಧಾಳುಗಳಾದ ವ್ಯಕ್ತಿಗಳಿರುವ ತಂಡಗಳನ್ನು ಮುಂದೆ ಬರುವಂತೆ ತಯಾರುಮಾಡಬೇಕು, ಜನರನ್ನು ಯಶಸ್ಸಿನೆಡೆಗೆ ಒಯ್ಯಲು ಅವರೇ ಮುಂದಾಳುಗಳಾಗಬೇಕು.

''ಸ್ವಯಂ ಸೇವಕರು ಅನೇಕ ತ್ಯಾಗಗಳನ್ನು ಮಾಡಿದರೂ ಕೂಡ ಗುರಿ ಸಾಧನೆಯಾಗದಿದ್ದರೆ ಈ ತಂಡಗಳು ಆ ಕಾರ್ಯ ಸಾಧನೆ ಮಾಡಬಹುದು. ಬ್ರಿಟಿಷ್ ಸರ್ಕಾರಿ ಕೇಂದ್ರಗಳ ಸಶಸ್ತ್ರ ಕಾವಲು ಸಿಬ್ಬಂದಿಯಿಂದ ಅಥವಾ ಮೆರವಣಿಗೆಗಳ ಮೇಲೆ ಗುಂಡುಹಾರಿಸಲು ನಿಯೋಜಿತರಾದ ಸಶಸ್ತ್ರ ಪಡೆಗಳಿಂದಲೇ ಶಸ್ತ್ರಗಳನ್ನು ಕಸಿದುಕೊಳ್ಳುವುದು ಅಥವಾ ರಸ್ತೆ ತಡೆಹಾಕುವುದು ಅಥವಾ ರೈಲುಗಳನ್ನು ಒಂದೇ ಸ್ಥಳದಲ್ಲಿ ನಿಲ್ಲಿಸುವುದು ಅಥವಾ ಪೊಲೀಸ್ ಠಾಣೆ, ಜೈಲು, ನ್ಯಾಯಾಲಯ ಮತ್ತು ಸಚಿವಾಲಯಗಳಿಗೆ ಮುತ್ತಿಗೆ ಹಾಕುವುದು ಇಂಥ ಯಾವುದೇ ಕಾರ್ಯವಾಗಲಿ ವಿಶೇಷ ತರಬೇತಿ ಪಡೆದವರನ್ನೊಳಗೊಂಡ ಇಂಥ ತಂಡಗಳು ಅಸಾಧ್ಯವನ್ನು ಸಾಧ್ಯಗೊಳಿಸಿಯಾವು! ಕ್ರಾಂತಿಯು ಆರಂಭವಾದ ಕೂಡಲೇ ಎಲ್ಲೆಲ್ಲಿ ಇಂಥ ತಂಡಗಳು ಕಾರ್ಯಾಚರಣೆ ಪ್ರಾರಂಭಿಸುವವೋ ಅಲ್ಲೆಲ್ಲ ಕಣ್ಣೆನರಪ್ಪೆಪಿಳುಕಿಸುವಷ್ಟರಲ್ಲಿ ಬ್ರಿಟಿಷ್ ಅಧಿಕಾರವನ್ನು ಮೂಲೋತ್ಪಾಟನೆ ಮಾಡಬಹುದು, ಅದರಿಂದ ಕ್ರಾಂತಿಯ ಕಿಚ್ಚು ಬೇರೆ ಪ್ರದೇಶಗಳಿಗೂ ಹರಡಿ ಬ್ರಿಟಿಷ್ ಆಡಳಿತವನ್ನು ನಿರ್ನಾಮಗೊಳಿಸಲು ಒಳ್ಳೇ ಹುರುಪು ನೀಡುತ್ತದೆ'' ಎಂಬುದಾಗಿ ವಿವರಣೆ ನೀಡಿದ್ದರು.

ಶ್ರೀ ಜಯಪ್ರಕಾಶ್ ನಾರಾಯಣ್ ಮತ್ತು ಡಾ॥ ಲೋಹಿಯಾ ಅವರ ಕಾರ್ಯಾಲಯ ಕೋಶಿ ನದಿ ಪಾತ್ರದಲ್ಲಿರುವ 'ಗೋಟ್ ಐಲೆಂಡ್' ನಲ್ಲಿತ್ತು. ಅವರು ಅಲ್ಲಿ ನೆಲೆಸಿ ಕೇವಲ ಎರಡು ತಿಂಗಳಾಗಿರಬಹುದು, ಅಷ್ಟರಲ್ಲೇ ನೇಪಾಳದಲ್ಲಿ ಕ್ರಾಂತಿಕಾರಿಗಳ ಸಂಘಟನೆ ಆಗುತ್ತಿದ್ದೆ, ಅಲ್ಲಿಂದ ರೇಡಿಯೋ ಪ್ರಸಾರ ಆಗುತ್ತಿದೆಯೆಂಬ ಸಂಗತಿಯ ಬಗ್ಗೆ ಹೇಗೋ ಬ್ರಿಟಿಷ್ ಸರ್ಕಾರಕ್ಕೆ ಸುಳಿವು ಸಿಕ್ಕಿತು. ಡಾ॥ ಲೋಹಿಯಾರವರು ಪ್ರತಿಯೊಂದು ಜಿಲ್ಲೆಯಿಂದ ಕಡೇಪಕ್ಷ ನೂರು ಜನ ಶಕ್ತಿಶಾಲಿಗಳು ದೊರೆತರೂ ಸಾಕು, ಕ್ರಾಂತಿಯು ಯಶಸ್ವಿಯಾಗುವುದೆಂದು ಬಲವಾಗಿ ನಂಬಿದ್ದರು. ತರುಣರನ್ನು ನಿಯೋಜಿಸಿಕೊಳ್ಳವಕಾರ್ಯ ಆಗುತ್ತಿದ್ದಾಗ, ಪ್ರಚಾರವು ಮುಂದುವರಿದಿದ್ದಾಗಲೇ ನೇಪಾಳಿ ಪೊಲೀಸರು ಅವರನ್ನು ಸುತ್ತುವರಿದರು. ಆದರೆ ರಾತ್ರಿ ವೇಳೆಯಲ್ಲಿ ಜಯಪ್ರಕಾಶ್ ನಾರಾಯಣ್ ಹಾಗೂ ಡಾ॥ ಲೋಹಿಯಾ ಅವರು ಪೊಲೀಸರಿಂದ ತಪ್ಪಿಸಿಕೊಂಡು ಕಲ್ಕತ್ತೆಯನ್ನು ತಲುಪಿದರು. ಕಲ್ಕತ್ತೆಯಿಂದ ಶ್ರೀ ಸುಭಾಶ್ ಚಂದ್ರ ಬೋಸರಿಗೆ ಒಂದು ಪತ್ರವನ್ನು ಬರೆಯಲಾಯಿತು. ಆದರೆ, ಅನಂತರ ಅವರಿಬ್ಬರನ್ನೂ ಬಂಧಿಸಿ ಲಾಹೋರ್ ಕೋಟೆಯಲ್ಲಿ ಪ್ರತ್ಯೇಕವಾಗಿ ಇರಿಸಲಾಯಿತು. ಅವರಿಬ್ಬರನ್ನೂ ಅಲ್ಲಿ ಅಮಾನವೀಯವಾಗಿ ಶಿಕ್ಷಿಸಲಾಯಿತು. ತರುವಾಯ ಆಗ್ರಾ ಜೈಲಿಗೆ ಇಬ್ಬರನ್ನೂ ವರ್ಗಾಯಿಸಲಾಯಿತು. ಡಾ॥ ಲೋಹಿಯಾ ಅವರು ಆಗ ಕಾರ್ಮಿಕ ಪಕ್ಷದ ಅಧ್ಯಕ್ಷರೂ ಬ್ರಿಟಿಷ ಅರ್ಥಶಾಸ್ತ್ರಜ್ಞರೂ ಆಗಿದ್ದ ಹೆರಾಲ್ಡ್ ಲಾಸ್ಕಿಯವರಿಗೆ ಪತ್ರ ಬರೆದು ದೇಶಾದ್ಯಂತ ನಡೆಯುತ್ತಿರುವ ದೌರ್ಜನ್ಯಗಳ ಬಗ್ಗೆ ಮಾಹಿತಿ ನೀಡಿದರು. 1945ರಲ್ಲಿ ಸುಮಾರು 16 ತಿಂಗಳುಗಳ ಕಾಲ ಬಂಧಿಸಿಟ್ಟಿದ್ದ ತರುವಾಯ ಶ್ರೀ ಜಯಪ್ರಕಾಶ್ ನಾರಾಯಣ್ ಮತ್ತು ಡಾ॥ಲೋಹಿಯಾ ಅವರನ್ನು ಆಗ್ರಾ ಜೈಲಿಗೆ ಕಳುಹಿಸಲಾಯಿತು. ಬ್ರಿಟಿಷ ಪಾರ್ಲಿಮೆಂಟ್ ಸದಸ್ಯರ ನಿಯೋಗವು ಭಾರತಕ್ಕೆ ಭೇಟಿ ನೀಡಿದಾಗ ಅದು ಆಗ್ರಾ ಜೈಲಿಗೂ ಹೋಗಿ ಈ ಇಬ್ಬರು ಸಮಾಜವಾದಿ ಮುಖಂಡರನ್ನು ಭೇಟಿ ಮಾಡಿತು. ಅನಂತರ, ಭಾರತಕ್ಕೆ ಸ್ವಾತಂತ್ರ್ಯ ನೀಡುವ ಬಗ್ಗೆ ಚರ್ಚೆ ನಡೆಸಲು ಸಂಪುಟ ಆಯೋಗವು ಭಾರತಕ್ಕೆ ಭೇಟಿ ನೀಡಿದಾಗ ಇಬ್ಬರು ಧುರೀಣರನ್ನೂ 1946 ರ ಏಪ್ರಿಲ್ 11ನೇ ದಿನಾಂಕದಂದು ಆಗ್ರಾ ಜೈಲಿನಿಂದ ಬಿಡುಗಡೆ ಮಾಡಲಾಯಿತು.

ಜೈಲಿನಿಂದ ಹೊರಬಂದ ಮೇಲೆ ಮಹಾತ್ಮಗಾಂಧಿಯವರು, 'ಆಗಸ್ಟ್ ಕ್ರಾಂತಿ' ಹಾಗೂ ಅದಕ್ಕೆ ಸಂಬಂಧಿಸಿದ ಉಗ್ರ ಚಟುವಟಿಕೆಗಳೊಂದಿಗೆ ತಮ್ಮ ಹಾಗೂ ಕಾಂಗ್ರೆಸ್ ಪಕ್ಷದ ಸಂಬಂಧ ಕಡಿದುಕೊಂಡರು. ಆ ಸಮಯದಲ್ಲಿ ಕ್ರಾಂತಿಯನ್ನು ಮುಂದುವರಿಸುವ ಸಂಪೂರ್ಣ ಹೊಣೆ ಡಾ॥ ಲೋಹಿಯಾ ಹಾಗೂ ಅವರ ಸಂಗಡಿಗರ ಹೆಗಲ ಮೇಲೆ ಬಿತ್ತು. ಈ ಕ್ರಾಂತಿಯ ಮರಣಾಂತಿಕ ಪೆಟ್ಟಿನಿಂದ ತತ್ತರಿಸಿದ ಬ್ರಿಟೀಷ್ ಸರ್ಕಾರ ಭಾರತದಿಂದ ಕಾಲ್ತೆಗೆಯಲು ನಿರ್ಧರಿಸಿತ್ತೆಂಬುದು ಸರ್ವವಿದಿತ ಸಂಗತಿ. ಆದರೆ ಅಂಥ

9

ಯಶಸ್ಸಿನ ಸಾಧನೆಯನ್ನು ಡಾ|| ಲೋಹಿಯಾ ಅವರಿಗೆ ಕೊಡಮಾಡಲು ಬಹುಜನ ಒಪ್ಪಲಾರರು.

ಡಾ|| ಲೋಹಿಯಾ ಅವರಿಗೆ ಅದೇ ಮೊದಲ ಸ್ವಾತಂತ್ರ್ಯ ಹೋರಾಟವಾಗಲಿಲ್ಲ. ಮುಂದೆ ಗೋವಾ ಸ್ವಾತಂತ್ರ್ಯಕ್ಕಾಗಿ ಆಂದೋಲನವನ್ನು ಆರಂಭಿಸಿದವರೂ ಅವರೇ. ಮುಂಬಯಿ ಸರ್ಕಾರದ ಅಂದಿನ ಮುಖ್ಯಮಂತ್ರಿಯಾಗಿದ್ದ ಶ್ರೀ ಮೊರಾರ್ಜಿ ದೇಸಾಯಿಯವರು ಆ ಚಳುವಳಿಯನ್ನು ಕಾನೂನು ಬಾಹಿರವಾದುದೆಂದು ಘೋಷಿಸಿದ್ದರು. ಆದರೆ ಭಾರತ ಸರ್ಕಾರವು ಗೋವೆಯ ವಿಮೋಚನೆಗೆ ಪೊಲೀಸ ಕಾರ್ಯಾ ಚರಣೆ ಕೈಗೊಳ್ಳಲು ಒತ್ತಾಯವನ್ನು ಎದುರಿಸಬೇಕಾಯಿತು. 1967ರಲ್ಲಿ, ಹಲವಾರು ರಾಜ್ಯಗಳಲ್ಲಿ ಸಮ್ಮಿಶ್ರ ಸರ್ಕಾರಗಳು ರಚನೆಯಾಗಿದ್ದರಲ್ಲಿ ಡಾ|| ಲೋಹಿಯಾ ಪಾತ್ರವೂ ಇತ್ತು ಹಾಗೂ ಚೌಧುರಿ ಚರಣಸಿಂಗ್‌ರನ್ನು ಉತ್ತರ ಪ್ರದೇಶದ ಮುಖ್ಯಮಂತ್ರಿ ಯೆಂದು ಒಪ್ಪಿ ಕೊಳ್ಳಲು ಕಾರಣಕರ್ತರಾದವರು ಲೋಹಿಯಾರೇ ಎನ್ನುವುದು ಎಷ್ಟು ಜನರಿಗೆ ಗೊತ್ತಿದೆ?

ನಾವು ಒಪ್ಪಲಿ, ಬಿಡಲಿ ತಲತಲಾಂತರದಿಂದಲೂ ಅಧಿಕಾರ ಹಾಗೂ ಸಂಪತ್ತಿನಿಂದ ವಂಚಿತರಾಗಿಯೇ ಬದುಕಿ ಬಂದಿರುವಂಥ ಜನರು ಅಧಿಕಾರ ಸೂತ್ರಗಳನ್ನು ಕೈಗೆತ್ತಿಕೊಂಡಾಗ ಮಾತ್ರವೇ ದೇಶದಲ್ಲಿ ಜನಪ್ರಿಯ ಸರ್ಕಾರ ಆಡಳಿತಕ್ಕೆ ಬರುತ್ತದೆ ಎಂಬುದು ಡಾ|| ಲೋಹಿಯಾ ಅವರ ಖಚಿತವಾದ ಅಭಿಪ್ರಾಯ. ಪ್ರಾಯಶಃ ಇದೇ ಸಮಾಜವಾದದ ಮೂಲ ಸಿದ್ಧಾಂತ ಕೂಡಾ; ಆದರೆ, ಸಾಮಾಜಿಕ, ಆರ್ಥಿಕ ಹಾಗೂ ರಾಜಕೀಯ ಶ್ರೇಷ್ಠತೆಯನ್ನು ಅನೂಚಾನವಾಗಿ ಅನುಭೋಗಿಸುತ್ತಲೇ ಬಂದಿದ್ದ ಮೇಲುಜಾತಿಯ ಜನರು ತಮ್ಮನ್ನು ತಾವೇ ಸಮಾಜವಾದಿಗಳೆಂದು, ಸಮತಾವಾದಿಗಳೆಂದು ಕರೆದುಕೊಳ್ಳಲಾರಂಬಿಸಿದರೆ, ಆರ್ಥಿಕವಾಗಿ ಹಿಂದುಳಿದಿರುವ ಜನರಿಗೆ ಎಂದೆಂದಿಗೂ ಅಧಿಕಾರ ಸಿಗಲಾರದೆಂಬುದು ಡಾ|| ಲೋಹಿಯಾ ಅವರ ಅಭಿಪ್ರಾಯವಾಗಿತ್ತು. ಭಾರತದಲ್ಲಿ ಜಾತಿಪದ್ಧತಿಯು ಎಷ್ಟರ ಮಟ್ಟಿಗೆ ಬೇರೂರಿದೆಯೆಂದರೆ ಸಮಾಜವಾದಿ ವ್ಯವಸ್ಥೆಯಲ್ಲಿ ಕೂಡ ಅದನ್ನು ನಿವಾರಿಸುವುದು ಅಸಾಧ್ಯವೆಂಬುದೂ ಅವರ ದೃಷ್ಟಿಕೋನವಾಗಿತ್ತು. ಹೀಗಾಗಿ ಹಿಂದುಳಿದ ವರ್ಗಗಳ ಜನರಿಗೆ ಒಟ್ಟಾರೆಯಾಗಿ ಸಮಾಜವಾದದ ತತ್ವಗಳಲ್ಲಿ ತರಬೇತಿ ನೀಡಬೇಕೆಂದು ಅವರು ಆಲೋಚಿಸಿದರು. ತತ್ಪರಿಣಾಮವಾಗಿ, ಬಿಹಾರದಲ್ಲಿ ಕರ್ಪೂರಿ ಠಾಕೂರರಂತಹ ಮುಖಂಡರು ಮುಂದೆ ಬಂದು ಜಾಟರು, ಯಾದವರು, ಕೇವಟರು, ಮಾಳೀಯರೇ ಮೊದಲಾದ ಜಾತಿಗಳ ಪ್ರತಿನಿಧಿಗಳಾದ ಚೌಧುರಿ ಚರಣಸಿಂಗ್, ರಾವ್ ಬಿರೇಂದರ್ ಸಿಂಗ್ ಮುಂತಾದವರಿಗೆ ಪ್ರೋತ್ಸಾಹವನ್ನು ನೀಡಿದರು. ಅದರ ಫಲವನ್ನು ನಾವೀಗ ಕಾಣುತ್ತಿದ್ದೇವೆ.

ಡಾ|| ಲೋಹಿಯಾರವರು ಸಮಾಜವಾದಿಯಾಗಿದ್ದರೂ ತಮ್ಮನ್ನು ಅವರೆಂದೂ ಮಾರ್ಕ್ಸ್‌ವಾದಿಯೆಂದು ಭಾವಿಸಿರಲಿಲ್ಲ. ಹೀಗಾಗಿ, ವರ್ಗ ಸಂಘರ್ಷದ ಬಗ್ಗೆ ಅವರಿಗೆ ಅವರದೇ ಆದ ಪ್ರತ್ಯೇಕ ನಿಲುವಿತ್ತು. ಎಂದರೆ ಡಾ|| ಲೋಹಿಯಾರವರಿಗೆ ಅಂತರ್ರಾಷ್ಟ್ರೀಯ ಆದರ್ಶತತ್ವಗಳ ಅರಿವಿರಲಿಲ್ಲವೆಂದಲ್ಲ. ಅವರು ಜರ್ಮನಿಯಲ್ಲಿ ನಾಲ್ಕು ವರ್ಷ ಕಾಲ ಇದ್ದು ಅರ್ಥಶಾಸ್ತ್ರ, ಇತಿಹಾಸ ಹಾಗೂ ತತ್ವಶಾಸ್ತ್ರಗಳನ್ನು ಬರ್ಲಿನ್ ವಿಶ್ವವಿದ್ಯಾನಿಲಯದಲ್ಲಿ ಅಧ್ಯಯನ ಮಾಡಿದ್ದರು. 'ಉಪ್ಪು ಮತ್ತು ಸತ್ಯಾಗ್ರಹ' ಎಂಬುದು ಅವರು ಡಾಕ್ಟರೇಟ್ ಮಹಾಪ್ರಬಂಧದ ವಸ್ತು ವಿಷಯವಾಗಿದ್ದು, ಅದರಲ್ಲಿ ಅವರು ಭಾರತದಲ್ಲಿ ಉಪ್ಪಿನ ಮೇಲೆ ತೆರಿಗೆ ವಿಧಿಸುವುದರಿಂದ ಉಂಟಾಗುವ ಆರ್ಥಿಕ, ಚಾರಿತ್ರಿಕ, ಹಾಗೂ ರಾಜಕೀಯ ಪರಿಣಾಮಗಳನ್ನು ವಿವರಿಸಿದ್ದರು. ಬರ್ಲಿನ್‌ನಲ್ಲಿದ್ದಾಗ ಅವರು ಮಧ್ಯ ಯುರೋಪಿನ ಹಿಂದೂಸ್ತಾನ ಸಂಘಟನೆಗೆ ದೀರ್ಘಾವಧಿವರೆಗೆ ಕಾರ್ಯದರ್ಶಿಯಾಗಿದ್ದರು. ಮದ್ರಾಸಿನಿಂದ ಪ್ರಕಟವಾಗುತ್ತಿದ್ದ ದಿ ಹಿಂದೂ ಪತ್ರಿಕೆಯಲ್ಲಿ' ಜರ್ಮನಿಯಲ್ಲಿ ಹಿಟ್ಲರವಾದದ ಉದಯ'' ಎಂಬ ಲೇಖನವನ್ನು ಬರೆದಿದ್ದರು. ಮುಂದೆ ಅವರು ಭಾರತ ರಾಷ್ಟ್ರೀಯ ಕಾಂಗ್ರೆಸ್ಸಿನ ಪದಾಧಿಕಾರಿಯಾದಾಗ ಅವರಿಗೆ ಅಂತರ್ರಾರಾಷ್ಟ್ರೀಯ ವಾಸ್ತವ ರೂಪದಲ್ಲಿ ಆರ್ಥಿಕ ತತ್ವಗಳ ಬಗ್ಗೆ ಅಧ್ಯಯನ ಮಾಡಲು ವಿಪುಲವಾದ ಅವಕಾಶ ದೊರೆಯಿತು. ಡಾ||ಲೋಹಿಯಾರವರು ಸ್ವತಃ ಫೈಜಾಬಾದಿನ ವೈಶ್ಯ ಕುಟುಂಬದಿಂದ ಬಂದವರಾಗಿದ್ದು ರಾಷ್ಟ್ರೀಯ ಆರ್ಥಿಕ ಪದ್ಧತಿಗಳ ಬಗ್ಗೆ ಅಪಾರ ಜ್ಞಾನವನ್ನು ಹೊಂದಿದ್ದರು. ಅವರು ಬ್ರಹ್ಮಚಾರಿಯಾಗಿದ್ದುದರಿಂದ ಹೆಚ್ಚಿನ ಸಮಯವನ್ನೆಲ್ಲ ಅಲಹಾಬಾದಿನ ಸ್ವರಾಜ್ಯಭವನದಲ್ಲಿಯೇ ಕಳೆಯುತ್ತಿದ್ದರು. ಅತ್ಯಂತ ದೀರ್ಘ ಕಾಲ ಅವರು ಸ್ವರಾಜ್ಯ ಭವನದ ಕೊಠಡಿಯೊಂದರಲ್ಲಿ ವಾಸ ಮಾಡುತ್ತಿದ್ದುದರಿಂದ ಈಗಲೂ ಕೂಡ ಸ್ವರಾಜ್ಯ ಭವನದ ಹಳೇ ಮಾರ್ಗದರ್ಶಿಗಳು ಆ ಕೊಠಡಿಯನ್ನು 'ಡಾ|| ಲೋಹಿಯಾ ಕೊಠಡಿ' ಯೆಂದೇ ಪರಿಚಯಿಸುತ್ತಾರೆ.

ಡಾ|| ರಾಮಮನೋಹರ ಲೋಹಿಯಾರವರು ಕಾಂಗ್ರೆಸ್ ಸಮಾಜವಾದಿ ಗುಂಪಿನ ಸದಸ್ಯರಾದಾಗ ಶ್ರೀ ಜಯಪ್ರಕಾಶ್ ನಾರಾಯಣರನ್ನು ಅದರ ಜನರಲ್ ಸೆಕ್ರೆಟರಿಯಾಗಿ ನೇಮಕ ಮಾಡಲಾಗಿತ್ತು. ಆಚಾರ್ಯ ನರೇಂದ್ರ ದೇವರು ಅತ್ಯಂತ ಹಿರಿಯ ಮುಖಂಡರಾಗಿದ್ದರಲ್ಲದೆ ಅವರು ಸಮಾಜವಾದ ಮತ್ತು ಬೌದ್ಧ ತತ್ವಗಳೆರಡರಲ್ಲೂ ಸಮಾನ ಪ್ರಭುತ್ವವನ್ನು ಹೊಂದಿದ್ದರು. ಈ ಇಬ್ಬರು ನೇತಾರರೂ ಕೂಡಾ ಶ್ರೀ ಜವಹರಲಾಲರೊಂದಿಗೆ ಅತ್ಯುತ್ತಮ ವೈಯಕ್ತಿಕ ಸಂಬಂಧ ಇಟ್ಟುಕೊಂಡಿದ್ದರು. ಆಗ ಶ್ರೀ ಜಯಪ್ರಕಾಶ್ ನಾರಾಯಣರು ಮಹಾತ್ಮ ಗಾಂಧಿಯವರ ಆದರ್ಶವಾದವನ್ನು ಒಪ್ಪಿರಲಿಲ್ಲ; ಮಾತ್ರವಲ್ಲ ಅವರ ಖಾದಿ ಮತ್ತು ಚರಕಾ ಕಾರ್ಯಕ್ರಮಗಳನ್ನು ಅತ್ಯಂತ ತೀವ್ರವಾಗಿ ಖಂಡಿಸುತ್ತಿದ್ದರು. ಆದಾಗ್ಯೂ ಜಯಪ್ರಕಾಶ್ ನಾರಾಯಣರ ಪತ್ನಿಯಾದ

ಶ್ರೀಮತಿ ಪ್ರಭಾವತಿಯವರು ಮಹಾತ್ಮ ಗಾಂಧಿಯವರ ಅನುಯಾಯಿಯಾಗಿದ್ದುದರಿಂದ ಅವರನ್ನು ಮಹಾತ್ಮಗಾಂಧಿಯವರು ತಮ್ಮ ಅಳಿಯನೆಂದೇ ಕರೆಯುತ್ತಿದ್ದರು. 1936ರಲ್ಲಿ ಶ್ರೀ ಜಯಪ್ರಕಾಶ್ ನಾರಾಯಣರು ಕಾಂಗ್ರೆಸ್ ಸಮಾಜವಾದದ ಧ್ಯೇಯಗಳಲ್ಲಿ ಮಾರ್ಕ್ಸ್‌ವಾದವನ್ನೂ ಕೂಡ ಸೂಚಿಸಿದ್ದರು. ಭಾರತ ಸ್ವಾತಂತ್ರ್ಯ ಪಡೆದ ತರುವಾಯ ಅವರು, ಸಮಾಜವಾದಿಗಳು ಜವಾಹರಲಾಲರ ರೂಪದಲ್ಲಿ ಒಬ್ಬ ಸಮಾಜವಾದಿ ಸದಸ್ಯನನ್ನು ಕಾಂಗ್ರೆಸ್ ಪಕ್ಷದಲ್ಲಿ ಆದಾಗಲೇ ಸೇರಿಸಿಬಿಟ್ಟಿರುವುದರಿಂದ ಸರ್ಕಾರವನ್ನು ರಚಿಸಬೇಕೆಂಬ ದೃಷ್ಟಿಯಿಂದ ಕಾಂಗ್ರೆಸ್ ವಿರುದ್ಧವಾಗಿ ಮತ್ತೊಂದು ಪಕ್ಷವನ್ನು ಕಟ್ಟುವ ಉದ್ದೇಶ ತಮಗಿಲ್ಲವೆಂದು ಕೂಡ ಹೇಳಿದ್ದರು. ಆದರೆ 1952ರಲ್ಲಿ ಸಮಾಜವಾದಿ ಪಕ್ಷವು ಚುನಾವಣೆಯಲ್ಲಿ ಸ್ಪರ್ಧೆಗಿಳಿಯಿತಲ್ಲದೆ 1952ರಲ್ಲಿ ಕಿಸಾನ್ ಮಜ್ದೂರ್ ಪ್ರಜಾಪಕ್ಷದೊಂದಿಗೆ ಒಪ್ಪಂದ ಮಾಡಿಕೊಂಡು ಪ್ರಜಾಸಮಾಜವಾದಿ ಪಕ್ಷವು ( ಪಿ ಎಸ್ ಪಿ) ಉದಯವಾಯಿತು. ಡಾ|| ಲೋಹಿಯಾ ಅವರು ಇದಕ್ಕೆ ಪರವಾಗಿದ್ದು, ಇದರಿಂದ, ಕಾಂಗ್ರೆಸ್‌ಗೆ ಮತಗಳುಹೋಗುವುದು ತಪ್ಪುವುದಲ್ಲದೆ, ಕಾಂಗ್ರೆಸ್‌ಗೆ ಒಂದು ಬದಲಿ ಪಕ್ಷ ಅಸ್ತಿತ್ವ ಬಂದಂತಾಗುವುದೆಂದು ಆಲೋಚಿಸಿದ್ದರು. ಆದರೆ ಪ್ರಜಾಸಮಾಜವಾದಿ ಪಕ್ಷವು ಚುನಾವಣೆಯಲ್ಲಿ ಸಾಕಷ್ಟು ಹೆಚ್ಚಿನ ಸಂಖ್ಯೆಯಲ್ಲಿ ಮತಗಳನ್ನು ಪಡೆದಿದ್ದಾಗ್ಯೂ, ಕಮ್ಯುನಿಸ್ಟ್ ಪಕ್ಷದಷ್ಟು ಯಶಸ್ವಿಯಾಗಲಿಲ್ಲ. ಪ್ರಜಾ ಸಮಾಜವಾದಿ ಪಕ್ಷವು ಕಡಿಮೆ ಚುನಾವಣಾ ಕ್ಷೇತ್ರಗಳಿಂದ ಚುನಾವಣೆಯಲ್ಲಿ ಸ್ಪರ್ಧಿಸಿದ್ದಲ್ಲಿ ಇನ್ನೂ ಉತ್ತಮ ಫಲಿತಾಂಶವನ್ನು ಪಡೆಯಬಹುದಿತ್ತೆಂಬುದು ಆಮೇಲೆ ತಿಳಿಯಿತು. ಆದರೂ, 1953ರಲ್ಲಿ ಪಂಡಿತ್ , ಅವರಿಗೊಂದು ಪತ್ರ ಬರೆದರು. ಕೇವಲ ಕೇಂದ್ರ ಅಥವಾ ರಾಜ್ಯಗಳಲ್ಲಿ ಕೆಲವಾರು ಸ್ಥಾನಗಳನ್ನು ಪಡೆಯ ಲೋಸುಗ ಕೇಂದ್ರ ಸಂಪುಟಕ್ಕೆ ಸೇರುವುದು ಅವರಿಗೇನು ಆಕರ್ಷಕವೆನಿಸಲಿಲ್ಲ. ಹೀಗಾಗಿ ಕೇಂದ್ರ ಸಂಪುಟ ಬೆಲೆಬರುತ್ತದೆಂದು 1953 ರ ಮಾರ್ಚ್‌ಯಲ್ಲಿ ಶ್ರೀ ಬ್ರಿಜ್ ಕ್ರಿಷನ್ ಚಾಂದ್ರಿ ಲಾಲರ ನಿವಾಸದಲ್ಲಿ ನಾನು ಜಯಪ್ರಕಾಶ್ ನಾರಾಯಣ್‌ರನ್ನು ಭೇಟಿ ಮಾಡಿದ್ದೆ. ಪಂಡಿತ್ ನೆಹರೂ ಅವರ ಆಹ್ವಾನವನ್ನು ನಿರಾಕರಿಸಿದ ನಂತರ ಅಲ್ಲಿಂದ ಅವರು ಹಿಂದಿರುಗಿದ್ದರು. ನಾನು ''ಜಯಪ್ರಕಾಶ್ ಬಾಬು, ಈ ಆಹ್ವಾನವನ್ನು ನೀವೇಕೆ ತಿರಸ್ಕರಿಸಿದಿರಿ, ನೆಹರೂ ನಂತರ ನೀವು ಅತ್ಯಂತ ಪ್ರಭಾವಿ ವ್ಯಕ್ತಿಯಾಗಿರುತ್ತಿದ್ದಿರಲ್ಲ?'' ಎಂದು ಕೇಳಿದೆ. ಅವರು ಹೇಳಿದರು: ''ಪಂಡಿತ್ ನೆಹರೂ ಅವರು ನನ್ನ ಇತರ ಸಹೋದ್ಯೋಗಿಗಳನ್ನು ಕರೆದುಕೊಳ್ಳಲು ಸಿದ್ಧರಿಲ್ಲದಾಗ ನಾನೊಬ್ಬನೇ ಏನು ಮಾಡಬಹುದಾಗಿತ್ತು, ನನಗೆ ಹೆಚ್ಚಿನದೇನನ್ನೂ ಮಾಡಲು ಸಾಧ್ಯವಾಗುತ್ತಿರಲಿಲ್ಲ'' ಎಂದರು. ಅವರೊಂದಿಗೆ ಮಾತಾಡುತ್ತಿರುವಾಗ ಶ್ರೀಜವಹರಲಾಲ್ ನೆಹರೂ ಅವರು ಶ್ರೀ ಜಯಪ್ರಕಾಶ್ ನಾರಾಯಣ್ ಅವರನ್ನು ಕೇಂದ್ರ ಸಚಿವ ಸಂಪುಟ ಸೇರುವಂತೆ ಆಹ್ವಾನಿಸಿದರು. ಆದರೆ ಜಯಪ್ರಕಾಶ್ ನಾರಾಯಣ್ ಅವರು ಈ ಆಹ್ವಾನವನ್ನು ತಿರಸ್ಕರಿಸಿದರಲ್ಲದೆ ಸಮಾಜವಾದವನ್ನು ಜಾರಿಗೊಳಿಸುವ

ನಿಟ್ಟಿನಲ್ಲಿ ರಾಷ್ಟ್ರೀಯ ಪುನರ್ರಚನೆಗೆ ಪ್ರಯತ್ನಿಸುವುದಾದಲ್ಲಿ ಮಾತ್ರ ಈ ಆಹ್ವಾನಕ್ಕೆ ಸ್ವಲ್ಪಮಟ್ಟಿಗಾದರೂ ಸೇರಬೇಕೆಂಬ ಆಕರ್ಷಣೆಗೆ ಅವರು ಒಳಗಾಗಲಿಲ್ಲ ಸ್ಪಷ್ಟವಾಗಿ ತಿಳಿಸಿ ಜವಾಹರ್‌ಲಾಲ್ ನೆಹರೂ ಅವರು ಡಾ॥ ರಾಮಮನೋಹರ ಲೋಹಿಯಾ ಅವರನ್ನು ಕೇಂದ್ರ ಸಂಪುಟಕ್ಕೆ ಸೇರಿಸಿಕೊಳ್ಳಲು ಸಿದ್ಧರಿರಲಿಲ್ಲವೆಂಬುದು ಮತ್ತು ಶ್ರೀ ಜಯಪ್ರಕಾಶ್ ನಾರಾಯಣ್ ಅವರು ಡಾ॥ ಲೋಹಿಯಾ ಅವರಿಲ್ಲದ ಕೇಂದ್ರ ಸಂಪುಟವನ್ನು ಸೇರಲು ಸಿದ್ಧರಿರಲಿಲ್ಲವೆಂಬುದು ತಿಳಿದು ಬಂದಿತು. ಅವರ ನಿಲುವು ಸರಿಯಾದುದಾಗಿತ್ತು. ಏಕೆಂದರೆ, ಅಂದಿನವರೆಗೂ, ಪ್ರಜಾ ಸಮಾಜವಾದಿ ಪಕ್ಷವಾಗಲಿ ಅದರ ಸಮಾಜವಾದದ ಘಟಕವಾಗಲಿ ತಮ್ಮ ಮುಖಂಡರೆಂದು ಪರಿಗ್ರಹಿಸಿದ್ದುದು ಕೇವಲ ಡಾ॥ರಾಮಮನೋಹರ್ ಲೋಹಿಯಾ ಅವರನ್ನು ಮಾತ್ರವೇ. ಅವರೊಬ್ಬ ಅತ್ಯುತ್ತಮ ಸಂಘಟನಾಕಾರರಾಗಿದ್ದರು. ತಮ್ಮ ಪಕ್ಷದ ಕಾರ್ಯಕರ್ತರಿಗೆ ಸೂಕ್ತ ಗೌರವವನ್ನು ಕೊಡುತ್ತಿದ್ದರಲ್ಲದೆ ಅವರ ಸುಖದುಃಖಗಳೆರಡರಲ್ಲೂ ಪಾಲುದಾರರಾಗುತ್ತಿದ್ದರು ರಾಜಕೀಯವಾಗಿ ಅವರು ಅತ್ಯಂತ ದೂರದೃಷ್ಟಿ, ಅತ್ಯಂತ ಪ್ರಖರ ಬುದ್ಧಿಶಕ್ತಿ ಉಳ್ಳವರಾಗಿದ್ದರು. ತಮ್ಮ ಚಿಂತನೆಯನ್ನು ಪರಿಣಾಮಕಾರಿಯಾಗಿ ಅಭಿವ್ಯಕ್ತಿಸುವ ಜಾಣ್ಮೆ ಅವರಿಗೆ ಸಿದ್ಧಿಸಿತ್ತು. ಡಾ॥ ಲೋಹಿಯಾರವರಿಗೆ ಪಂಡಿತ್ ಜವಾಹರಲಾಲ್ ಅವರ ಬಗ್ಗೆ ಶ್ರೀ ಜಯಪ್ರಕಾಶ್ ನಾರಾಯಣ್ ಅವರಿಗಿದ್ದಷ್ಟು ವಿಶ್ವಾಸ ಇರಲಿಲ್ಲ ಮಾತ್ರವಲ್ಲ; ಡಾ॥ ಲೋಹಿಯಾ ಅವರ ಬಗ್ಗೆ ಇದ್ದ ಸ್ವಲ್ಪಮಟ್ಟಿಗಿನ ಹಿಂಜರಿಕೆಯಿಂದಾಗಿಯೇ ಪಂಡಿತ್ ನೆಹರೂ ಅವರು ಶ್ರೀ ಜಯಪ್ರಕಾಶ ನಾರಾಯಣ್ ಅವರು, ಭೂ ಹಂಚಿಕೆ, ಬ್ಯಾಂಕು, ವಿಮಾ ಕಂಪೆನಿ, ಕಲ್ಲಿದ್ದಲು ಮತ್ತು ಇತರ ಗಣಿ ಕೈಗಾರಿಕೆಗಳ ರಾಷ್ಟ್ರೀಕರಣ, ರಾಜ್ಯ ವಹಿವಾಟಿನ ಏರಿಕೆ ಮತ್ತು ಸರ್ಕಾರದ ಉನ್ನತ ಅಧಿಕಾರಿಗಳ ವರಮಾನದ ಇಳಿತ ಇವೇ ಮುಂತಾದಂಥ ಆರ್ಥಿಕ ಸುಧಾರಣೆಗಳನ್ನು ಮಾಡಲು ಸೂಚಿಸಿದ್ದ ಕೋರಿಕೆಯನ್ನು ಒಳಗೊಳ್ಳುವ ಹದಿನಾಲ್ಕು ಅಂಶಗಳ ಕಾರ್ಯಕ್ರಮವನ್ನು ಒಪ್ಪಿಕೊಳ್ಳಲಿಲ್ಲ. ಪಂಡಿತ್ ನೆಹರೂ ಅವುಗಳನ್ನು ತಾತ್ವಿಕವಾಗಿವಿರೋಧಿಸಲಿಲ್ಲವಾದರೂ ಆ ಬಗ್ಗೆ ಮುಂದಿನ ನಾಲ್ಕು ವರ್ಷಗಳಲ್ಲಿ ಗೊತ್ತುವಳಿಯನ್ನು ಮಂಡಿಸಲು ಬದ್ಧರಾಗುವುದು ಕೂಡ ಸೂಕ್ತವೆಂದೂ ಭಾವಿಸಲಿಲ್ಲ. ಡಾ॥ ಲೋಹಿಯಾ ಅವರು ಆ ಬಗ್ಗೆ ಮಾತುಕತೆ ನಡೆಸುವ ಅಗತ್ಯವಿಲ್ಲವೆಂಬುದನ್ನು ಆಗಲೇ ಮನಗಂಡಿದ್ದರು. ಏಕೆಂದರೆ, ಅವರು ಸರ್ಕಾರದೊಂದಿಗೆ ಮಾತುಕತೆ ನಡೆಸಿದಲ್ಲಿ ಜನತೆ ಪಿ.ಎಸ್.ಪಿ.ಯು (ಪ್ರಜಾಸಮಾಜವಾದಿ ಪಕ್ಷ) ಭಿನ್ನ ಆದರ್ಶ ಹೊಂದಿರುವ ಪಕ್ಷವೆಂದು ಭಾವಿಸಲಾರರೆಂದು ಯೋಚಿಸಿದ್ದರು.

ಡಾ॥ ಲೋಹಿಯಾ ಅವರು ಎಷ್ಟು ದೃಢವಾಗಿ ತಮ್ಮ ಅಭಿಪ್ರಾಯಗಳನ್ನು ವ್ಯಕ್ತಪಡಿಸಿದ್ದರೆಂಬುದು 1953ರ ಮೇ ತಿಂಗಳ 'ಜನತಾ ಪತ್ರ' ದಲ್ಲಿ ಪ್ರಕಟವಾದ ಅವರ ಲೇಖನದಿಂದ ತಿಳಿಯುತ್ತದೆ. ಅವರು ಹೀಗೆ ಬರೆದಿದ್ದರು.

10

''ಶ್ರೀ ಜಯಪ್ರಕಾಶ್ ನಾರಾಯಣ್ ಅವರು ಎರಡು ರೀತಿಯಲ್ಲಿ ಪಂಡಿತ್ ನೆಹರೂರವರ ಉತ್ತರಾಧಿಕಾರಿಯಾಗಲು ಸಾಧ್ಯ. ಒಂದನೆಯದು ಶ್ರೀ ನೆಹರೂರವರಿಗಿದ್ದ ಸಹಾನುಭೂತಿ ಬೆರೆತ ಸಹೃದಯ ಪೂರ್ವಕ ರಾಜೀ ಮನೋಭಾವ. ಆದರೆ, ಈ ವಿಧಾನವನ್ನು ನನ್ನಂಥವರು ಖಂಡಿತವಾಗಿಯೂ ತೀವ್ರವಾಗಿ ವಿರೋಧಿಸುತ್ತೇವೆ. ಏಕೆಂದರೆ, ಅಂಥದೊಂದು ಸನ್ನಿವೇಶದಲ್ಲಿ ಶ್ರೀ ಜಯಪ್ರಕಾಶ ನಾರಾಯಣ್ ಅವರು ಪಂಡಿತ್ ನೆಹರೂರಿಗಿಂತಲೂ ಕಳಪೆಯಾಗಿ ಕಾಣಬಹುದು. ಅದಕ್ಕೆ ಬದಲಿ ಮಾರ್ಗವೆಂದರೆ ಕೋಟ್ಯಾಂತರ ಜನರ ನೇತಾರನಾಗುವ ಅವಕಾಶವನ್ನು ಅವರಿಗೆ ಕಲ್ಪಿಸುವುದು. ಹಾಗಾದಾಗ ಜನರು ಸಮಾಜವಾದಕ್ಕೆ ತಮ್ಮ ಮತವನ್ನು ನೀಡುತ್ತಾರೆ ಅಥವಾ ಒಂದು ಮಹಾನ್ ನಾಗರಿಕ ಪ್ರತಿಭಟನಾ ಆಂದೋಲನದಲ್ಲಿ ಜನರು ಪಾಲ್ಗೊಂಡಂತಾಗುತ್ತದೆ. ಹೀಗೆ, ಜನತೆ, ಜಯಪ್ರಕಾಶ್ ನಾರಾಯಣ್ ಅವರಿಗೆ ತಮ್ಮ ಪ್ರಧಾನಮಂತ್ರಿ ಯಾಗಲು ಹಾರ್ದಿಕ ಬೆಂಬಲ ನೀಡಿದಂತಾಗುತ್ತದೆಯಲ್ಲದೆ ಶ್ರೀ ಜಯಪ್ರಕಾಶ್ ನಾರಾಯಣ್ ಅವರು ಖಂಡಿತವಾಗಿಯೂ ಇನ್ನೂ ಉತ್ತಮ ಪ್ರಧಾನಮಂತ್ರಿಯಾಗಬಲ್ಲರು ಎಂದು ನಾನು ಭಾವಿಸುತ್ತೇನೆ.''

ಮುಂದೆ, ಶ್ರೀ ಜಯಪ್ರಕಾಶ್ ನಾರಾಯಣ್ ಮತ್ತು ಡಾ|| ಲೋಹಿಯಾ ಅವರ ನಡುವೆ ಕೆಲವೊಂದು ಭಿನ್ನಾಭಿಪ್ರಾಯಗಳು ತಲೆದೋರಿದಾಗ, ಶ್ರೀ ಜಯಪ್ರಕಾಶ್ ನಾರಾಯಣ್ ಹಾಗೂ ಅವರ ಕೆಲವು ಸಂಗಡಿಗರು ಪಕ್ಷವನ್ನು ತ್ಯಜಿಸಿದರು. ಡಾ||ಲೋಹಿಯಾ ಅವರು ''1944ರಲ್ಲಿ ಅಜಾದ್ ದಾಸ್ತಾದಿಂದ ನಾವಿಬ್ಬರೂ ನೇಪಾಳದ ಜೈಲಿನಿಂದ ಬಿಡುಗಡೆ ಯಾದಾಗ ನಾನು ಮತ್ತು ಜಯಪ್ರಕಾಶ್ ನಾರಾಯಣ್ ಒಟ್ಟಿಗೆ ಗುಂಡುಗಳನ್ನು ಎದುರಿಸಿದ್ದೆವು ಎಂದ ಮೇಲೆ ನಮ್ಮಿಬ್ಬರ ನಡುವಣ ಸಂಬಂಧಗಳ ಬಗ್ಗೆ ನನಗೆ ಇನ್ನೇನುತಾನೇ ಹೇಳಲಿಕ್ಕಿದೆ? ಆದರೆ, ಆಗ ನಾವಿಬ್ಬರೂ ಯಾವುದೆ ಘಾಯವಾಗದೆ ತಪ್ಪಿಸಿಕೊಂಡೆವೆಂಬುದು ಬೇರೆ ಮಾತು, ನನಗೆ ನನ್ನ ಸ್ವಂತ ಸೋದರರಾರೂ ಇಲ್ಲ ಎಂಬುದನ್ನು ಹೇಳುವುದರ ಹೊರತು ನಾನು ನನ್ನ ಹಾಗೂ ಜಯಪ್ರಕಾಶ್‌ರ ನಡುವಣ ಸಂಬಂಧಗಳ ಬಗ್ಗೆ ವಿವರವಾಗಿ ಇನ್ನೇನನ್ನೂ ಹೇಳಲು ಇಚ್ಛಿಸುವುದಿಲ್ಲ. ನಮ್ಮಲ್ಲಿ ಹಿಂದೆಯೂ ಭಿನ್ನಾಭಿಪ್ರಾಯಗಳಿದ್ದವು. ಇನ್ನುಮುಂದೆಯೂ ಇರಬಹುದು ಎಂಬುದರಲ್ಲಿ ಹೆಚ್ಚಿನ ವ್ಯತ್ಯಾಸ ಏನಿದೆ? ಎಂದು ಹೇಳುತ್ತ ರಾಜೀನಾಮೆಗಳನ್ನು ಹಿಂತೆಗೆದುಕೊಳ್ಳುವಂತೆ ವಿನಂತಿಸಿಕೊಂಡಿದ್ದರು.

ಶ್ರೀ ಜಯಪ್ರಕಾಶ್ ನಾರಾಯಣ್ ಅವರು ಡಾ|| ಲೋಹಿಯಾ ಅವರ ಆದರ್ಶಗಳಿಗೆ ಒಳ್ಳೆಯ ಗೌರವ ಹಾಗೂ ಮನ್ನಣೆ ನೀಡುತ್ತಿದ್ದರು. ಡಾ|| ಲೋಹಿಯಾರವರು ಮುಂದಿಟ್ಟ ಸಮಾಜವಾದದ ತತ್ವಗಳು ಅಂತಿಮವಾಗಿ ಸಮಾಜವಾದಿಗಳ ಮೂಲ

ಮಂತ್ರವಾದವು. ಕಾಂಗ್ರೆಸ್ ಸರ್ಕಾರವು ಹೆಚ್ಚೂ ಕಡಿಮೆ ಎಲ್ಲ ಪ್ರಸ್ತಾವಗಳನ್ನೂ ಒಪ್ಪಿಕೊಂಡಿತಾದರೂ ಭೂ ಸುಧಾರಣಾ ಕಾರ್ಯವು ಅಪೂರ್ಣವಾಗುಳಿಯಿತು. ಹಾಗೂ ಸರ್ಕಾರಿ ನೌಕರರ ಸಂಬಳಗಳು ಮತ್ತು ಉದ್ಧಟತನ ಮಾತ್ರ ಇಳಿಯುವ ಬದಲು ಏರುತ್ತಲೇ ಹೋದವು. ಈ ಎಲ್ಲ ಅಂಶಗಳಿಂದಾಗಿ ಭಾರತದಲ್ಲಿ ಸಮಾಜವಾದ ಸಾಧನೆ ಅಸಾಧ್ಯವಾದ ಧ್ಯೇಯವಾಯಿತು ಹಾಗೂ ಸಂವಿಧಾನದಲ್ಲಿ ಸಮಾಜವಾದವನ್ನು ಸೇರಿಸಿದ್ದರೂ ಕೂಡ ಭಾರತ ಬಂಡವಾಳ ಶಾಹಿಯಾಗುತ್ತಲೇ ಹಾಲಿತು.

ಡಾ|| ರಾಮಮನೋಹರ ಲೋಹಿಯಾ ಅವರು ಲೋಕಸಭೆಗೆ ಚುನಾಯಿತರಾದ ಮೇಲೆ ನನಗೆ ಅವರ ಜೊತೆ ಹೆಚ್ಚು ಸಂಪರ್ಕವುಂಟಾಯಿತು. ಆದರೆ ನಮ್ಮಿಬ್ಬರ ಮೊದಲ ಭೇಟಿಯಲ್ಲೇ ಅವರು ನನ್ನ ಬಗ್ಗೆ ತೋರಿಸಿದ ಆತ್ಮೀಯತೆ ಕಂಡು ನನಗೆ ಅಚ್ಚರಿಯುಂಟಾಗಿತ್ತು. ಒಬ್ಬ ಅಪರಿಚಿತ ವ್ಯಕ್ತಿಯು ನನ್ನ ಬಗ್ಗೆ ತೋರಿಸಿದಂಥ ಗೌರವದ ಕಾರಣವನ್ನು ಅರಿಯಲಾರದೆ ನಾನು ಸೋತು ಹೋದೆ. 1950ಕ್ಕಿಂತಲೂ ಹಿಂದೆ, ರೇವಾದಲ್ಲಿ ನಡೆದ ಸಮಾಜವಾದಿಗಳ ಒಂದು ಸಭೆಯಲ್ಲಿ ಪೊಲೀಸರು ಗುಂಡುಹಾರಿಸಿದ ಬಗ್ಗೆ ತನಿಖಾ ವರದಿಯೊಂದನ್ನು ನಾನು ಪ್ರಕಟಿಸಿದ್ದು ಡಾ|| ಲೋಹಿಯಾ ಅವರು ಆ ಲೇಖನದಿಂದ ತುಂಬಾ ಪ್ರಭಾವಿತರಾಗಿದ್ದರೆಂದು ನನಗೆ ಅನಂತರ ತಿಳಿಯಿತು. ಆರ್ಥಿಕ ಸಂಶೋಧನಾ ಸಂಸ್ಥೆಯ ಒಂದು ಸಣ್ಣ ಪ್ರಕಟಣೆಯನ್ನಾಧರಿಸಿ ತೆಹ್ರಿಗರವಾಲ್ ಮತ್ತು ದಿಯೋರಿಯಾ ಜಿಲ್ಲೆಗಳಲ್ಲಿ ನೀಡುತ್ತಿದ್ದ ಕನಿಷ್ಠ ಮಜೂರಿಗಳನ್ನು ಸೂಚಿಸುತ್ತ ನಾನು 'ಆಜ್' ಪತ್ರಿಕೆಯಲ್ಲಿ ಮಾಹಿತಿಯನ್ನು ಪ್ರಕಟಿಸಿದ್ದೆ. ಅದು, ಡಾ|| ಲೋಹಿಯಾರವರ ಕಣ್ಣಿಗೆ ಬಿದ್ದಿದ್ದೇ ತಡ, ಅವರು ದೇಶದಲ್ಲಿ, ದಿನಕ್ಕೆ ಎರಡು ಆಣೆಯಷ್ಟು ಕನಿಷ್ಠ ಮಜೂರಿ ಸಂದಾಯ ಮಾಡುತ್ತಿರುವ ವಿಷಯವನ್ನು ಲೋಕಸಭೆಯಲ್ಲಿ ಎತ್ತಿ ಆಗಿನ ಯೋಜನಾ ಮಂತ್ರಿಯವರಾಗಿದ್ದ ಶ್ರೀ ಗುಲ್ಜಾರಿಲಾಲ್ ನಂದಾ ಅವರಿಗೆ ಜೀವನವೇ ಸಂಕಷ್ಟಮಯವಾಗುವಂತೆ ಮಾಡಿಬಿಟ್ಟರು. ಲೋಕಸಭೆಯ ಇತಿಹಾಸದಲ್ಲೇ ಈ ಘಟನೆಯು ಒಂದು ಮೈಲಿಗಲ್ಲಾಯಿತು. ಅದೇ ರೀತಿ, ಡಾ|| ಲೋಹಿಯಾ ಅವರು ಜನಪತ್ರಿಕಾ ಪತ್ರಿಕೆಯಲ್ಲಿ ನಾನು ಬರೆದ ''ಚೀನ್ ವಿಸ್ತಾರ್‌ವಾದ ಕೆ ದೊ ಹಜಾರ್ ವರ್ಷ'' ಎಂಬ ಪುಸ್ತಕದ ಬಗ್ಗೆ ವಿಮರ್ಶೆ ಮಾಡಿ ನನ್ನ ಅಭಿಪ್ರಾಯಗಳನ್ನು ಶ್ಲಾಘಿಸಿದರು. ಆಗ, ಡಾ|| ಲೋಹಿಯಾ ಅವರ ಅತ್ಯಂತ ಸೂಕ್ಷ್ಮ ದೃಷ್ಟಿ ಹಾಗೂ ಮಾನವೀಯತೆ, ತೀರ ಸಣ್ಣಸಂಗತಿಯನ್ನೂ ಗೌರವಿಸುವುದು ಹಾಗೂ ಅವರು ಅದನ್ನು ಮುಕ್ತವಾಗಿ ವ್ಯಕ್ತಪಡಿಸುವುದು ಇವೆಲ್ಲವೂ ನನ್ನ ಅರಿವಿಗೆ ಬಂತು. ಬಹುಶಃ ಇದೇ ಕಾರಣದಿಂದಲೇ ಡಾ|| ಲೋಹಿಯಾರವರ ಅಕಾಲಿಕ ಮರಣದಿಂದ ರಾಷ್ಟ್ರದ ಬಹುದೊಡ್ಡ ಸಮಾಜವಾದಿ ಉತ್ತುಂಗ ತೇಜೋಮೂರ್ತಿಯನ್ನು ಕಳೆದುಕೊಂಡಂತಾಗಿದೆ.

-:=:=:-

## ಭಾಗ - ಮೂರು

# ಅವರ ವಿಚಾರಧಾರೆಗಳು

(ಡಾ॥ ಲೋಹಿಯಾ ಅವರು ಲೋಕಸಭೆಯಲ್ಲಿ ಮಾಡಿದ್ದ
ಆಯ್ದ ಭಾಷಣಗಳ ಉದ್ಧೃತ ಭಾಗಗಳು)

# 5. ರಾಷ್ಟ್ರೀಯ ವರಮಾನದ ವಿತರಣೆ :*

ಈವರೆಗೂ ಆದ ಚರ್ಚೆಯನ್ನು ಈ ರೀತಿ ಮುಕ್ತಾಯ ಮಾಡ ಬಹುದೆಂದು ನಾನು ತಿಳಿದಿದ್ದೇನೆ. ನನಗೆ ತಿಳಿದಿರುವಂತೆ 27 ಕೋಟಿ ಭಾರತೀಯರ ಆಯಾ ದಿನದ ವರಮಾನ ಕೇವಲ 3 ಆಣೆಗಳು, ಸನ್ಮಾನ್ಯ ಪ್ರಧಾನಮಂತ್ರಿಯವರು 15 ಆಣೆಗಳೆಂದು ಭಾವಿಸಿದ್ದಾರೆ ಹಾಗೂ ಯೋಜನಾ ಮಂತ್ರಿಯವರು 7 1/2 ಆಣೆಯೆಂದು ಹೇಳುತ್ತಾರೆ. ಈಗ ಸನ್ಮಾನ್ಯ ಪ್ರಧಾನಮಂತ್ರಿ ಮತ್ತು ಯೋಜನಾ ಮಂತ್ರಿಯವರಲ್ಲಿ ಯಾರು ಹೇಳುವುದು ಸರಿ ಎಂಬುದನ್ನು ಅವರೇ ನಿರ್ಧರಿಸಬೇಕು.

ಶ್ರೀ ಸಾಮಾನ್ಯನ ಅದರಲ್ಲೂ 27 ಕೋಟಿ ಭಾರತೀಯರ ದೈನಂದಿನ ಗಳಿಕೆ ಕೇವಲ 3 ಆಣೆಯೇ ಅಥವಾ 3 1/2 ಆಣೆಯೇ ಅಥವಾ 2 1/2 ಆಣೆಯೇ ಎಂಬುದು ನನ್ನ ವಾದವಲ್ಲ. ಆದರೆ ಸರ್ಕಾರವು ದಾರಿದ್ರ್ಯ ನಿರ್ಮೂಲನೆಗಾಗಿ ಸೂತ್ರವೊಂದನ್ನು ಕಂಡುಹಿಡಿಯುವ ನಿರ್ಧಾರ ಮಾಡದೆ ಹೋದರೆ, ದೇಶದಲ್ಲಿ ತಾಂಡವವಾಡುತ್ತಿರುವ ದಾರಿದ್ರ್ಯಬಗ್ಗೆ ಕುರುಡಾಗಿದೆಯೆಂದೇ ಹೇಳಬೇಕಾಗುತ್ತದೆ. ಮಾನ್ಯ ಯೋಜನಾ ಮಂತ್ರಿಯವರು ಇಲ್ಲಿ ಮಂಡಿಸಿದ ಅಂಕಿಅಂಶಗಳ ಬಗ್ಗೆ ನಾನು ಕೆಲವೊಂದು ಮಾತು ಹೇಳಬೇಕೆನಿಸುತ್ತಿದೆ. ಅವು ಕೇವಲ ತೆರಿಗೆ ನಿರ್ಧಾರಣೆ ತನಿಖಾ ಸಮಿತಿಗೆ ಕೊಡುವಂಥವಾಗಿವೆ. ಜನರ ಆದಾಯ ಹಾಗೂ ವೆಚ್ಚವನ್ನು ತಿಳಿಯಲು ಆರ್ಥಿಕ ಇಲಾಖೆಯು ಆಶಿಸಿದ್ದು ಅದರಿಂದ ಹೆಚ್ಚು ಹೆಚ್ಚು ತೆರಿಗೆಗಳನ್ನು ವಿಧಿಸುವ ಮೂಲಕ ಸಾಕಷ್ಟು ದೊಡ್ಡ ಮೊಬಲಗನ್ನು ವಸೂಲು ಮಾಡಿಕೊಳ್ಳಬಹುದು. ಆದ್ದರಿಂದ, ಈ ಸಮಿತಿಯ ಅಂಕಿಅಂಶಗಳನ್ನು ಅನ್ಯೋದ್ದೇಶಕ್ಕಾಗಿ ನೀಡಲಾಗಿರುವುದರಿಂದ ಅವುಗಳ ನೈಜತೆಯ ಬಗ್ಗೆ ಬೇರೆ ರೀತಿಯ ಕೂಡ ಅನುಮಾನ ಉದ್ಭವಿಸಿಸುತ್ತದೆ.

..............ಭಾರತೀಯರು ಅತಿ ವೆಚ್ಚ ಮಾಡುತ್ತಾರಾದ್ದರಿಂದ , ಅವರಿಗೆ ಹೆಚ್ಚು ತೆರಿಗೆಗಳನ್ನು ವಿಧಿಸಬೇಕೆಂಬುದನ್ನು ರುಜುವಾತುಪಡಿಸಲು ಅವರು ಬಯಸಿದರು. ಇದು ಸಾಕಷ್ಟು ಸ್ಪಷ್ಟವಾಗಿಯೇ ಇದೆ. ರಾಷ್ಟ್ರೀಯ ಸಮೀಕ್ಷೆಯಿಂದ ಪ್ರಕಟಿಸಲಾದ ವರದಿಯಿಂದ ಇದು ತಿಳಿದುಬರುತ್ತದೆ. ತೆರಿಗೆ ನಿರ್ಧಾರಣೆ ತನಿಖಾ ಸಮಿತಿಯು ಅದನ್ನು ಶಿಫಾರಸು ಮಾಡಿದೆ. ಹೀಗಾಗಿ ಆರ್ಥಿಕ ಮಂತ್ರಾಲಯವು ತನ್ನ ಕೆಲಸವನ್ನು ಪರಿಣಾಮಕಾರಿಯಾಗಿ ಮುಂದುವರೆಸಬಹುದಲ್ಲವೇ.

---

* ಲೋಕಸಭಾ ಚರ್ಚೆಗಳು, 1963 ಸೆಪ್ಟೆಂಬರ್ 6.

ಎರಡನೆಯದಾಗಿ, 1948-49 ರಲ್ಲಿ ಚಾಲ್ತಿಯಲ್ಲಿದ್ದ ಬೆಲೆಗಳನ್ನು ಆಧಾರವಾಗಿಟ್ಟು ಕೊಳ್ಳುವುದಕ್ಕಿಂತ ಸಾಮಾನ್ಯವಾಗಿ ಪ್ರಸ್ತುತ ಚಾಲ್ತಿ ದರಗಳನ್ನು ಪರಿಗಣಿಸುವುದು ಸೂಕ್ತ. ಈ ಅಂಕಿಅಂಶಗಳನ್ನು ಒದಗಿಸಿದ ಸಂಖ್ಯಾ ಶಾಸ್ತ್ರಜ್ಞರು ಯಾರಿರಬಹುದೆಂಬುದನ್ನು ತಿಳಿದುಕೊಳ್ಳಲು ನಾನು ವಿಫಲನಾಗಿದ್ದೇನೆ. ಕ್ಷಾಮಪೀಡಿತ ಬಂಗಾಲದಲ್ಲಿ 50 ಲಕ್ಷ ಜನರು ಸತ್ತಿದ್ದಾದರೆ, ಅವರು ಕೇವಲ 5 ಲಕ್ಷ ಜನರು ಸತ್ತಿದ್ದಾರೆಂದು ಹೇಳಿದ್ದಾರೆ. ಆದ್ದರಿಂದ, ಮಂತ್ರಿಗಳಾದವರು ಆದಷ್ಟು ಮಟ್ಟಿಗೆ ಜಾಗರೂಕರಾಗಿದ್ದು ಅವರಿಗೆ ಕೆಲವು ನಿರ್ದೇಶನಗಳನ್ನು ನೀಡಬೇಕು. ನಾನು ಅವರು ನೀಡಿರುವ ಅಂಕಿಅಂಶಗಳನ್ನು ನೋಡುವುದಿಲ್ಲ ಹಾಗೂ ಸಾಧ್ಯವಾದಮಟ್ಟಿಗೆ ನನ್ನ ನ್ಯಾಯನಿರ್ಣಯ ಜ್ಞಾನವನ್ನೇ ಬಳಸುತ್ತೇನೆ. ಯೋಜನಾ ಮಂತ್ರಿಯವರು ನೀಡಿರುವ ಅಂಕಿಅಂಶಗಳ ಪ್ರಕಾರ, ಗ್ರಾಮೀಣ ಬಾಬಗೆ 8700ಕೋಟಿ ರೂ. ವೆಚ್ಚವಾಗುತ್ತದೆ ಹಾಗೂ ಜಾನುವಾರುಗಳಿಂದ ಬರುವ ಆದಾಯವೂ ಸೇರಿ ಕೃಷಿಯಿಂದ ಬರುವ ವರಮಾನವು ಸುಮಾರು 6600 ಕೋಟಿ ರೂ. ಗಳಾಗುತ್ತದೆ. ಯೋಜನಾ ಮಂತ್ರಿಯವರು ನಮ್ಮ ಮುಂದೆ ಮಂಡಿಸಿದ ಅಂಕಿಅಂಶಗಳಿಂದ ಇದು ಸ್ಪಷ್ಟವಾಗಿದೆ. ಜಾನುವಾರುಗಳಿಂದ ಬರುವ ವರಮಾನ ಮತ್ತು ಕೃಷಿ ವರಮಾನ ಇವೆರಡನ್ನೂ ನಾನು ಪ್ರತ್ಯೇಕವಾಗಿಯೇ ಹೇಳಬೇಕಾಗಿತ್ತು. ಆದರೆ, ಹಾಗಾದರೂ, ಸುಮಾರು 2000 ಕೋಟಿ ರೂ. ಗಳಷ್ಟು ವ್ಯತ್ಯಾಸ ಕಂಡುಬರುತ್ತಿದೆ. ಇವೆರಡು ಶೀರ್ಷಿಕೆಗಳನ್ನು ಪ್ರತ್ಯೇಕವಾಗಿ ಪರಿಶೀಲಿಸಿದಲ್ಲಿ 3000 ರೂ. ಗಳಿಂದ 3500 ಕೋಟಿ ರೂ. ಗಳಷ್ಟು ವ್ಯತ್ಯಾಸವು ಕಂಡುಬರುತ್ತದೆ. ವೆಚ್ಚದಲ್ಲಿ, ದೇಣಿಗೆ ದತ್ತಿಗಳು ಮತ್ತು ಋಣಗಳೂ ಕೂಡ ಸೇರುವುದರಿಂದ ವರಮಾನ ಮತ್ತು ವೆಚ್ಚದಲ್ಲಿ ವ್ಯತ್ಯಾಸಗಳಿವೆಯೆಂದು ಸರ್ಕಾರ ಹೇಳಬಹುದು. ಈ ಸಂಬಂಧದಲ್ಲಿ, ಒಬ್ಬ ಮನುಷ್ಯ ಎಂದೆಂದಿಗೂ ಋಣಿಯಾಗಿಯೇ ಇರಲು ಸಾಧ್ಯವಿಲ್ಲವೆಂದು ನಾನು ಹೇಳಬಯಸುತ್ತೇನೆ. ಋಣಗಳು 2, 4, 5, ಅಥವಾ 10 ವರ್ಷಗಳಷ್ಟು ನಿಯಮಿತ ಅವಧಿಯ ವರೆಗೆ ಮಾತ್ರ ಇರಬಹುದು. ಏನೆ ಇದ್ದರೂ ವರಮಾನ ಮತ್ತು ವೆಚ್ಚದ ಅಂಕಿಅಂಶಗಳು ಒಂದೇ ಆಗಿರಬೇಕು ಇವೆರಡರ ನಡುವೆ ಸ್ವಲ್ಪಮಟ್ಟಿಗಿನ ಏರುಪೇರು ಮಾತ್ರ ಇರಬಹುದು.

ಗ್ರಾಹಕ ದರಪಟ್ಟಿಯಲ್ಲಿನ ಅಂಕಿಅಂಶಗಳಲ್ಲಿ ಬೆಲೆ ವ್ಯತ್ಯಾಸಗಳನ್ನು ಕೂಡ ಸೇರಿಸಿರುವುದರಿಂದ ಒಂದು ದೊಡ್ಡ ಪ್ರಮಾದವುಂಟಾಗಿದೆ. ಉದಾಹರಣೆಗೆ, ಇಂಧನ ಮತ್ತು ವಿದ್ಯುಚ್ಛಕ್ತಿಗೆ ಸಂಬಂಧಪಟ್ಟ ಅಂಕಿಅಂಶಗಳು ಈವರೆಗೆ 13ನೇ ಸರಣಿಯವರೆಗೆ ಮಾತ್ರವೇ ಪ್ರಕಟವಾಗಿದ್ದು ಯೋಜನಾ ಮಂತ್ರಿಯವರು 17ನೇ ಸರಣಿಯ ವಿವರಗಳನ್ನು ಉಲ್ಲೇಖಿಸಿದ್ದಾರೆ. ಅದನ್ನು ನಾವು ಸಮರ್ಥಿಸಲು ಸಾಧ್ಯವಿಲ್ಲ. 13ನೇ ಸರಣಿಯ ಅಂಕಿಅಂಶ ವಿವರಗಳನ್ನಾಧರಿಸಿ ಕನಿಷ್ಠ ವರಮಾನವುಳ್ಳ ಗುಂಪಿನವರಿಗೆ ಇಂಧನ ಹಾಗೂ ವಿದ್ಯುಚ್ಛಕ್ತಿಯ ಮೇಲಿನ ವೆಚ್ಚವು 20 ಪೈಸೆಯಾಗಿದ್ದು ಇತರೆ ವೆಚ್ಚ 91 ಪೈಸೆಯಾಗುತ್ತದೆ

ಎಂಬುದನ್ನು ಹೇಳಸ ಬಯಸುತ್ತೇನೆ. ಅದೇರೀತಿ, ಮತ್ತೊಂದು ಗುಂಪಿಗೆ ನಗದು ವೆಚ್ಚ 20 ಪೈಸೆಯಾದರೆ ಇತರೆ ವೆಚ್ಚ ಒಂದು ರೂಪಾಯಿ ಎರಡು ಪೈಸೆಯಾಗುತ್ತದೆ. ಸಕ್ಕರೆ ನಗದು ವೆಚ್ಚ 15 ಪೈಸೆ ಹಾಗೂ ಇತರೆ ವೆಚ್ಚ 19 ಪೈಸೆಯಾಗುತ್ತದೆ. ಈ ರೀತಿಯಲ್ಲಿ, ಒಟ್ಟು ವೆಚ್ಚವನ್ನು ಏರಿಸಿದ್ದೇ ಆದರೆ ಅದು 6600 ಕೋಟಿ ರೂ. ಗಳಿಂದ 8700 ಕೋಟಿ ರೂ.ಗಳಿಗೆ ಏರಿಯಾದದ್ದೇ ಆದರೆ, ಅದು ಯುಕ್ತವಾಗಲಾರದು.

ನಾನು ನಿಮಗೆ ಲೆಕ್ಕಾ ಚಾರದ ಇನ್ನೊಂದು ವಿಧಾನದ ಬಗ್ಗೆ ಹೇಳಬೇಕೆಂದಿದ್ದೇನೆ. 1960-61 ರಲ್ಲಿ 32 ಕೋಟಿ ಜನ ಕೃಷಿ ಕಾರ್ಮಿಕರ ಒಂದು ದಿನದ ವರಮಾನ 45 ಪೈಸೆಯಷ್ಟಿದ್ದು 1961-62 ರಲ್ಲಿ 35 ಕೋಟಿ ಜನ ಕೃಷಿ ಕಾರ್ಮಿಕರ ಒಂದು ದಿನದ ವರಮಾನವು 43 ಪೈಸೆಗೆ ಇಳಿಯಿತು. ನಾನು ಇದನ್ನು ಹೇಗೆ ಲೆಕ್ಕ ಹಾಕಿದೆನೆಂಬುದು ದೊಡ್ಡ ಕತೆಯಾಗುತ್ತದೆ. ಅಧಿಕೃತ ಅಂಕಿಅಂಶಗಳೇ ನನ್ನ ಲೆಕ್ಕಕ್ಕೆ ಮೂಲಾಧಾರವೆಂಬುದನ್ನು ನಾನಿಲ್ಲಿ ಸ್ಪಷ್ಟಪಡಿಸುತ್ತೇನೆ. ಸಾಮಾನ್ಯವಾಗಿ, ಮೇಲ್ವರ್ಗದ ಶೇಕಡ ಹತ್ತರಷ್ಟು ಜನರು ತಮ್ಮ ವರಮಾನದಲ್ಲಿ ಶೇಕಡ 50 ರಷ್ಟನ್ನು ಕಬಳಿಸಿ ಬಿಡುತ್ತಾರೆ ಎಂದು ನಂಬಲಾಗಿದೆ. ತತ್ಪರಿಣಾಮವಾಗಿ, 1961-62 ರಲ್ಲಿ ಕೃಷಿಕಾರ್ಮಿಕರ ದಿನದ ವಾಸ್ತವಿಕ ವರಮಾನವು 25 ಪೈಸೆಯಾಗಿದ್ದು 1961-62 ರಲ್ಲಿ 23 ಪೈಸೆಯಾಗಿತ್ತು. ಅಧಿಕೃತ ಅಂಕಿಅಂಶಗಳಿಂದ ಇದು ಸ್ಪಷ್ಟವಾಗಿ ತಿಳಿಯುತ್ತದೆ. ಒಂದು ವೇಳೆ ಜಾನುವಾರುಗಳಿಂದ ಬರುವ ವರಮಾನವನ್ನು ಸೇರಿಸಿದಾಗ ಕೂಡ ಅದು 27 ಪೈಸೆಗಿಂತ ಎಂದರೆ 1/4 ಆಣೆಗಿಂತಲೂ ಹೆಚ್ಚಾಗಲಾರದು. ಆದರೆ ನಾವು ಯಾರ ಬಗ್ಗೆ ಚರ್ಚೆ ನಡೆಸುತ್ತಿರುವೆವೋ ಆ ಜನ ತಮ್ಮ ವರಮಾನವನ್ನು ಏರಿಸಿಕೊಳ್ಳುವ ಸಲುವಾಗಿ ದನಕರುಗಳನ್ನು ಇಟ್ಟು ಕೊಳ್ಳಲಾರದಷ್ಟು ಬಡವರಾಗಿರುವುದರಿಂದ ನಾವು ಈ ವರಮಾನವನ್ನು ಸೇರಿಸಲು ಸಾಧ್ಯವಿಲ್ಲ. ಆದ್ದರಿಂದ, ಈ ದೇಶದಲ್ಲಿನ 27 ಕೋಟಿ ಜನರು ದಿನಕ್ಕೆ ಕೇವಲ 4 ಆಣೆಗಳ ಮೇಲೆ ಬದುಕುತ್ತಿದ್ದಾರೆಂಬ ಅಂಶವನ್ನು ಅಧಿಕೃತ ಅಂಕಿಅಂಶಗಳು ಸಾಬೀತು ಪಡಿಸುತ್ತವೆ. ಈ ಸಂಗತಿಗೆ ಸರ್ಕಾರವು ಪ್ರಕಟಿಸಿದ ರಾಷ್ಟ್ರೀಯ ವರಮಾನದ ಅಂಕಿಅಂಶಗಳೇ ಆಧಾರ.

ಈ ಸಂಬಂಧದಲ್ಲಿ ನಾನು ಸಂಗ್ರಹಿಸಿದ ಮಾಹಿತಿಯ ಒಂದು ಅಂಶವನ್ನು ತಮ್ಮೊಡನೆ ಹಂಚಿಕೊಳ್ಳ ಬಯಸುತ್ತೇನೆ. ಅದು ಸರಿಯಾದುದೇ ಅಲ್ಲವೇ ಎಂಬುದನ್ನು ನಾನು ಹೇಳಲಾರೆ. ಹೇಗಾದರೂ, ಸರ್ಕಾರವು ಆರಂಭದಿಂದಲೂ ರಾಷ್ಟ್ರೀಯ ಆದಾಯದಲ್ಲಿ ಶೇಕಡ 20 ರಷ್ಟನ್ನು ಮರೆಮಾಚುತ್ತಿದೆ ಎಂದು ಹೇಳಬಯಸುತ್ತೇನೆ. ಭಾರತ ಶ್ರೀಮಂತವಾಗಿದೆಯೆಂದು ತೋರಿಸಿಕೊಳ್ಳುವುದೇ ಇದಕ್ಕೆ ಕಾರಣವಿರಬಹುದು. ಇನ್ನೊಂದು ಕಾರಣ ತೆರಿಗೆ ನಿರ್ಧಾರಣೆಗೆ ಅನುಕೂಲ ಮಾಡಿಕೊಡಲು ಅವರು ಬಯಸಿರಬಹುದು. ಆದರೆ ಅಂಕಿಅಂಶಗಳನ್ನು ಮರೆಮಾಚಲಾಗಿದೆ ಎಂಬುದು ಪ್ರತಿಯೊಬ್ಬರಿಗೂ ತಿಳಿದಿದೆ.

ನಾನೀಗ ಮತ್ತೊಂದು ವಿಷಯ ಎಂದರೆ ಬಡರಾಜ್ಯಗಳಲ್ಲಿನ ತಲಾವಾರು ಆದಾಯದ ಬಗ್ಗೆ ಹೇಳಲಿಚ್ಛಿಸುತ್ತೇನೆ. ಯೋಜನಾ ಸಚಿವರು ನೀಡಿದ ಅಂಕಿಅಂಶಗಳಿಗೆ ದೇಶದ ಎರಡನೇ ಜನಗಣತಿಯೇ ಆಧಾರ. ಉತ್ತರ ಪ್ರದೇಶ, ಬಿಹಾರ, ರಾಜಾಸ್ತಾನ, ಮಧ್ಯಪ್ರದೇಶ, ಒರಿಸ್ಸಾ ಮತ್ತು ಆಂಧ್ರಪ್ರದೇಶ ಇವು ಆರು ಬಡ ರಾಜ್ಯಗಳಾಗಿವೆ. ಅವುಗಳ ಒಟ್ಟು ಗ್ರಾಮೀಣ ಜನಸಂಖ್ಯೆ 20 ಕೋಟಿಯಷ್ಟಿದ್ದು, ವಾಸ್ತವವಾಗಿ 23 ಕೋಟಿ ಜನಸಂಖ್ಯೆಯಿದೆ. ನನಗೆ ಉತ್ತರಪ್ರದೇಶದ ಬಗ್ಗೆ ಚೆನ್ನಾಗಿ ತಿಳಿದಿದೆ. ಆ ಅಂಕಿಗಳನ್ನು ಸರ್ಕಾರವು ಪ್ರಕಟಿಸಿದೆ. ಒಂದು ಕಾಲದಲ್ಲಿ ಗ್ರಾಮೀಣ ಪ್ರದೇಶಗಳ ತಲಾವಾರು ಆದಾಯವು 182 ರೂ. ಗಳಷ್ಟಿತ್ತು. ಈ ಸಂಗತಿ ಆಧಾರದ ಮೇಲೆ, ಮೇಲಿನ ಶೇ. 10 ರಷ್ಟು ಜನರಿಗೆ ಆದಾಯದ ಶೇ. 50 ರಷ್ಟು ಹೋಗುತ್ತದೆ ಅಥವಾ ನಾನು ಸಾಮಾನ್ಯವಾಗಿ ಬಳಸುವ ಮತ್ತೊಂದು ವಿಧಾನವನ್ನು ಅಳವಡಿಸಬಹುದೇನೋ ಎಂದರೆ, ಮೇಲ್ವರ್ಗದ ಶೇ. 20 ರಷ್ಟು ಜನರಿಗೆ ಆದಾಯದ ಶೇ.60 ರಷ್ಟು ಹೋಗುತ್ತದೆ ಎಂದಿಟ್ಟುಕೊಂಡರೆ ಇನ್ನುಳಿದ ಶೇ. 80 ರಷ್ಟು ಜನರಿಗೆ ಕೇವಲ ಶೇ. 40 ರಷ್ಟು ಮಾತ್ರ ಉಳಿಯುತ್ತದೆ. ನನಗೆ ಈ ಅಂಶಗಳು ಅಧಿಕೃತ ಮೂಲಗಳಿಂದಲೇ ದೊರೆತಿದೆ. ಈ ಅಂಕಿಅಂಶಗಳು ಅಧಿಕೃತವಾದುದಾದರೂ ಲೆಕ್ಕಾಚಾರ ಮಾತ್ರ ನನ್ನ ಸ್ವಂತದ್ದೇ ಆಗಿದೆ. ತಜ್ಞರ ನೀಡುವ ಅಂಕಿಅಂಶಗಳನ್ನು ಇದ್ದಹಾಗೆಯೇ ಸ್ವೀಕರಿಸಬಾರದೆಂದು ನಾನು ಸರ್ಕಾರಕ್ಕೆ ಸೂಚಿಸಬಯಸುತ್ತೇನೆ. ಆ ಬಗ್ಗೆ ಏನಾದರೂ ಮಾರ್ಗದರ್ಶಕ ಸೂತ್ರಗಳಿರಬೇಕು. ಇಲ್ಲದಿದ್ದರೆ ದುಷ್ಪರಿಣಾಮಗಳುಂಟಾಗಬಹುದು. ಆದಾಯದಲ್ಲಿ ಶೇ. 50 ರಷ್ಟನ್ನು ನುಂಗಿಹಾಕುವ ಮೇಲ್ವರ್ಗದ ಶೇ. 10 ರಷ್ಟು ಜನರನ್ನು ನಾವು ಲೆಕ್ಕ ಹಾಕದಿದ್ದರೆ, ಉತ್ತರ ಪ್ರದೇಶದ ತಲಾವಾರು ಆದಾಯವು 182 ರೂ. ಗಳಿಂದ 101 ರೂ. ನಷ್ಟು ಕೆಳಗೆ ಕುಸಿದುಬಿಡುವ ಸಾಧ್ಯತೆಯಿದೆ. ಅದೇ ರೀತಿ, ಆದಾಯದಲ್ಲಿ ಶೇ. 60 ರಷ್ಟನ್ನು ಕಬಳಿಸುವ ಶೇ. 20 ರಷ್ಟು ಜನರನ್ನು ಸೇರಿಸಿಕೊಂಡರೆ ಅದು 91 ರೂ. ಗಳಷ್ಟು ಕೆಳಗಿಳಿಯುತ್ತದೆ. ಎಂದರೆ ತಲಾವಾರು ದಿನದ ಆದಾಯವು 4 ಆಣೆಗಿಂತಲೂ ಕಡಿಮೆಯೇ ಆಗುತ್ತದೆ. ತಲಾವಾರು, 193 ರೂ. ಆದಾಯದ ಇನ್ನೊಂದು ಅಂಕಿ ಇದೆ. ಇದು ಸ್ವಲ್ಪ ಹೆಚ್ಚೆಂದು ಕಾಣುತ್ತದೆ. ಆದರೂ ಆದಾಯವು 4 ಆಣೆ ಅಥವಾ 3 1/2 ಆಣೆ ಅಥವಾ 3 1/4 ಆಣೆಯಷ್ಟಾಗುತ್ತದೆ. ಹೆಚ್ಚಿನ ವ್ಯತ್ಯಾಸ ಏನಿಲ್ಲ. ಇದಿಷ್ಟೂ ಅತಿ ಬಡರಾಜ್ಯವಾದ ಉತ್ತರ ಪ್ರದೇಶದ ವಿಷಯವಾಯಿತು. ಇನ್ನು ಒರಿಸ್ಸಾ, ಮಧ್ಯಪ್ರದೇಶ, ಬಿಹಾರ ಮತ್ತು ರಾಜಾಸ್ತಾನ ರಾಜ್ಯಗಳ ಜನರ ಹಣೆಬರಹವೂ ಬಹುಮಟ್ಟಿಗೆ ಇದೇ ಆಗಿದೆ. ಅಧಿಕೃತ ಅಂಶಗಳಿಗನುಸಾರವಾಗಿ ಕೋಟ್ಯಾಂತರ ಜನ ಎಂದರೆ, ಸುಮಾರು 20 ಕೋಟಿ ಗ್ರಾಮೀಣ ಜನತೆಯ ಪೈಕಿ ಶೇ. 10 ರಂತೆ 2 ಕೋಟಿ ಜನ ಅಥವಾ ಶೇ 20 ರಂತೆ 4 ಕೋಟಿ ಜನ ಅಥವಾ 18 ಕೋಟಿ ಅಥವಾ 16 ಕೋಟಿ ಜನ ದಿನಕ್ಕೆ ಕೇವಲ 4 ಆಣೆ ಅಥವಾ 3 1/2 ಆಣೆಗಳ ಮೇಲೆ ಬದುಕುತ್ತಿದ್ದಾರೆಂದಾಯಿತು.

...............ಸನ್ಮಾನ್ಯ ಪ್ರಧಾನಮಂತ್ರಿಯವರು 1960 ರ ಆಗಸ್ಟ್ 22ರಂದು ರಾಷ್ಟ್ರೀಯ ಆದಾಯವು ಶೇ. 42 ರಷ್ಟು ಹಾಗೂ ತಲಾವಾರು ಆದಾಯವು ಶೇ 20 ರಷ್ಟು ಹೆಚ್ಚಾಗಿದೆಯೆಂದು ಹೇಳಿಕೆಯಿತ್ತರು. ಆದಾಗ್ಯೂ, ಆ ಹೆಚ್ಚಳವು ಎಲ್ಲಿ ಮಾಯವಾಗಿ ಹೋಯಿತೆಂದು ತಿಳಿಯದೇ ಆಶ್ಚರ್ಯಪಟ್ಟರು. ಒಂದು ರೀತಿಯಿಂದ, ಆ ಹೆಚ್ಚಳವು ಎಲ್ಲಿ ಹೋಯಿತೆಂಬುದು ತಿಳಿದಿಲ್ಲವೆಂದು ಸರ್ಕಾರವು ಈಗಾಗಲೇ ಒಪ್ಪಿಕೊಂಡಿದೆ. ತರುವಾಯ ರಾಷ್ಟ್ರೀಯ ಆದಾಯ ಹಂಚಿಕೆಗಾಗಿ ಸಮಿತಿಯೊಂದನ್ನು ರಚಿಸಲಾಯಿತು. ಆ ಸಮಿತಿಯು ಎಲ್ಲಿ ಅದೃಶ್ಯವಾಗಿದೆಯೆಂಬುದು ಈಗ ನನ್ನ ಪ್ರಶ್ನೆ. ನಾನು ಈ ವಿಷಯದ ವಿವರಗಳ ಬಗ್ಗೆ ನಂತರ ಮಾತನಾಡುತ್ತೇನೆ. ಅದಕ್ಕೆ ಮೊದಲು ನಾನು ಇನ್ನೊಂದು ಅಂಶದ ಬಗ್ಗೆ ತಮ್ಮ ಗಮನವನ್ನು ಸೆಳೆಯಲಿಚ್ಛಿಸುತ್ತೇನೆ. ಭಾರತದಲ್ಲಿ ಶೇ. 34 ಕ್ಕಿಂತಲೂ ಕಡಿಮೆ ಕುಟುಂಬಗಳು ಒಂದು ಎಕರೆಗಿಂತಲೂ ಕಡಿಮೆ ಭೂಮಿಯನ್ನು ಹೊಂದಿವೆ ಮತ್ತು ಶೇ. 14 ರಷ್ಟು ಭೂಮಿಯನ್ನು ಶೇ. ಒಂದೇ ಒಂದರಷ್ಟು ಕುಟುಂಬಗಳು ಹೊಂದಿವೆ. ಈ ಅಂಕಿಅಂಶದಿಂದ ಕೆಲವೊಂದು ಅಪಾಯಕಾರಿ ಫಲಿತಾಂಶಗಳುಂಟಾಗುವುದನ್ನು ಕಾಣಬಹುದು. ಈ ಹಿಂದೆ ನಾನು 27 ಕೋಟಿ ಜನ ಭಾರತೀಯರು ತಮ್ಮ ಜೀವನಾಧಾರಕ್ಕಾಗಿ ಕೇವಲ 3 ಆಣೆಗಳನ್ನು ಮಾತ್ರ ಗಳಿಸುವರೆಂದು ತಿಳಿಸಿದ್ದೆ. ಈಗ 10 ರಿಂದ 15 ಕೋಟಿಯಷ್ಟು ನಮ್ಮ ಜನರು ಕೇವಲ 2 ಆಣೆಗಳ ಮೇಲೆ ಜೀವನ ನಿರ್ವಹಣೆ ಮಾಡುತ್ತಿರುವರೆಂದು ಹೇಳುತ್ತಿದ್ದೇನೆ. ನಮ್ಮ ಜನ ಜೀವನ ನಿರ್ವಹಣೆಗೆ ಕೇವಲ 3 ಆಣೆಗಳನ್ನು ಮಾತ್ರವೇ ಗಳಿಸುತ್ತಿದ್ದಾರೆಂಬ ನನ್ನ ಹೇಳಿಕೆಯನ್ನು ಖಂಡಿಸಿ ಹಲವಾರು ಪತ್ರಗಳನ್ನು ನನಗೆ ಬಂದಿವೆ. ಈ ಅಂಕಿಅಂಶಗಳನ್ನು ಭಿನ್ನ ರೀತಿಯಿಂದ ವಿಶ್ಲೇಷಿಸುವುದಾದರೆ ನಮ್ಮ ರಾಷ್ಟ್ರದಲ್ಲಿ ಏಳು ಕೋಟಿ ಜನ ಕೃಷಿಕಾರ್ಮಿಕರಿರುವ ಅಂಶ ತಿಳಿದುಬರುತ್ತದೆ. ಇದರಲ್ಲಿ ನಾವು ಅರ್ಧ ಅಥವಾ ಒಂದು ಕೋಟಿ ಜನರನ್ನು ಕಡಿಮೆ ಮಾಡಬಹುದು. ಏಕೆಂದರೆ ಅವರು ಇನ್ನೂ ಸ್ವಲ್ಪ ಉತ್ತಮಪರಿಸ್ಥಿತಿಯಲ್ಲಿ ಇರಬಹುದು.

ಸಣ್ಣ ರೈತರಿಗೆ ಸಂಬಂಧಿಸಿದಂತೆ ಹೇಳುವುದಾದರೆ, ಅವರ ಸಂಖ್ಯೆ 14 ರಿಂದ 15 ಕೋಟಿಗಳಷ್ಟಿದೆ ಅವರು ಎರಡೂವರೆ ಎಕರೆಗಿಂತಲೂ ಕಡಿಮೆ ಭೂಮಿಯನ್ನು ಹೊಂದಿರುವರಾಗಿದ್ದಾರೆ. ಸುಮಾರು 2 ರಿಂದ 3 ಕೋಟಿ ಜನ ಕುಶಲಕರ್ಮಿಗಳಿದ್ದಾರೆ. ಇನ್ನು ನಗರ ಪ್ರದೇಶಗಳಲ್ಲಿ ಶೇ. 20 ರಿಂದ ಶೇ. 25 ರಷ್ಟು ಜನರ ಸ್ಥಿತಿ ಶೋಚನೀಯವಾಗಿದ್ದು ಅವರಿಗೆ ಹಾಸಿಗೆ ಇದ್ದಷ್ಟು ಕಾಲು ಚಾಚಲೂ ಕೂಡ ಕಷ್ಟವಾಗುತ್ತಿದೆ. ವಾಸ್ತವವಾಗಿ ಇಂಥ ಘೋರ ಪರಿಸ್ಥಿತಿಯಲ್ಲಿ ಅವರು ಹೇಗೆ ಬದುಕುಳಿದಿದ್ದಾರೆಂದು ಅಚ್ಚರಿಯಾಗುತ್ತದೆ. ಅವರು ರಸ್ತೆ ಪಕ್ಕಗಳಲ್ಲಿ ದರಿದ್ರ ಜೋಪಡಿಗಳಲ್ಲಿ ವಾಸ ಮಾಡುತ್ತ ಕಸದ ತೊಟ್ಟಿಗಳಿಂದ ಆಹಾರ ಪದಾರ್ಥಗಳನ್ನು

ಆಯ್ದು ತಿನ್ನುತ್ತ ಹೇಗೋ ಬದುಕುತ್ತಿದ್ದಾರೆ. ಗ್ರಾಮೀಣ ಪರಿಸರದಿಂದ ನಗರಗಳಿಗೆ ವಲಸೆ ಬಂದು ಯಾವುದೇ ರೀತಿಯಲ್ಲಿ ಆದಾಯ ಗಳಿಸುತ್ತಿರುವವರು ತಮ್ಮ ಮಟ್ಟಿಗೆ ಅತಿ ಕನಿಷ್ಟ ಹಣ ವೆಚ್ಚ ಮಾಡಿ ಗ್ರಾಮೀಣ ಪ್ರದೇಶಗಳಲ್ಲಿರುವ ತಮ್ಮ ಕುಟುಂಬ ವರ್ಗದವರಿಗೆ ನೆರವು ನೀಡಬೇಕಾಗುತ್ತದೆ. ಹಾಗೆಯೇ ಆದಿವಾಸಿಗಳು, ವಿಧವೆಯರು ಮತ್ತು ಯಾವ ಯೋಚನೆಯೂ ಇರದಂದರೆ ತಪ್ಪಾಗದ ಸಾಧು ಸನ್ಯಾಸಿಗಳಿದ್ದಾರೆ. ಈ ಎಲ್ಲ ವರ್ಗಗಳಿಗೆ ಸೇರಿದವರ ಒಟ್ಟು ಸಂಖ್ಯೆಯಾ ಸುಮಾರು 27 ರಿಂದ 30 ಕೋಟಿಯಷ್ಟಾಗುತ್ತದೆ.

ಈ ಹಿಂದೆ ಹೇಳಿರುವ ಅಂಕಿಅಂಶಗಳನ್ನ ಉಲ್ಲೇಖಿಸುವುದಲ್ಲದೆ, ನಾನೀಗ ಮಾನ್ಯ ಪ್ರಧಾನಮಂತ್ರಿ, ಮಾನ್ಯ ಯೋಜನಾ ಮಂತ್ರಿ ಮತ್ತು ಸರ್ಕಾರವು ಗಮನ ಹರಿಸಬೇಕಾದಂಥ ಒಂದು ಸನ್ನಿವೇಶದ ಬಗ್ಗೆ ತಾಜಾ ಮಾಹಿತಿ ನೀಡಲಿದ್ದೇನೆ ಬನಾರಸಿನಲ್ಲಿ ಹಸುಗಳು ಹೆಣಗಳನ್ನು ತಿನ್ನುತ್ತಿದ್ದುದನ್ನು ನಾನು ನೋಡಿದ್ದೇನೆ. ಒರಿಸ್ಸಾದ ನದಿಗಳಲ್ಲಿ ಮೀನುಗಳಾ ಸಿಗುವುದೇ ಅತಿ ಕಡಿಮೆ. ಆದರೆ ನೂರಾರು ಜನರು ನೀರಿನಲ್ಲಿ ಬಲೆಗಳನ್ನು ಹರಡಿ ಮೀನು ಹಿಡಿಯಲು ಪ್ರಯತ್ನಿಸುತ್ತಿದ್ದುದನ್ನು ನಾನು ಕಂಡಿದ್ದೇನೆ. ತಮಿಳುನಾಡಿನ ಸೇಲಂನಲ್ಲಿ ಲಕ್ಷಾಂತರ ಕುಶಲಕರ್ಮಿಗಳು ದಿನಕ್ಕೆ ಕೇವಲ 10, 12 , ಅಥವಾ 14 ಆಣೆಗಳಷ್ಟು ಸಂಪಾದನೆ ಮಾಡುತ್ತಿದ್ದುದನ್ನು ಕಣ್ಣಾರೆ ಕಂಡಿದ್ದೇನೆ. ಈ ಜನರ ಸರಾಸರಿ ಆದಾಯವನ್ನು ಲೆಕ್ಕ ಹಾಕಿದರೆ ಸರಾಸರಿಯು ದಿನಕ್ಕೆ 3 ಆಣೆಗಿಂತಲೂ ಹೆಚ್ಚಾಗಲಾರದು. ಅದೇರೀತಿ, ಇತರ ದುರ್ಬಲವರ್ಗಗಳಿಗೆ ಸೇರಿದವರ ಆದಾಯವನ್ನು ಗಮನಿಸಿದರೆ, ಅವರೂ ಕೂಡ ದಿನಕ್ಕೆ ಇಷ್ಟೇ ಮೊಬಲಗನ್ನು ಪಡೆಯುವರೆಂಬುದು ನಮಗೆ ತಿಳಿಯುತ್ತದೆ.

ಇವು ಸರ್ಕಾರಿ ಅಂಕಿ ಅಂಶಗಳಾಗಿವೆ. ಇನ್ನಷ್ಟು ಥಳುಕಿನ ಚಿತ್ರಗಳನ್ನು ಕೊಡಲು ಸಂಖ್ಯಾಶಾಸ್ತ್ರಜ್ಞರು ಪರಸ್ಪರ ಸ್ಪರ್ಧೆ ಗಿಳಿಯುತ್ತಾರೆ. ಅಂಥದೊಂದು ಸಂಸ್ಥೆ ದೆಹಲಿಯಲ್ಲಿದ್ದು ಅದನ್ನು ರಾಷ್ಟ್ರೀಯ ಆರ್ಥಿಕ ಸಂಶೋಧನಾ ಸಂಸ್ಥೆ (ನ್ಯಾಷನಲ್ ಕೌನ್ಸಿಲ್ ಆಫ್ ಇಕನಾಮಿಕ್ ರಿಸರ್ಚ್) ಎಂದು ಕರೆಯಲಾಗುತ್ತದೆ. ಅದು ತಲಾವಾರು ಆದಾಯ 100ರೂ. ಗಿಂತಲೂ ಕಡಿಮೆಯಿರುವ 29 ಜಿಲ್ಲೆಗಳ ಹೆಸರುಗಳನ್ನು ಕೊಟ್ಟಿದೆ. ಇಲ್ಲಿ ನಾನು ಆ ಕೆಲವು ಜಿಲ್ಲೆಗಳ ಹೆಸರುಗಳನ್ನು ಹೇಳ ಬಯಸುತ್ತೇನೆ. ದರ್ಭಾಂಗಾದಲ್ಲಿ 96ರೂ. ಸರನ್ ಮತ್ತು ಛಪ್ರಾದಲ್ಲಿ 16ರೂ. ದಿಯೋರಿಯಾದಲ್ಲಿ 98 ರೂ. ಟೆಹ್ರಿ ಗರವಾಲಿನಲ್ಲಿ 84 ರೂ. ಇದೆ. ನಾನು ಈ ಹಿಂದೆ ಹೇಳಿದ ಲೆಕ್ಕಾಚಾರವನ್ನು ಇಲ್ಲಿ ಅಳವಡಿಸಿದರೆ ಎಂದರೆ ಶೇ. 50 ರಷ್ಟು ಆದಾಯವನ್ನು ಶೇ. 10 ರಷ್ಟು ಮೇಲ್ವರ್ಗದವರಿಂದ ಕಡಿತ ಮಾಡುವುದು ಮತ್ತು ಮುಂದಿನ ಶೇ. 20 ರಷ್ಟು ಜನರಿಗೆ ಶೇ. 60 ರಷ್ಟು

ಮೊಬಲಗನ್ನು ಅನ್ವಯಿಸುವುದರಿಂದ ಇನ್ನುಳಿದ ಈ ಜಿಲ್ಲೆಗಳಲ್ಲಿನ ಕೆಳವರ್ಗಗಳಿಗೆ ಸೇರಿದವರ ದೈನಂದಿನ ಆದಾಯವು 3 ಆಣೆಗಿಂತಲೂ ಕಡಿಮೆಯಾಗುತ್ತದೆ. ನಾನಿಲ್ಲಿ ಕೇವಲ 4 ಜಿಲ್ಲೆಗಳನ್ನು ಮಾತ್ರ ಹೇಳಿದ್ದೇನೆ. ಇಂತಹ ಇನ್ನೂ 40 ಜಿಲ್ಲೆಗಳಿದ್ದು ಅಲ್ಲೆಲ್ಲ ಆದಾಯವು 110ರೂ, 120ರೂ. ಮತ್ತು 125 ರೂ. ಗಳು ಮಾತ್ರ ಇದೆ.

ನಾವು 13ನೇ ಸರಣಿಯನ್ನು ಉಲ್ಲೇಖಿಸುವುದಾದರೆ, ನಮ್ಮ ಜೀವನಮಟ್ಟವು ಇನ್ನೂ ಕೆಳಮಟ್ಟಕ್ಕೆ ಇಳಿಯುತ್ತಿರುವುದನ್ನು ಕಾಣಬಹುದು. 1952 ರಲ್ಲಿ ಜನಸಂಖ್ಯೆಯ ಶೇ. 30ರಷ್ಟು ಜನರ ತಲಾವಾರು ವೆಚ್ಚವು 10 ರೂ.25 ಪೈಸೆ ಇದ್ದದ್ದು 1957-58ರಲ್ಲಿ ಅದು 10ರೂ. 14 ಪೈಸೆಗೆ ಇಳಿಯಿತು. ನಾನಿಲ್ಲಿ ಹೇಳಿದ ಅಂಕಿಅಂಶಗಳು ಸರ್ಕಾರಿ ಅಂಕಿಅಂಶಗಳು, ಸನ್ಮಾನ್ಯ ಪ್ರಧಾನಮಂತ್ರಿಯವರು ಕುಸಿಯುತ್ತಿರುವ ಜೀವನಮಟ್ಟದ ಬಗ್ಗೆ ತಿಳಿಯಲು ತಮ್ಮದೇ ಸರ್ಕಾರದ ಪ್ರಕಟಣೆಯನ್ನು ಒಮ್ಮೆ ಓದಬೇಕು. ಅದೇರೀತಿ, ಶೇ. 30 ರಷ್ಟು ಕುಟುಂಬಗಳ ವೆಚ್ಚವು 15 ರೂ. 75ಪೈಸೆಯಿಂದ 14ರೂ. 50 ಪೈಸೆಗೆ ಇಳಿಯಿತು. ಕೇವಲ ಶೇ. 2 ರಷ್ಟು ಕುಟುಂಬಗಳ ವೆಚ್ಚವು ಮಾತ್ರ 45 ರೂ. ಗಳಿಂದ 48ರೂ. ಗಳಿಗೆ ಏರಿತು. ಜನರ ಜೀವನ ಮಟ್ಟವು ನಿರಂತರವಾಗಿ ಈ ರೀತಿ ಇಳಿಯುತ್ತಿದೆ.

ಈ ಹಿಂದೆ ತಲಾವಾರು ಆದಾಯವು ವರ್ಷಕ್ಕೆ 7 ರೂ. ನಂತೆ ಹೆಚ್ಚಾಗುತ್ತಿತ್ತು. ಆದರೆ ಅದು ಹಾಗೆ ಹೆಚ್ಚುತ್ತಿಲ್ಲ. ಈಗ ಪ್ರತಿವರ್ಷವೂ 2 ನಯಾಪೈಸೆಯಷ್ಟು ಮಾತ್ರ ಹೆಚ್ಚುತ್ತಿದ್ದು ನಮ್ಮ ಪ್ರಗತಿಯ ಗತಿ ಇದೇ ಬಗೆಯದಾಗಿದ್ದರೆ ನಾವು ಹೊರಗಿನವರ ಆಕ್ರಮಣಕ್ಕೆ ತುತ್ತಾಗುವುದು ಖಂಡಿತ. ಇದಕ್ಕೆ ಸಂಬಂಧಿಸಿದಂತೆ, ನಾನು ರಷ್ಯಾ ಅಥವಾ ಅಮೆರಿಕಾಗಳನ್ನು ಬಿಟ್ಟು ವಿಶೇಷವಾಗಿ ಚೀನಾ ಮತ್ತು ಘಾನಾಗಳನ್ನು ಉಲ್ಲೇಖಿಸಬಯಸುತ್ತೇನೆ. ಘಾನಾದಲ್ಲಿ ತಲಾವಾರು ಆದಾಯವು 30 ರೂ. ನಿಂದ 40 ರೂ. ಗಳಿಗೆ ಏರುತ್ತಿದ್ದು, ಚೀನಾದಲ್ಲಿ 50 ರೂ. ನಿಂದ 60 ರೂ. ಗಳಿಗೆ ಹೆಚ್ಚುತ್ತಿದೆ. ಇದೇರೀತಿ ಮುನ್ನಡೆಯಲು ನಮಗೇಕೆ ಸಾಧ್ಯವಾಗುತ್ತಿಲ್ಲ? ಏಕೆಂದರೆ, ಬಳಕೆ ಪದ್ಧತಿಯಲ್ಲಿ ಪರಿವರ್ತನೆ ಹಾಗೂ ಆಧುನೀಕರಣ ತಲೆಹಾಕಿದೆ. ಆದರೆ ನಮ್ಮ ಉತ್ಪಾದನಾ ಪ್ರಕ್ರಿಯೆಯಲ್ಲಿ ಅದೇರೀತಿ ಆಧುನಿಕರಣ ಉಂಟಾಗಿಲ್ಲ; ನಮ್ಮ ಬಳಕೆ ಪದ್ಧತಿಯಲ್ಲಿ ನಾವು ಪಾಶ್ಚಿಮಾತ್ಯ ದೇಶಗಳನ್ನು ಅನುಸರಿಸಲು ಪ್ರಯತ್ನಿಸುತ್ತಿದ್ದೇವೆ. ಆದರೆ ನಮ್ಮ ಉತ್ಪಾದನಾ ಕ್ರಮದಲ್ಲಿ ಅದು ಪ್ರತಿಬಿಂಬಿತವಾಗುತ್ತಿಲ್ಲ. ನಮ್ಮ ನಾಯಕರರು, ಉದ್ಯಮಿಗಳು ಮತ್ತು ಅಧಿಕಾರಿಷಾಹಿಗಳ ಜೀವನ ಮಟ್ಟವು ದಿನೇ ದಿನೇ ಏರುತ್ತಿದ್ದು ಇದರಿಂದ ಯೂರೋಪು, ಅಮೇರಿಕ ಗಳಲ್ಲಿರುವ ಅಂಥವರ ಜೀವನ ಮಟ್ಟಕ್ಕೆ ಸರಿಸಮ ಆಯಿತಾದರೂ ಶ್ರೀಸಾಮಾನ್ಯರ ಜೀವನಮಟ್ಟವು ಎಲ್ಲಿದ್ದಿತೋ ಅಲ್ಲಿಯೇ ನಿಂತಿದೆ.

ಎರಡು ಅಥವಾ ಮೂರು ಲಕ್ಷ ಜನರು ಪ್ರತಿ ವರ್ಷವೂ ಶ್ರೀಮಂತರಾಗುತ್ತಿದ್ದಾರೆ. ಪಂಚವಾರ್ಷಿಕ ಯೋಜನೆಗಳ ಏಕೈಕ ಪರಿಣಾಮವಿದಾಗಿದ್ದು ಹೆಚ್ಚಾದ ರಾಷ್ಟ್ರೀಯ

ಆದಾಯದ ಪ್ರಮುಖ ಭಾಗವು ಆ ಉದ್ದೇಶಕ್ಕಾಗಿಯೆ ವ್ಯಯವಾಗುತ್ತಿದೆ. ನನ್ನ ಅಭಿಪ್ರಾಯದಂತೆ ಪ್ರಸ್ತುತ 50 ಲಕ್ಷ ಜನ ಶ್ರೀಮಂತರಿದ್ದಾರೆ. ಕಳೆದ 12 ರಿಂದ 15 ವರ್ಷಗಳ ಅವಧಿಯಲ್ಲಿ 3 ಲಕ್ಷ ಜನರು ಶ್ರೀಮಂತರಾಗುತ್ತಲೇ ಇದ್ದಾರೆ. ಬ್ರಿಟಿಷ್ ಸರ್ಕಾರವು 3 ಲಕ್ಷ ಜನರ ಬೆಂಬಲದೊಂದಿಗೆ ಕಾರ್ಯನಿರ್ವಹಿಸುತ್ತಿತ್ತು ಪ್ರಸಕ್ತ ಸರ್ಕಾರವು 50 ಲಕ್ಷ ಜನರಿಂದ ನಡೆಯುತ್ತಿದೆ.

ಜನರ ವರಮಾನದ ಅಂಕಿಅಂಶಗಳು ಮತ್ತು ಅವರು ಸಂದಾಯ ಮಾಡುತ್ತಿರುವ ವರಮಾನ ತೆರಿಗೆಯನ್ನು ಪರಿಶೀಲಿಸಿದರೆ, 6,52,000 ಜನರು ವರಮಾನ ತೆರಿಗೆ ಸಂದಾಯ ಮಾಡುತ್ತಿರುವುದು ತಿಳಿದುಬರುತ್ತದೆ ಮತ್ತು ಅವರು 120 ಕೋಟಿ ರೂ. ವರಮಾನ ಹೊಂದಿದ್ದು 200 ಕೋಟಿ ರೂ. ವರಮಾನ ತೆರಿಗೆ ಸಂದಾಯ ಮಾಡುತ್ತಿದ್ದಾರೆ. ಆದರೆ, ಅವರ ವಾಸ್ತವಿಕ ವರಮಾನವು 120 ಕೋಟಿ ರೂ. ಗಳಿಗಿಂತಲೂ ದ್ವಿಗುಣವಾಗಿರುವುದೆಂಬುದು ಸರ್ವವಿದಿತ ಸಂಗತಿ. ಎಲ್ಲಕ್ಕಿಂತ ಹೆಚ್ಚಾಗಿ, ಮಂತ್ರಿಗಳೇ ಮುಂತಾದವರಿಗೆ ಸೌಲಭ್ಯಗಳನ್ನು ಒದಗಿಸಲು ಭಾರಿ ಪ್ರಮಾಣದಲ್ಲಿ ಹಣ ವ್ಯಯ ಮಾಡಲಾಗುತ್ತಿದೆ. ಈ ರೀತಿ ಸುಮಾರು 250 ಕೋಟಿ ರೂ. ಒಟ್ಟಾರೆ ವೆಚ್ಚವಾಗುತ್ತಿದೆ. ಸರ್ಕಾರದ ಅಂಕಿಅಂಶಗಳಿಂದ ತಿಳಿದುಬರುವಂತೆ ಈ ದೊಡ್ಡ ಮೊತ್ತವನ್ನು ಕೇವಲ ಶೇ. ಒಂದರಷ್ಟು ಜನರು ಮಾತ್ರವೇ ಅಪಹರಿಸುತ್ತಿದ್ದಾರೆ. ಆದಾಗ್ಯೂ ನಾನು ನನ್ನದೇ ಆದ ಸ್ವಂತ ಸುದ್ದಿ ಮೂಲಗಳಿಂದ ನಾನು ಸಂಗ್ರಹಿಸಿರುವ ಅಂಕಿಅಂಶಗಳ ಪ್ರಕಾರ ಅದು ಇನ್ನೂ ಹೆಚ್ಚು.

100 ರಿಂದ 120 ಕೋಟಿ ರೂ. ಗಳನ್ನು ಹೊಂದಾಣಿಕೆ ಮಾಡುವ ಒಂದು ವಿಧಾನದಿಂದ ಹಾಗೂ ವೆಚ್ಚವನ್ನು ತರ್ಕಬದ್ಧಗೊಳಿಸುವ ಎರಡನೇ ವಿಧಾನದಿಂದ 150 ರಿಂದ 200 ಕೋಟಿ ರೂ. ಗಳವರೆಗೂ ಸುಲಭವಾಗಿ ಉಳಿತಾಯ ಮಾಡಬಹುದು. ಸರ್ಕಾರವು ಇನ್ನಷ್ಟು ಪರಿಣಾಮಕಾರಿಯಾಗಿ ಕಾರ್ಯನಿರ್ವಹಿಸುಬಹುದು. ವರಮಾನ ತೆರಿಗೆ ಹೊರೆಯನ್ನು ತಗ್ಗಿಸಬಹುದು ಮತ್ತು ಕೃಷಿ ಮತ್ತು ಕೈಗಾರಿಕೆಗಳನ್ನು ಇನ್ನೂ ಉತ್ತಮ ರೀತಿಯಲ್ಲಿ ಅಭಿವೃದ್ಧಿಪಡಿಸಬಹುದು. ಆದರೆ ಶ್ರೀಸಾಮಾನ್ಯರ ಬಗ್ಗೆ ಯಾರ ಹೃದಯ ಮಿಡಿಯುವುದೋ ಅಂಥ ವ್ಯಕ್ತಿಗೆ ಮಾತ್ರವೇ ಇದೆಲ್ಲವನ್ನು ಮಾಡಲು ಸಾಧ್ಯ

ಈ ಸರ್ಕಾರವು ಮಾರ್ಗದರ್ಶನವನ್ನೇ ಮಾಡದ ತಜ್ಞರನ್ನು ಹೊಂದಿರುವ ಸರ್ಕಾರವಾಗಿದ್ದು, ಆ ತಜ್ಞರು ಯಾವ ಶಿಫಾರಸುಗಳನ್ನು ಮಾಡಿದರೂ, ಸರ್ಕಾರವು ಕುರುಡನಂತೆ ಅವುಗಳನ್ನು ಅನುಸರಿಸುತ್ತದೆ. ಮಂತ್ರಿಗಳಿಗೆ ಕೃಷಿ, ಕೈಗಾರಿಕೆ, ರಾಷ್ಟ್ರೀಯ ವರಮಾನ ಮುಂತಾದುವುಗಳ ಬಗ್ಗೆ ಸೂಕ್ತ ಜ್ಞಾನವಿಲ್ಲ. ಮಾನ್ಯ ಮಂತ್ರಿಗಳು ತಜ್ಞರ ಶಿಫಾರಸುಗಳನ್ನು ಕುರುಡರಂತೆ ಅನ್ವಯಿಸುವುದಕ್ಕೆ ಬದಲಾಗಿ ತಮ್ಮ ಬುದ್ಧಿವಂತಿಕೆಯನ್ನೂ

ಉಪಯೋಗಿಸಬೇಕು. ಅವರ ಶಿಫಾರಸುಗಳ ಬಗ್ಗೆ ಆಲೋಚನೆ ಮಾಡಿ ಅನಂತರ ನಿರ್ದೇಶನಗಳನ್ನು ನೀಡಬೇಕು. ಏಕೆಂದರೆ ಸಂಖ್ಯಾ ಶಾಸ್ತ್ರಜ್ಞರು ಹಾಗೂ ಆರ್ಥಿಕ ತಜ್ಞರು ಹಾವಾಡಿಗನ ಪುಂಗಿಯ ನಾದಕ್ಕೆ ನರ್ತನ ಮಾಡುವ ವಿಷಸರ್ಪಗಳಿದ್ದಂತೆ. ಆದರೆ ಪುಂಗಿಯೂದಲು ನೀವು ಅಸಮರ್ಥರಾದಿರೆಂದರೆ ಪರಿಣಾಮ ಘೋರವಾದೀತು.

ರಾಷ್ಟ್ರೀಯ ವರಮಾನ ಹಂಚಿಕೆಯನ್ನು ತರ್ಕಬದ್ಧಗೊಳಿಸಿದರೆ ಅದನ್ನು ಪ್ರತಿವರ್ಷ 20 ರೂ. ನಂತೆ ಹೆಚ್ಚಿಸಬಹುದು. ಇದನ್ನು ಯಾರೇ ಸಾಮಾನ್ಯ ವ್ಯಕ್ತಿ ಮಾಡಬಲ್ಲ. ಹಾಗೆ ಮಾಡಿದರೆ ಮಾತ್ರವೇ, ರಾಷ್ಟ್ರೀಯ ವರಮಾನದಲ್ಲಿಗುವ ಏರಿಕೆಯಲ್ಲಿ ಪ್ರತಿಯೊಬ್ಬನಿಗೂ ಪಾಲು ಸಿಗುತ್ತದೆ.

-:=:=:-

## 6. ಸರ್ಕಾರೀ ಉದ್ಯಮಗಳ ಬಗೆಗಿನ ಸಮಿತಿಗೆ ಸಂಬಂಧಪಟ್ಟ ಪ್ರಸ್ತಾವಗಳು *

ಕಳೆದ ಒಂದು ಗಂಟೆಯಿಂದ ಸಮಿತಿಯ ಬಗೆಗೆ ಮುಂದುವರಿಯುತ್ತಿರುವ ಚರ್ಚೆಯನ್ನು ಗಮನಿಸಿದಾಗ, ಲೋಕ ಸಭೆಯ ಚರ್ಚೆಗಳಲ್ಲಿ ವಿಷಯಕ್ಕಿಂತಲ್ಲಿ ಅದರ ರೂಪದ ಬಗ್ಗೆ ಹೆಚ್ಚು ಚರ್ಚಿಸುತ್ತೇವೆ ಎಂಬ ಅಂಶ ನಿಮ್ಮ ತಿಳಿವಿಗೆ ಬಂದಿರಬಹುದು. ಹೊರರೂಪಕ್ಕಿಂತ ವಿಷಯದ ಬಗ್ಗೆ ನಾವು ಚರ್ಚೆ ಮಾಡಿದರೆ ಮಾತ್ರ ದೇಶಕ್ಕೆ ಪ್ರಯೋಜನಕಾರಿಯಾಗುತ್ತದೆ.

ಕಮ್ಯುನಿಷ್ಟರ ಹಾಗೂ ಅವರ ಬೆಂಬಲಿಗರ ಅಭಿಪ್ರಾಯವನ್ನು ತಿಳಿಯುವುದಕ್ಕೋಸ್ಕರ ಶ್ರೀ ದಾಜಿ ಅವರ ಭಾಷಣವನ್ನು ನಿನ್ನೆ ನಾನು ಗಮನವಿಟ್ಟು ಕೇಳಿದೆ. ಅವರು ಸರ್ಕಾರೀ ಉದ್ಯಮಗಳನ್ನು ಮೆಚ್ಚಿದರೂ ಸಹ ಸರ್ಕಾರಿ ವಲಯದ ಉದ್ಯಮಗಳು ಎಷ್ಟು ಬೇಗ ಸಮಾಪನೆಗೊಂಡರೆ ಅಷ್ಟೂ ಒಳ್ಳೆಯದೆಂಬ ಅಭಿಪ್ರಾಯವನ್ನು ವಾದಗಳ ಮೂಲಕ ಮಂಡಿಸಲು ಪ್ರಯತ್ನಿಸಿದರು. ಅದು ಹೇಗೆ ಸಾಧ್ಯವೆಂದು ತಿಳಿಯಲೆತ್ನಿಸುತ್ತಿದ್ದಾಗಲೆ ಕನೂಂಗೊ ಅವರು ಮಾಡಿದ ಭಾಷಣ ನೆನಪಿಗೆ ಬಂದಿತು. ಅವರು ಮಾಡಿದ ಭಾಷಣದಲ್ಲಿ ಅವರು ಉದ್ಧರಿಸಿದ ವಿಷಯಗಳು ಯು.ಕೆ ಮತ್ತು ಪ್ರಜಾ ಪ್ರತಿನಿಧಿ ಸಭೆಯಿಂದ ಆಯ್ದ ದೃಷ್ಟಾಂತವಾಗಿತ್ತು. ಸರ್ಕಾರೀ ವಲಯದ ಬಗ್ಗೆ ಚರ್ಚೆಯಾಗುತ್ತಿದ್ದಾಗ, ಸೋವಿಯತ್ ರಷ್ಯಾದಿಂದ ತೆಗೆದುಕೊಂಡ ದೃಷ್ಟಾಂತಗಳು ಹಾಗೂ ಅಂಥ ಇತರ ವಿಷಯಗಳು ಅವರ ಮನಸ್ಸಲ್ಲಿದ್ದವೆನಿಸುತ್ತದೆ. ಆದರೆ ನಾವು ಸರ್ಕಾರೀ ವಲಯ ಹಾಗೂ ಖಾಸಗಿ ವಲಯಗಳೆರಡನ್ನೂ ಸೇರಿಸಿಬಿಡುವ ಪ್ರವೃತ್ತಿಯನ್ನು ಬೆಳೆಸಿಕೊಂಡಿರುವುದರಿಂದ ಯಾವುದೇ ನಿರ್ದಿಷ್ಟ ನಿರ್ಧಾರಕ್ಕೆ ಬರಲು ನಮಗೆ ಸಾಧ್ಯವಾಗುತ್ತಿಲ್ಲ. ಸೋವಿಯತ್ ರಷ್ಯಾದಲ್ಲಾದ ಬೆಳವಣಿಗೆ ಬಗ್ಗೆ ನಾವು ಚರ್ಚಿಸುತ್ತಾ ಹೋದರೆ ನಾವು ಆ ದೇಶದ ವಿಷಯವನ್ನು ಹೆಚ್ಚು ಹೆಚ್ಚಾಗಿ ತಿಳಿದುಕೊಳ್ಳುತ್ತೇವೆ. ಸೋವಿಯತ್ ರಷ್ಯಾದಲ್ಲಿಯೂ ಘೋರ ಕೃತ್ಯಗಳು ನಡೆಯುತ್ತವೆ. ಖಂಡಿತವಾಗಿ ನಾನದನ್ನು ಬೆಂಬಲಿಸುವುದಿಲ್ಲ. ಆದರೆ ಸರ್ಕಾರೀ ಉದ್ಯಮಗಳನ್ನು ಭಾರತದಲ್ಲಿ ನಡೆಸಿದ ರೀತಿಯಲ್ಲೇ ರಷ್ಯಾದಲ್ಲಿ ನಡೆಸಿದ್ದಿದ್ದರೆ, ಸಚಿವರ ಹಾಗೂ ಸರ್ಕಾರೀ ಉದ್ಯಮಗಳನ್ನು ನಡೆಸುತ್ತಿರುವ ವ್ಯಕ್ತಿಗಳ ಗತಿ ಏನಾಗುತ್ತಿತ್ತು ಎಂದು ಹೇಳುವುದು ಕಷ್ಟ. ಪ್ರಧಾನಮಂತ್ರಿಯವರು ಕೈಗೊಂಡ ಒಳ್ಳೆಯ ಹಾಗೂ ಕೆಟ್ಟ ಕಾರ್ಯಗಳೆರಡನ್ನೂ ಗಣನೆಗೆ

---

* ಲೋಕ ಸಭಾ ಚರ್ಚೆಗಳು, ನವೆಂಬರ್ 19 ಮತ್ತು 20, 1963.

ತೆಗೆದುಕೊಂಡಾಗ, ಅವರು ರಷ್ಯಾದಲ್ಲಿದ್ದಿದ್ದರೆ ಅವರ ಗತಿ ಏನಾಗುತ್ತಿತ್ತು ಎಂದು ತಿಳಿಸಲು ಪ್ರಯತ್ನಿಸುತ್ತೇನೆ. ಸದ್ಯದಲ್ಲಿ ಸರ್ಕಾರೀ ವಲಯ ಮತ್ತು ಖಾಸಗೀ ವಲಯಗಳು ಬಹಳಷ್ಟು ಒಂದರ ಮೇಲೆ ಇನ್ನೊಂದು ಪರಸ್ಪರ ಪ್ರಭಾವ ಬೀರಿವೆ ಎಂದು ಹೇಳಲಿಚ್ಛಿಸುತ್ತೇನೆ. ಪ್ರಪಂಚದಾದ್ಯಂತ, ನಿರ್ವಹಣೆಯ ವಿಷಯದಲ್ಲಿ ಖಾಸಗೀ ವಲಯ ಉದ್ಯಮಗಳನ್ನು ಉತ್ತಮವೆಂದು ಪರಿಗಣಿಸಿದರೂ, ದುರಾಸೆಯಿಂದಾಗಿ ಅವು ಕೆಟ್ಟುಹೋಗಿವೆ. ಸರ್ಕಾರೀ ವಲಯ ಉದ್ಯಮಗಳ ವಿಷಯ ಹೇಳಬೇಕೆಂದರೆ, ದುರ್ವ್ಯವಹಾರಗಳು ಇಲ್ಲಿ ಅತಿರೇಕಕ್ಕೆ ಹೋಗಿವೆ, ಆದರೂ, ಹೆಚ್ಚು ಕರ್ತವ್ಯನಿಷ್ಠತೆ ಇದೆ. ಪ್ರಪಂಚದಾದ್ಯಂತ ಈ ವ್ಯತ್ಯಾಸ ಇದ್ದರೂ ನಾವು ಭಾರತೀಯರು ಹೊಂದಿಕೊಂಡು ಹೋಗುವುದರಲ್ಲಿ ನಂಬಿಕೆ ಇಟ್ಟವರಾಗಿದ್ದೇವೆ. ಈ ಕಾರಣದಿಂದಾಗಿ ಖಾಸಗೀ ಉದ್ಯಮಗಳು ಮತ್ತು ಬಂಡವಾಳಗಾರರು ನಡೆಸುತ್ತಿರುವ ಕೈಗಾರಿಕೆಗಳು ಲೂಟಿ ಮಾಡುವುದರಲ್ಲಿ ತೊಡಗಿವೆ ಹಾಗೂ ಲಾಭ ಬಡುಕುತನ ತೋರಿಸುತ್ತಿವೆ. ಇದರ ಜೊತೆಗೆ ಅವುಗಳ ನಿರ್ವಹಣೆಯ ಮಟ್ಟವೂ ಹಾಳಾಗುತ್ತಿದೆ ಹಾಗೆಯೇ ನಿರ್ವಹಣೆಗೆ ಸಂಬಂದಿಪದಂತೆ ಸರ್ಕಾರೀ ವಲಯ ಹೆಚ್ಚು ಹೆಚ್ಚು ಹಾಳಾಗುತ್ತಿದೆ. ಅಲ್ಲದೆ ಬಂಡವಾಳಗಾರರು ನಡೆಸುವ ಖಾಸಗಿ ವಲಯದ ಉದ್ಯಮಗಳ ರೀತಿಯಲ್ಲಿ ಜನತೆಯನ್ನು ಲೂಟಿ ಮಾಡುವ ಪ್ರವೃತ್ತಿಯನ್ನು ಬೆಳೆಸಿಕೊಳ್ಳುತ್ತಿದೆ. ಇಂಥ ಪ್ರವೃತ್ತಿ ನಮ್ಮ ದೇಶದಲ್ಲಿ ಸಾಕಷ್ಟು ತಲೆದೋರಿದೆ. ಸಾರ್ವಜನಿಕ ಹಿತಾಸಕ್ತಿಯನ್ನು ಗಮನದಲ್ಲಿಟ್ಟುಕೊಂಡಾಗ ಹಾಗೂ ಜೀವನವನ್ನು ನೋಡುವ ದೃಷ್ಟಿಯನ್ನು ನಾವು ಬದಲಾಯಿಸಿಕೊಂಡಾಗ ಮಾತ್ರ ಸರ್ಕಾರೀ ಉದ್ಯಮಗಳು ದಕ್ಷತೆಯಿಂದ ಕಾರ್ಯನಿರ್ವಹಿಸಲು ಸಾಧ್ಯ ಎಂಬ ಸಾಮಾನ್ಯ ಅಂಶವನ್ನು ನಾವು ಅರ್ಥ ಮಾಡಿಕೊಂಡ ಹೊರತು ಈ ಕೈಗಾರಿಕೆಗಳು ಯಾವುದೇ ರೀತಿಯಲ್ಲೂ ನಮಗೆ ಸಹಾಯಕವಾಗಲಾರವು.

ಸರ್ಕಾರೀ ವಲಯ ಮತ್ತು ಖಾಸಗೀ ವಲಯಗಳನ್ನು ಒಂದೇದೃಷ್ಟಿಯಿಂದ ನೋಡಬಾರದೆಂಬುದು ನನ್ನ ಅಭಿಪ್ರಾಯ. ಸರ್ಕಾರೀ ಉದ್ಯಮಗಳನ್ನು ಖಾಸಗಿ ಉದ್ಯಮಗಳಿಂದ ಭಿನ್ನವಾದ ರೀತಿಯಲ್ಲಿ ನಡೆಸಬೇಕು. ಸರ್ಕಾರೀ ಉದ್ಯಮಗಳನ್ನು ಖಾಸಗೀ ಉದ್ಯಮಗಳಂತೆಯೇ ನಡೆಸುವುದಾದಲ್ಲಿ ಅವುಗಳ ಅಗತ್ಯವಾದರೂ ಎಲ್ಲಿದೆ. ಸರ್ಕಾರೀ ಉದ್ಯಮ ಹಾಗೂ ಖಾಸಗಿ ಉದ್ಯಮಗಳೆರಡರ ಕಾರ್ಯದಕ್ಷತೆಯನ್ನು ಒಂದೇ ಮಾನದಂಡದಿಂದ ನಿರ್ಧರಿಸಲಾಗುತ್ತಿದೆ ಎಂಬುದು ಇಲ್ಲಿನ ಚರ್ಚೆಯಿಂದ ನಾನು ತಿಳಿದುಕೊಂಡಿದ್ದೇನೆ. ಸರ್ಕಾರೀ ಉದ್ಯಮದ ಕಾರ್ಯದಕ್ಷತೆಯನ್ನು ನಿರ್ಧರಿಸಲು ಪ್ರತ್ಯೇಕ ಮಾನದಂಡವನ್ನೇ ಅನ್ವಯಿಸಬೇಕು. ಸರ್ಕಾರೀ ಉದ್ಯಮದ ಸಂದರ್ಭದಲ್ಲಿ ಅನ್ವಯಿಸಬೇಕಾದ ಕೆಲವು ಮಾನದಂಡಗಳನ್ನು ನಾನು ನಿಮ್ಮ ಮುಂದಿಡುತ್ತೇನೆ.

14

ಬಂಡವಾಳಗಾರರು ನಡೆಸುವ ಖಾಸಗೀ ವಲಯದ ಉದ್ಯಮಗಳಿಗಿಂತ ಸರ್ಕಾರೀ ವಲಯದ ಉದ್ಯಮಗಳು ಕೈಗಾರಿಕೀಕರಣವನ್ನು ವಿಸ್ತರಿಸುವಲ್ಲಿ ಹೆಚ್ಚು ಸಹಕಾರಿಯಾಗಬಲ್ಲುದು. ನಮ್ಮ ಬೆಳವಣಿಗೆ ಬಹಳ ನಿಧಾನ ಗತಿಯದು. ಆವಶ್ಯವಿರುವ ಸಂಪನ್ಮೂಲಗಳನ್ನು ಸಂಗ್ರಹಿಸುವಲ್ಲಿ ನಾವು ಅಸಮರ್ಥರಾಗಿದ್ದೇವೆ. ಸರ್ಕಾರೀ ವಲಯದ ಉದ್ಯಮಗಳಲ್ಲಿ ಲಾಭಗಳಿಸುವ ಸಾಧ್ಯತೆಗಳು ಬಹಳ ಕಡಿಮೆ. ಬಂಡವಾಳಗಾರರು ನಡೆಸುವ ಖಾಸಗಿ ಉದ್ಯಮಗಳು ಗಳಿಸುವ ಲಾಭದ ಪ್ರಮಾಣದಲ್ಲೇ ಲಾಭ ಗಳಿಸುವುದು ಸಾಧ್ಯವೇ ಇಲ್ಲ. ಆದರೆ ಸರ್ಕಾರೀ ಉದ್ಯಮದಲ್ಲಿ ಗಳಿಸಲಾಗುತ್ತಿರುವ ಅಲ್ಪ ಸ್ವಲ್ಪ ಲಾಭವನ್ನೇ ಹೆಚ್ಚು ಹೆಚ್ಚಿನ ಕೈಗಾರಿಕೆಗಳನ್ನು ಸ್ಥಾಪಿಸುವುದಕ್ಕಾಗಿ ಬಳಸಬೇಕು. ಆದ್ದರಿಂದ, ಸರ್ಕಾರೀ ಉದ್ಯಮವು ರಾಷ್ಟ್ರದ ಕೈಗಾರಿಕೀಕರಣಕ್ಕೆ ಎಷ್ಟರಮಟ್ಟಿಗೆ ಸಹಾಯಕವಾಗಿದೆ ಎಂಬುದೇ ಅದರ ದಕ್ಷತೆಯನ್ನು ನಿರ್ಧರಿಸುವ ಮೊದಲನೇ ಮಾನದಂಡವಾಗಬೇಕು.

ಹಾಗೆಂದ ಮಾತ್ರಕ್ಕೆ, ಜೀವವಿಮಾ ನಿಗಮದ ಹಾಗೇ ವ್ಯವಹಾರ ಬೆಳೆಯಬೇಕು ಎಂಬುದು ನಾನು ಹೇಳಿದುದರ ಅರ್ಥವಲ್ಲ ಎಂಬುದನ್ನು ಇಲ್ಲಿ ಸ್ಪಷ್ಟಪಡಿಸಬಯಸುತ್ತೇನೆ. ಜೀವವಿಮಾನಿಗಮ ತನ್ನ ವ್ಯವಹಾರವನ್ನು ವಿಸ್ತಾರಗೊಳಿಸಿದೆ. ಅದರ ಬಗ್ಗೆ ನಾನೇನೂ ಹೇಳುವುದಿಲ್ಲ. ರಾಷ್ಟ್ರದ ಕೈಗಾರಿಕೀಕರಣದ ವೇಗವನ್ನು ಹೆಚ್ಚಿಸುವ ರೀತಿಯಲ್ಲಿ ಜೀವ ವಿಮಾ ನಿಗಮ ಸರ್ಕಾರೀ ಉದ್ಯಮಗಳಿಗೆ ಸಹಾಯ ನೀಡಬೇಕು. ಇದೇ ಪ್ರಥಮ ಮಾನದಂಡ.

ಎರಡನೆಯದಾಗಿ, ಸರ್ಕಾರೀ ಉದ್ಯಮಗಳು ರಾಷ್ಟ್ರದಲ್ಲಿ ಸಮಾಜವಾದವನ್ನು ಉತ್ತೇಜಿಸುವಂಥವಾಗಿರಬೇಕು. ಸಂಪತ್ತು ಸಮಾನ ರೀತಿಯಲ್ಲಿ ಹಂಚಿಕೆಯಾಗಬೇಕು. ಬಂಡವಾಳಗಾರರು ನಡೆಸುವ ಕೈಗಾರಿಕೆಗಳು ಹಣವನ್ನು ಕೊಳ್ಳೆ ಹೊಡೆಯುತ್ತಿರುವುದರಿಂದ ಕಾರ್ಮಿಕರು ಹಾಗೂ ವ್ಯವಸ್ಥಾಪಕರು ಮತ್ತು ಗ್ರಾಹಕರು ಹಾಗೂ ತಯಾರಕರ ನಡುವೆ ದೊಡ್ಡ ಅಂತರವಿದೆ. ಸರ್ಕಾರೀ ಉದ್ಯಮಗಳಲ್ಲಿ ಈ ಅಂತರವಿರಬಾರದು. ಸರ್ಕಾರೀ ಉದ್ಯಮಗಳಲ್ಲಿನ ಹಂಚಿಕೆಯ ವಿಧಾನ ಸಮಾನತೆಯನ್ನು ತರುವಂಥದ್ದಾಗಿರಬೇಕು.

ಮೂರನೆಯದಾಗಿ, ಬಂಡವಾಳಗಾರರು ನಡೆಸುತ್ತಿರುವ ಕೈಗಾರಿಕೆಗಳಲ್ಲಿ ಸಹ ಆಡಳಿತಗಾರರು ಮತ್ತು ಕಾರ್ಮಿಕರ ನಡುವೆ ಸೌಹಾರ್ದಯುತ ಸಂಬಂಧವಿರಬೇಕು ಎಂಬುದು ನಿಜ. ಆದರೆ ಸರ್ಕಾರೀ ವಲಯದಲ್ಲಿ ಈ ಸಂಬಂಧ ಹೆಚ್ಚು ಪ್ರಜಾಸತ್ತಾತ್ಮಕವಾಗಿರಬೇಕು ಹಾಗೂ ರಾಷ್ಟ್ರದ ಇಡೀ ಪ್ರಜಾಸತ್ತಾತ್ಮಕ ವ್ಯವಸ್ಥೆ ಸರ್ಕಾರೀ ವಲಯಕ್ಕೆ ಸಂಪೂರ್ಣ ಸಹಕಾರ ನೀಡಬೇಕು.

ನಾಲ್ಕನೆಯದಾಗಿ, ಸರ್ಕಾರೀ ವಲಯದ ಉದ್ಯಮಗಳು ಎಷ್ಟರ ಮಟ್ಟಿಗೆ ಸಾರ್ವಜನಿಕ ಹಿತಾಸಕ್ತಿಗೆ ಪೂರಕವಾಗಿವೆ ಎಂಬುದನ್ನು ನೋಡಬೇಕು. ಸಾರ್ವಜನಿಕ ಹಿತಾಸಕ್ತಿಯಲ್ಲಿ ಅತ್ಯಾವಶ್ಯಕ ಸಾಮಗ್ರಿಗಳ ಬೆಲೆಗಳು, ಒಂದು ಸೌಲಭ್ಯ ಜನತೆಗೆ ಸಿಗುತ್ತಿದೆಯೇ ಇಲ್ಲವೆ ಅಥವಾ ಅಂಥ ಸೌಲಭ್ಯವನ್ನು ಪಡೆಯುವಲ್ಲಿ ಜನತೆ ಎದುರಿಸುವ ಕಷ್ಟ ಮುಂತಾದ ಅಂಶಗಳೂ ಸೇರಿವೆ.

ಐದನೆಯದಾಗಿ, ಈ ಉದ್ಯಮಗಳನ್ನು ಚೆನ್ನಾಗಿ ನಡೆಸಬೇಕು. ತಮ್ಮ ಹಿತವನ್ನಷ್ಟೇ ಗಮನಿಸುವ, ದುರಾಸೆಗೆ ಬಲಿಯಾಗುವ ವ್ಯಕ್ತಿಗಳ ಬದಲಿಗೆ ಕಾನೂನಿನ ಪ್ರಕಾರ ನಡೆಯುವ ಹಾಗೂ ವ್ಯಾಪಾರ - ವ್ಯವಹಾರ ಮತ್ತು ಕೈಗಾರಿಕೀಕರಣದ ವಿಸ್ತರಣೆಗೆ ಗಮನಕೊಡುವಂಥ ಸಕ್ಷಮ ವ್ಯಕ್ತಿಗಳನ್ನು ಅಲ್ಲಿಗೆ ನೇಮಕ ಮಾಡಬೇಕು.

ನೌಕರರ ವೇತನಗಳಲ್ಲಿ ಯಾವುದೇ ವ್ಯತ್ಯಾಸವಿರಬಾರದು. ನಾನು ಈ ಮೊದಲೇ ಹೇಳಿದಂತೆ, ನ್ಯಾಯಸಮ್ಮತ ಹಂಚಿಕೆಯಿರಬೇಕು. ಸ್ವಾಮೀಜಿಯವರು ಒಂದು ಒಳ್ಳೆಯ ಅಂಶವನ್ನು ಹೇಳಿದ್ದಾರೆ. ಆದ್ದರಿಂದ ನಾನು ಹೇಳಿರುವ ಎರಡನೇ ಅಂಶವನ್ನು ಮೊದಲು ಹೇಳಿ ಕೆಲವೊಂದು ಉದಾಹರಣೆಗಳನ್ನೂ ಕೊಡುತ್ತೇನೆ. ಅವುಗಳನ್ನು ಗಮನಿಸಿ ಲೋಕಸಭೆಗೆ ವಿಷಯಗಳನ್ನು ತಿಳಿಸುವಂತೆ ಶ್ರೀ ಕನೂಂಗೊ ಅವರನ್ನು ನಾನು ಪ್ರಾರ್ಥಿಸುತ್ತೇನೆ.

ಉದಾಹರಣೆಗೆ ರೂರ್ಕೆಲಾ ಉಕ್ಕು ಸ್ಥಾವರವನ್ನೇ ತೆಗೆದುಕೊಳ್ಳಿ. ಅದು ಸುಗಮವಾಗಿ ಕಾರ್ಯ ನಿರ್ವಹಿಸುತ್ತಿದೆ ಎಂದು ನಾನು ಹೇಳಲಾರೆ. ನಾನು ದೀರ್ಘವಾಗಿ ಲೆಕ್ಕ ಹಾಕಿ ಹೇಳುತ್ತಿದ್ದೇನೆ, ಅಲ್ಲಿಯ ಒಂದು ಸಾವಿರ ಮಂದಿ ಅಧಿಕಾರಿಗಳು, ವೇತನ ಹಾಗೂ ವಿಶೇಷ ಸವಲತ್ತುಗಳಿಗಾಗಿ 20 ಲಕ್ಷ ರೂಪಾಯಿಗಳನ್ನು ಪಡೆಯುತ್ತಾರೆ. ಆದರೆ ಅದೇ 30 ಸಾವಿರ ಮಂದಿ ಕಾರ್ಮಿಕರು ಕೇವಲ 30 ಲಕ್ಷ ರೂಪಾಯಿಗಳನ್ನು ಪಡೆಯುತ್ತಾರೆ. ನಿಜಕ್ಕೂ ಇದು ಅಗಾಧವಾದ ವ್ಯತ್ಯಾಸ. ಒಮ್ಮೆ ನಾನು ಕೇಳಿದ್ದೆ. ಟಾಟಾನಗರದಲ್ಲೂ ಇಂಥ ಅಗಾಧ ವ್ಯತ್ಯಾಸವಿದೆಯೇ ಎಂದು. ಆದರೆ ಟಾಟಾನಗರದಲ್ಲಿ ಇಷ್ಟೆಲ್ಲ ಅಗಾಧ ಪ್ರಮಾಣದ ವ್ಯತ್ಯಾಸವಿರುವುದು ಸಾಧ್ಯವಿಲ್ಲ ಎಂದು ನಾನೇ ಹೇಳಬಲ್ಲೆ. ಇದು ಕೇವಲ ರೂರ್ಕೆಲಾ ಒಂದರ ಸಮಸ್ಯೆಯಲ್ಲ. ಅನೇಕ ಉಕ್ಕು ಸ್ಥಾವರಗಳಲ್ಲಿನ ಪರಿಸ್ಥಿತಿಯೂ ಹಾಗೇ ಇದೆ. ಇಲ್ಲಿ ಅಂಕಿಗಳ ಬದಲು ಎರಡು ದರ್ಜೆಗಳ ನಡುವಿನ ವ್ಯತ್ಯಾಸಕ್ಕೆ ಹೆಚ್ಚಿನ ಗಮನ ಕೊಡಬೇಕು. ವ್ಯತ್ಯಾಸ ಎಂದರೆ, ತಿಂಗಳೊಂದಕ್ಕೆ ಒಂದು ಸಾವಿರ ಅಧಿಕಾರಿಗಳು 20 ಲಕ್ಷ ರೂಪಾಯಿಗಳನ್ನು ಪಡೆಯುತ್ತಿದ್ದಾರೆ, ಮತ್ತು 30 ಸಾವಿರ ಕಾರ್ಮಿಕರು 30 ಲಕ್ಷ ರೂಪಾಯಿಗಳನ್ನು ಪಡೆಯುತ್ತಿದ್ದಾರೆ.

ಜೀವವಿಮಾ ನಿಗಮವು ತನ್ನ ಅಧಿಕಾರಿಗಳಿಗೆ ಹಾಗೂ ಸಿಬ್ಬಂದಿವರ್ಗದವರಿಗೆ ಒದಗಿಸಿರುವ ವಸತಿ ಸೌಕರ್ಯದ ಬಗ್ಗೆ ನಾನು ಹೇಳಲು ಇಚ್ಛಿಸುತ್ತೇನೆ. ಜೀವ ವಿಮಾ ನಿಗಮದಲ್ಲಿ ಸುಮಾರು 2000 ಮಂದಿ ಅಧಿಕಾರಿಗಳಿದ್ದಾರೆ. ಅವರಿಗೆ ವಸತಿ ಕಲ್ಪಿಸಲು ಅದು ವೆಚ್ಚ ಮಾಡುತ್ತಿರುವ ಹಣದ ಪ್ರಮಾಣ ನಮ್ಮ ಊಹೆಗೂ ನಿಲುಕದ್ದು. ಅದನ್ನು ಸರಿಯಾದ ರೀತಿಯಲ್ಲಿ ಪರಿಶೀಲಿಸುವ ಅಥವಾ ಪರೀಕ್ಷಿಸುವ ಯಾವುದೇ ವ್ಯವಸ್ಥೆಯೂ ಇಲ್ಲ. ಇದಕ್ಕೆ ವ್ಯತಿರಿಕ್ತವಾಗಿ, ಅದರ 35,000 ಮಂದಿ ಕಾರ್ಮಿಕರು ಪ್ರತಿ ತಿಂಗಳು ಕೇವಲ 15 ರೂಪಾಯಿಗಳನ್ನು ಮನೆ ಬಾಡಿಗೆ ಭತ್ಯವನ್ನಾಗಿ ಪಡೆಯುತ್ತಾರೆ. ಆದರೆ, 7,000 ಮಂದಿ ಕ್ಷೇತ್ರ ಕಾರ್ಮಿಕರು ಹಾಗೂ 2 1/2 ಲಕ್ಷ ಏಜೆಂಟರು ಇದಕ್ಕಾಗಿ ಯಾವುದೇ ಪರಿಹಾರವನ್ನು ಪಡೆಯುವುದಿಲ್ಲ. ಜೀವ ವಿಮಾ ನಿಗಮದಲ್ಲಿ 4 ಪ್ರವರ್ಗಗಳಿವೆ. ಅದರಲ್ಲಿ 2.50 ಲಕ್ಷ ಮಂದಿ ಏಜೆಂಟರು , 7,000 ಮಂದಿ ಇತರರು ಮತ್ತು ಇನ್ನೂ 2.75 ಲಕ್ಷ ಮಂದಿ ಇದ್ದಾರೆ.

ಸರ್ಕಾರೀ ಉದ್ಯಮಗಳಲ್ಲಿ ಎರಡು ಪ್ರವರ್ಗಗಳಲ್ಲಿ ಎದ್ದು ಕಾಣುವ ವ್ಯತ್ಯಾಸವನ್ನು ತೋರಿಸುವುದಕ್ಕಾಗಿ ನಾನು ಈ ಉದಾಹರಣೆಯನ್ನು ಕೊಟ್ಟಿದ್ದೇನೆ. ಬಿರ್ಲಾಗಳು ಟಾಟಾಗಳು ನಡೆಸುವ ಉದ್ಯಮಗಳಲ್ಲಿ ಇರುವ ಈ ವ್ಯತ್ಯಾಸವನ್ನು ನಾವು ಟೀಕಿಸುತ್ತೇವೆ. ಆದರೆ ಅದೇ ವ್ಯತ್ಯಾಸ ಸಾರ್ವಜನಿಕ ಉದ್ಯಮಗಳು ಹಾಗೂ ಕೈಗಾರಿಕೆಗಳಲ್ಲೂ ಇರುವುದು ಕಂಡು ಬಂದಾಗ ಮನಸ್ಸಿಗೆ ತುಂಬಾ ನೋವುಂಟಾಗುತ್ತದೆ.

ಸಾರ್ವಜನಿಕ ಉದ್ಯಮಗಳ ಅಸ್ತಿಯೆನಿಸಿದ್ದ ಅವ್ಯವಸ್ಥೆ ಖಾಸಗಿ ಉದ್ಯಮಗಳಲ್ಲಿ ನುಸುಳಿದ್ದರೆ, ಖಾಸಗಿ ಉದ್ಯಮಗಳ ಸ್ವತ್ತಾಗಿದ್ದ ಶೋಷಣೆ ಸರ್ಕಾರೀ ಉದ್ಯಮಗಳಲ್ಲಿ ನುಸುಳಿದೆ. ಇದರ ಪರಿಣಾಮವಾಗಿ, ಕೈಗಾರಿಕೆಗಳ ಬಗ್ಗೆ ನೆಹರೂ ಅವರ ಪರಿಕಲ್ಪನೆಗೂ ಬಿರ್ಲಾಗಳ ಪರಿಕಲ್ಪನೆಗೂ ಯಾವುದೇ ವ್ಯತ್ಯಾಸ ನನಗೆ ಕಾಣುವುದಿಲ್ಲ. ಸರ್ಕಾರಿ ಉದ್ಯಮಗಳು ಸಾರ್ವಜನಿಕರಿಗೆ ಸೇರಿದುದು ಹಾಗೂ ಜನಪ್ರಿಯವಾದವುಗಳು ಎಂಬುದನ್ನು ಬಿಟ್ಟರೆ ಸರ್ಕಾರಿ ಉದ್ಯಮಗಳು ಮತ್ತು ಖಾಸಗೀ ಉದ್ಯಮಗಳ ನಡುವೆ ಯಾವುದೇ ವ್ಯತ್ಯಾಸವಿದ್ದಂತೆ ಕಾಣುವುದಿಲ್ಲ. ಇದು ಅಪಾಯಕಾರಿ. ಸರ್ಕಾರಿ ಉದ್ಯಮಗಳ ನಿರ್ವಹಣೆಯನ್ನು ಹೇಗೆ ಸುಧಾರಿಸಬಹುದು ಎಂಬುದರ ಬಗ್ಗೆ ನಾನು ನಿಮ್ಮ ಗಮನ ಸೆಳೆಯಲು ಯತ್ನಿಸುತ್ತಿದ್ದೇನೆ.

ಉದ್ಯಮಗಳ ನೌಕರರಲ್ಲಿ ಇರಬೇಕಾದ ಸಮಾನತೆಯ ಬಗ್ಗೆ ನಾನು ಒಂದು ಸಲಹೆಯನ್ನು ಮಾಡಿದ್ದೆ ಮತ್ತು ಆ ಬಗ್ಗೆ ಕೆಲವು ನಿದರ್ಶನಗಳನ್ನು ಸಹ ಹೇಳಿದ್ದೆ. ಇಲ್ಲಿ ಗಮನನಿಸಬೇಕಾದದ್ದು ಅಂಕಿಗಳಲ್ಲಿರುವ ವ್ಯತ್ಯಾಸವನ್ನಲ್ಲ, ವ್ಯತ್ಯಾಸದ ಅಗಾಧತೆಯನ್ನು.

ಇದನ್ನು ಅಧಿಕಾರಿಗಳಿಗೆ ಒದಗಿಸುವ ವಿಶೇಷ ಸವಲತ್ತುಗಳ ಬಗ್ಗೆ ನಿಮ್ಮ ಗಮನ ಸೆಳೆದು ಈ ಅಂಶವನ್ನು ವಿವರಿಸಬಯಸುತ್ತೇನೆ. ತಿಂಗಳಿಗೆ 2,500 ರೂ.ಗಳ ವೇತನವನ್ನು ಪಡೆಯುವ ಒಬ್ಬ ಅಧಿಕಾರಿಗೆ ನೀಡಲಾಗುತ್ತಿರುವ ವಿಶೇಷ ಸವಲತ್ತುಗಳ ವೆಚ್ಚ ತಿಂಗಳಿಗೆ ಸರಾಸರಿ 10,000 ರೂ.ಗಳು. ವಿಶೇಷ ಸವಲತ್ತುಗಳನ್ನು ಒದಗಿಸುವುದಕ್ಕಾಗಿ ತಿಂಗಳಿಗೆ ಲಕ್ಷಾಂತರ ರೂಪಾಯಿಗಳನ್ನು ಬೊಕ್ಕಸ ಖರ್ಚು ಮಾಡ ಬೇಕಾಗಿಬರುವ ಉನ್ನತಾಧಿಕಾರಿಗಳ ವಿಷಯವನ್ನು ನಾನು ಹೇಳುತ್ತಿಲ್ಲ. ನಾನು ಇಲ್ಲಿ ಹೇಳಿರುವುದು ಸಾಮಾನ್ಯ ಅಧಿಕಾರಿಯ ವಿಷಯ. ಆದ್ದರಿಂದ ಭಾರತದಂಥ ದೇಶದಲ್ಲಿ ಮೇಲ್ದರ್ಜೆಯ ಅಧಿಕಾರಿ ಹಾಗೂ ನೌಕರರ ನಡುವಿನ ವ್ಯತ್ಯಾಸದ ಬಗ್ಗೆ ಮಾತನಾಡುವಾಗ ಕೇವಲ ವೇತನದಲ್ಲಿರುವ ವ್ಯತ್ಯಾಸದ ಬಗೆಗೆ ಮಾತ್ರ ಪರಿಶೀಲನೆ ನಡೆಸಬಾರದು. ಏಕೆಂದರೆ, ಮೇಲ್ದರ್ಜೆಯ ಅಧಿಕಾರಿಗಳು ತಮ್ಮ ವೇತನದ ನಾಲ್ಕು ಅಥವಾ ಆರುಪಟ್ಟು ಮೊಬಲಗನ್ನು ವಿಶೇಷ ಸವಲತ್ತಿನ ರೂಪದಲ್ಲಿ ಪಡೆಯುತ್ತಾರೆ. ಈ ವಿಶೇಷ ಸವಲತ್ತುಗಳ ನೀಡಿಕೆಗಾಗಿ ಅನೇಕ ವೇಳೆ ನಿಯಮಗಳನ್ನು ಸ್ವಲ್ಪಮಟ್ಟಿಗೆ ಉಲ್ಲಂಘಿಸಲಾಗುತ್ತದೆ. ಇಲ್ಲಿ ಯಾರ ಹೆಸರನ್ನು ಬಹಿರಂಗ ಪಡಿಸುವುದಿಲ್ಲ. ಆದರೆ ನಿಯಮಗಳನ್ನು ಹೇಗೆ ಉಲ್ಲಂಘಿಸಲಾಗುತ್ತದೆ ಎಂಬುದನ್ನಷ್ಟೇ ತಿಳಿಸುತ್ತೇನೆ. ಸರ್ಕಾರಿ ಉದ್ಯಮವೊಂದರ ಉನ್ನತಾಧಿಕಾರಿಯೊಬ್ಬರನ್ನು ದೆಹಲಿಗೆ ವರ್ಗಾವಣೆ ಮಾಡಲಾಯಿತು. ಅವರು ಅವರ ಕುಟುಂಬಕ್ಕಾಗಿ ಮುಂಬಯಿಯಲ್ಲಿ ಸರ್ಕಾರಿ ವೆಚ್ಚದಲ್ಲಿ ಒಂದು ಬಂಗಲೆಯನ್ನು ಹೊಂದಿದ್ದರು. ಹಾಗೆಯೇ ಮುಂಬಯಿಯಿಂದ ದೆಹಲಿಗೆ ಮತ್ತು ದೆಹಲಿಯಿಂದ ಮುಂಬಯಿಗೆ ಬಹುಪಾಲು ಪ್ರತಿ ವಾರವೂ ವಿಮಾನದ ಮೂಲಕ ಸಂಚರಿಸುವ ಇನ್ನೊಬ್ಬ ಉನ್ನತಾಧಿಕಾರಿಯೂ ಇದ್ದಾರೆ.

ಹಾಗೆಯೇ, ರೋಮೇನಿಯಾ ಮತ್ತು ಭಾರತದ ನಡುವೆ ಆದ ಒಪ್ಪಂದದ ಉಲ್ಲಂಘನೆಯ ಬಗ್ಗೆಯೂ ನಾನು ನಿಮ್ಮ ಗಮನ ಸೆಳೆಯಬಯಸುತ್ತೇನೆ. ಗೌಹಾಟಿಯಲ್ಲಿರುವ ತೈಲ ಸಂಸ್ಕರಣ ಸ್ಥಾವರದ ಸೀಮೆ ಎಣ್ಣೆ ಉತ್ಪಾದನಾ ಘಟಕ ದೀರ್ಘ ಕಾಲದಿಂದಲೂ ನಿಷ್ಕ್ರಿಯವಾಗಿದೆ. ಅದು ವರ್ಷದಲ್ಲಿ ಕೇವಲ 50 ರಿಂದ 80 ದಿನಗಳು ಕಾರ್ಯನಿರ್ವಹಿಸುತ್ತದೆ. ಈ ನಡುವೆ ಅಷ್ಟು ಕಾರ್ಯನಿರ್ವಹಿಸದೆ ಸಂಪೂರ್ಣವಾಗಿ ನಿಷ್ಕ್ರಿಯವಾಗಿದೆ. ಭಾರತ - ರೋಮೇನಿಯಾ ನಡುವಿನ ಒಪ್ಪಂದದ ಷರತ್ತುಗಳನ್ನು ಉಲ್ಲಂಘಿಸಿ, ಸಂಸ್ಕರಣ ಸ್ಥಾವರದಲ್ಲಿ ತುಕ್ಕು ಹಿಡಿದ ಯಂತ್ರಗಳನ್ನು ಸ್ಥಾಪಿಸಲಾಗಿತ್ತೆಂದು ನನಗೆ ತಿಳಿದು ಬಂದಿದೆ. ಇದಕ್ಕಾಗಿ ಅಧಿಕಾರಿಗಳು ಪಡೆದ ಲಾಭ ಏನು ಎಂಬುದು ನನಗೆ ತಿಳಿಯದು. ಹಾಗೊಂದು ವೇಳೆ ಅವರು ಯಾವುದೇ ರೀತಿಯ ಆಮಿಷಕ್ಕೆ ಒಳಗಾಗಿದ್ದರೆ ಅದು ನಿಜಕ್ಕೂ ಆತಂಕವನ್ನುಂಟುಮಾಡುವಂಥದ್ದು. ಪದೇ ಪದೇ ಕಾನೂನನ್ನು ಉಲ್ಲಂಘಿಸಲಾಗುತ್ತಿದೆ. ಇಂಥ ಅನೇಕ ಉದಾಹರಣೆಗಳನ್ನು ಕೊಡಬಲ್ಲೆ. ಆದರೆ ಸದ್ಯದಲ್ಲಿ, ಪ್ರಪಂಚದಾದ್ಯಂತ ಇರುವ ಸರ್ಕಾರಿ ಉದ್ಯಮಗಳಲ್ಲಿ

15

ಅಧಿಕಾರಿಗಳು ಕಾನೂನನ್ನು ಉಲ್ಲಂಘಿಸುವ ಪ್ರವೃತ್ತಿ ಹಾಗೂ ಒಬ್ಬರು ಇನ್ನೊಬ್ಬರ ರಕ್ಷಣೆಗೆ ಬರುವ ಪ್ರವೃತ್ತಿ ಚಾಲ್ತಿಯಲ್ಲಿದೆ ಎಂಬುದನ್ನು ಹೇಳಲಿಚ್ಛಿಸುತ್ತೇನೆ. ರಷ್ಯಾ ಕೂಡ ಇಂಥ ಸಮಸ್ಯೆನ್ನು ಎದುರಿಸಬೇಕಾಯಿತು. ಸರ್ಕಾರ ತನ್ನ ಅಧಿಕಾರಗಳಿಗೆ ಖಾಸಗಿ ಉದ್ಯಮದ ಅದೇ ದರ್ಜೆಯ ಅಧಿಕಾರಿಗಳು ಪಡೆಯುವ ಸವಲತ್ತುಗಳನ್ನು ಕೊಡಲಿಚ್ಛಿಸುವುದರಿಂದ ಇಂಥ, ಪದ್ಧತಿಯನ್ನು ತಡೆಯುವುದು ಕಷ್ಟವಾಗಿದೆ. ಟಾಟಾ ಮತ್ತು ಬಿರ್ಲಾಗಳು ತಮ್ಮ ಅಧಿಕಾರಿಗಳಿಗೆ ವಿಶೇಷ ಸವಲತ್ತುಗಳನ್ನು ಒದಗಿಸುವುದಾದರೆ ತನ್ನ ಅದಿಕಾರಿಗಳಿಗೂ ಆ ಸವಲತ್ತುಗಳನ್ನು ನೀಡಲು ಭಾರತ ಸರ್ಕಾರ ಇಚ್ಛಿಸುತ್ತದೆ ಎಂಬುದನ್ನು ಪ್ರಧಾನಮಂತ್ರಿಯವರು ಪದೇ ಪದೇ ಹೇಳಿದ್ದಾರೆ. ಇದು ಒಂದು ಕೆಟ್ಟ ಪದ್ಧತಿಯಷ್ಟೇ ಅಲ್ಲದೆ ಆಡಂಬರಕ್ಕೆ ಹಾಗೂ ದುಂದು ವೆಚ್ಚಕ್ಕೆ ಇದು ಎಡೆ ಮಾಡಿಕೊಡುತ್ತದೆ. ಸಮಾನತೆಯನ್ನು ತರುವ ಯಾವುದೇ ಪ್ರಯತ್ನವೂ ನಡೆದಿಲ್ಲ. ಪ್ರಧಾನ ಮಂತ್ರಿಯವರೇ ಇದಕ್ಕೆ ಮೇಲ್ಪಂಕ್ತಿ ಹಾಕುತ್ತಾರೆ. ಪ್ರಧಾನಮಂತ್ರಿ ಯವರಾಗಲೀ ಅಥವಾ ಇನ್ನಾವುದೆ ಸಚಿವರಾಗಲೀ ಒಂದು ಸರ್ಕಾರೀ ಉದ್ಯಮವನ್ನು ಉದ್ಘಾಟಿಸುವಾಗ ಅತಿಯೆನಿಸುವಷ್ಟು ಖರ್ಚು ಆಗುತ್ತಿದೆ. ತಾನು ಇನ್ನು ಮುಂದೆ ಯಾವುದೇ ಸ್ಥಾವರವನ್ನು ಉದ್ಘಾಟಿಸುವುದಿಲ್ಲವೆಂದೂ, ತನ್ನ ಬದಲು ಕಾರ್ಮಿಕನೊಬ್ಬನನ್ನು ಉದ್ಘಾಟಿಸುವಂತೆ ಅಹ್ವಾನಿಸುವುದೆಂದೂ ತಿಳಿಸಿದರು. ಒಮ್ಮೆ ಅವರ ಸಮ್ಮುಖದಲ್ಲಿ ಮಹಿಳಾ ಕಾರ್ಮಿಕಳೋಬ್ಬಳು ಒಂದು ಸ್ಥಾವರವನ್ನು ಉದ್ಘಾಟಿಸಿದಳು. ಅದರೆ ಈ ನಾಟಕ ಮತ್ತೆ ಒಂದು ಬಾರಿಯೂ ನಡೆಯಲಿಲ್ಲ. ಪ್ರತಿ ಬಾರಿಯೂ ಉದ್ಘಾಟಿಸಲು ಹೋಗುತ್ತಾರೆ, ಪ್ರತಿ ಬಾರಿಯೂ ಅದಕ್ಕಾಗಿ ಆಗಾಧ ಪ್ರಮಾಣದ ಹಣವನ್ನು ಖರ್ಚು ಮಾಡಲಾಗುತ್ತದೆ.

ಹಿರಾಕುಡ್ ಮತ್ತು ರೂರ್ಕೆಲಾ ಎರಡೂ ಅವರಿಸಿರುವ ವಿಸ್ತಾರ ಕೇವಲ 50 ರಿಂದ 60 ಮೈಲಿಗಳು. ಆದರೆ ಅಲ್ಲಿಗೆ ಮೂರು ವಿಮಾನ ನಿಲ್ದಾಣಗಳನ್ನು ಒದಗಿಸಲಾಗಿದೆ. ಪ್ರಧಾನ ಮಂತ್ರಿ ಹಾಗೂ ಇತರ ಸಚಿವರಿಗೆ ಹೆಚ್ಚಿನ ಅನುಕೂಲವನ್ನು ಒದಗಿಸಬೇಕೆಂಬುದಷ್ಟೇ ಇದರ ಹಿಂದೆ ಇರುವ ಕಾರಣ. ಈಗ ಅವು ಬಳಕೆಯಲ್ಲಿಲ್ಲ. ಅದನ್ನು ಪ್ರಯಾಣಕರನ್ನು ಒಯ್ಯುವುದಕ್ಕಾಗಲೀ ಸರಕುಗಳನ್ನು ಸಾಗಿಸುವುದಕ್ಕಾಗಲೀ ಬಳಸುತ್ತಿಲ್ಲ. ಇದರಿಂದ ಯಾವ ಪ್ರಮಾಣದಲ್ಲಿ ದುಂದುವೆಚ್ಚು ಹೆಚ್ಚಿದೆ ಎಂಬುದು ತಿಳಿಯುತ್ತದೆ.

ಶ್ರೀ ದಾಜಿ ಅವರು ಸರ್ಕಾರಿ ಉದ್ಯಮಗಳ ತೀವ್ರ ಬೆಂಬಲಿಗರು. ಆದರೆ, ಅವರು ಈ ಬಗ್ಗೆ ಮುಂದಿಟ್ಟ ವಾದಗಳು ಅವರ ಸಿದ್ಧಾಂತಕ್ಕೆ ವಿರುದ್ಧವಾದವುಗಳಾಗಿವೆ. ರಷ್ಯಾದಲ್ಲಿ ಇರುವ ಪರಿಸ್ಥಿತಿ ಏನು ಎಂಬ ಬಗ್ಗೆ ಅವರು ಸಾಕಷ್ಟು ಯೋಚಿಸಿಲ್ಲವೆಂದು ಕಾಣುತ್ತದೆ. ಹೆಚ್ಚು ಪ್ರಮಾಣದ ಹೇಯ ಕೃತ್ಯಗಳು ಹಾಗೂ ಅತ್ಯಾಚಾರಗಳು ನಡೆದಿವೆ.

ಅದಕ್ಕೆ ನನ್ನ ಬೆಂಬಲವಿಲ್ಲ. ಹಾಗೆಯೇ ಬಾರತದಲ್ಲಿನ ವೈಭವೋಪೇತ ಜೀವನ ಸಾಮಗ್ರಿಗಳ ಬಗ್ಗೆಯೂ ನನ್ನ ವಿರೋಧವಿದೆ. ಕಳೆದ 15 ವರ್ಷಗಳಲ್ಲಿ ಇಲ್ಲಿನ ಇವೇ ವಿದ್ಯಮಾನಗಳು ರಷ್ಯಾದಲ್ಲಿ ನಡೆದಿದ್ದಿದ್ದರೆ, ಅದಕ್ಕೆ ಕಾರಣರಾದ ಎಷ್ಟು ಮಂದಿ ಅಧಿಕಾರಿಗಳು ಹಾಗೂ ಸಚಿವರು ವಿರೋಧವನ್ನು ಎದುರಿಸ ಬೇಕಾಗುತ್ತಿತ್ತೋ ಹಾಗೂ ಗುಂಡಿಗೆ ಬಲಿಯಾಗಬೇಕಾಗುತ್ತಿತ್ತೋ; ಸರ್ಕಾರೀ ಉದ್ಯಮಗಳನ್ನು ಹೇಗೆ ನಡೆಸಬೇಕು ಎಂಬ ಬಗ್ಗೆ ಸರ್ಕಾರೀ ಉದ್ಯಮಗಳ ಬಗೆಗಿನ ಸಮಿತಿಗೆ ತಿಳಿವಳಿಕೆ ಇರಬೇಕು.

ನಾನು ಈ ಮೊದಲೇ ತಿಳಿಸಿರುವಂತೆ, ಸೋವಿಯತ್ ರಷ್ಯಾದಲ್ಲಿ ಇಂಥ ದುಂದು ವೆಚ್ಚವಾಗಿದ್ದಿದ್ದರೆ ಅದಕ್ಕೆ ಕಾರಣರಾದ ಸಚಿವರು ಹಾಗೂ ಅಧಿಕಾರಿಗಳನ್ನು ಗುಂಡಿಕ್ಕಿ ಕೊಲ್ಲುತ್ತಿದ್ದರು. ಇದಕ್ಕೆ ಯಾವುದೇ ಪಕ್ಷವೂ ಆಕ್ಷೇಪಣೆ ಎತ್ತಬಾರದು. ಸಮಾಜವಾದೀ ತತ್ವಗಳ ಮೇಲೆ ಸರ್ಕಾರೀ ಉದ್ಯಮಗಳನ್ನು ನಡೆಸದಿದ್ದಲ್ಲಿ, ದುಂದು ವೆಚ್ಚದಿಂದಾಗಿ ಅವು ನಷ್ಟವನ್ನನುಭವಿಸುವುದು ಖಂಡಿತ. ನಾನು ಒತ್ತಿ ಹೇಳಬಯಸುವ ಮೊದಲ ಅಂಶ ಇದು.

ಪ್ರಜಾಸತ್ತೆಯಲ್ಲಿ ಕಾರ್ಮಿಕ ಹಾಗೂ ಆಡಳಿತ ಮಂಡಲಿ ಇವುಗಳ ನಡುವಿನ ಸಂಬಂಧದ ಬಗ್ಗೆ ಹೇಳುವುದಾದರೆ, ಸರ್ಕಾರೀ ಉದ್ಯಮದಲ್ಲಿ ಕೆಲಸ ಮಾಡುವ ಒಬ್ಬ ಕಾರ್ಮಿಕನಿಗೆ ಇರುವಷ್ಟು ಅತೃಪ್ತಿ ಖಾಸಗೀ ಉದ್ಯಮದಲ್ಲಿ ಕೆಲಸ ಮಾಡುವ ಕಾರ್ಮಿಕನಿಗೆ ಇಲ್ಲ.

ಪ್ರಜಾಸತ್ತಾತ್ಮಕ ವ್ಯವಸ್ಥೆಯ ಬಗ್ಗೆ ಒಂದು ಸುಂದರವಾದ ಉದಾಹರಣೆಯನ್ನು ಕೊಡಲಿಚ್ಛಿಸುತ್ತೇನೆ. ಟಾಟಾನಗರ ಬಂಡವಾಳಗಾರರಿಗೆ ಸೇರಿದ ಕಂಪನಿಯ ನಗರ, ಇಲ್ಲಿ ಅದರದೇ ರೀತಿಗಳಿವೆ. ಆದರೆ, ಚಿತ್ತರಂಜನ್ ಇದನ್ನು ಮೀರಿಸಿದೆ. ಇಲ್ಲಿ ನಗರದೊಳಗೆ ಪ್ರವೇಶಿಸಲೂ ಸಹ ಅನುಮತಿ ಪಡೆಯಬೇಕು. ನಮ್ಮಲ್ಲಿರುವ ಪ್ರಜಾಸತ್ತೆ ಈ ರೀತಿಯದು. ಇಂಥ ನೂರಾರು ಉದಾಹರಣೆಗಳನ್ನು ನಾನು ಕೊಡಬಲ್ಲೆ.

ಮಾನ್ಯ ಸಭಾಧ್ಯಕ್ಷರೆ, ಸಮಿತಿಗಳನ್ನು ರಚಿಸುವಾಗ, ಅವುಗಳ ಪರಿಶೀಲನಾಂಶಗಳಲ್ಲಿ ಈ ವಿಷಯಗಳನ್ನು ಸೇರಿಸದಿದ್ದರೆ, ಲೋಕ ಸಭೆಯ ಸದಸ್ಯರಾದ ನಾವೆಲ್ಲ ಅಸಹಾಯಕರಾಗುತ್ತೇವೆ.

ವಾಣಿಜ್ಯೋದ್ದೇಶದ ಯಶಸ್ಸಿಗೆ ಸಂಬಂಧಿಸಿದಂತೆ ಹೇಳುವುದಾದರೆ, ಸರ್ಕಾರೀ ಉದ್ಯಮದಲ್ಲಿ ಬಹಳಷ್ಟು ಕೊರತೆಗಳಿವೆ. ಅದನ್ನು ಒಂದೇ ವಾಕ್ಯದಲ್ಲಿ ವಿಷದೀಕರಿಸಬಹುದು.

ಹೊಸ ಸಮಿತಿಯೊಂದನ್ನು ರಚಿಸುವ ಬಗ್ಗೆ ನನ್ನ ಒಪ್ಪಿಗೆಯಿದೆ. ನನ್ನ ಮಾತನ್ನು ಬೇಗ ಮುಗಿಸುತ್ತೇನೆ. ಸರ್ಕಾರಿ ಉದ್ಯಮಗಳ ಸ್ಥಿತಿ ಶೋಚನೀಯವಾಗಲು ಕಾರಣವಾದ ಅಂಶಗಳನ್ನು ಸನ್ಮಾನ್ಯ ಸಚಿವರು ನನ್ನ ಮಾತಿನಿಂದ ಗ್ರಹಿಸಬಹುದು.

ಭಾರತದಲ್ಲಿ ಅಗಾಧ ಪ್ರಮಾಣದ ಕಬ್ಬಿಣದ ಅದಿರು ಮತ್ತು ಇದ್ದಲಿನ ನಿಕ್ಷೇಪಗಳಿರುವುದರಿಂದ ಉಕ್ಕು ಭಾರತದಲ್ಲಿ ಕಡಿಮೆ ಬೆಲೆಗೆ ದೊರೆಯುವಂತಾಗಬೇಕು. ನಮ್ಮ ದೇಶದಿಂದ 4-6 ಸಾವಿರ ಮೈಲಿಗಳು ದೂರವಿರುವ ಜಪಾನ್ ದೇಶಕ್ಕೆ ನಾವು ಕಬ್ಬಿಣದ ಅದಿರನ್ನು ರಫ್ತು ಮಾಡುತ್ತೇವೆ. ಜಪಾನು ಉಕ್ಕನ್ನು ನಮ್ಮಲ್ಲಿಯೆ ಉತ್ಪಾದನೆಯಾದ ಉಕ್ಕಿನ ಬೆಲೆಗಿಂತ ಕಡಿಮೆ ಬೆಲೆಗೆ ಮಾರುತ್ತದೆ. ನಮ್ಮಲ್ಲಿ ಉಕ್ಕಿನ ಬೆಲೆ ಬಹಳ ದುಬಾರಿ. ಸರ್ಕಾರಿ ಉದ್ಯಮಗಳ ಕಾರ್ಯರೀತಿಯಿಂದಾಗಿ ಬೆಲೆಗಳು ಅತಿ ಹೆಚ್ಚಾಗಿಯೇ ಇರುತ್ತವೆ. ಹಾಗೆಯೇ ಇರಲೆಂದು ಖಾಸಗಿ ಸಂಸ್ಥೆಗಳು ಆಶಿಸುತ್ತವೆ. ಏಕೆಂದರೆ ಇದರ ಲಾಭ ದೊರೆಯುವುದು ಖಾಸಗೀ ವಲಯದವರಿಗೆತಾನೆ.

ಸರ್ಕಾರಿ ಉದ್ಯಮಗಳಲ್ಲಿ ಇವೆಲ್ಲಾ ಆಗುತ್ತಿದೆ. ಖಾಸಗೀ ಉದ್ಯಮಗಳಲ್ಲಿ ಹೀಗೇನಾದರು ಆಗಿದ್ದಿದ್ದರೆ ಅವು ಎಂದೋ ದಿವಾಳಿಯಾಗುತ್ತಿದ್ದವು. ಆದರೆ ಸರ್ಕಾರ ಉದ್ಯಮಗಳನ್ನು ರಾಜ್ಯಗಳು ನಡೆಸುವುದರಿಂದ ಆ ಪರಿಸ್ಥಿತಿ ಉಂಟಾಗುವುದಿಲ್ಲ. ಆದ್ದರಿಂದ ಸರ್ಕಾರಿ ಉದ್ಯಮಗಳಲ್ಲಿನ ವೆಚ್ಚಗಳ ಲೆಕ್ಕದ ಬಗ್ಗೆ ಮಾನ್ಯ ಸಚಿವರು ಹೆಚ್ಚು ಎಚ್ಚರಿಗೆ ವಹಿಸಬೇಕೆಂದು ನನ್ನ ಸಲಹೆ. ವೆಚ್ಚಗಳ ಬಗ್ಗೆ ಸರಿಯಾಗಿ ಲೆಕ್ಕವಿಡುವುದರಿಂದ ಯಾವ ಸಂದರ್ಭದಲ್ಲಿ ಮತ್ತು ಯಾರು ನಿಯಮಗಳನ್ನು ಉಲ್ಲಂಘಿಸುತ್ತಿದ್ದಾರೆ ಎಂಬುದು ತಿಳಿದುಬರುತ್ತದೆ. ಹಾಗೆಯೇ ಸರ್ಕಾರ ತಪ್ಪಿತಸ್ಥರ ಬಗ್ಗೆ ಹೆಚ್ಚಿನ ಎಚ್ಚರಿಕೆ ವಹಿಸಬೇಕು. ಏಕೆಂದರೆ, ಯಾವಾಗ ತಪ್ಪಿತಸ್ಥನನ್ನು ಹಿಡಿದರೂ, ಅವನು ತಪ್ಪನ್ನು ಇನ್ನೊಬ್ಬರ ಮೇಲೆ ಹಾಕಿ, ಅವನನ್ನು ಬಲಿಪಶುವನ್ನಾಗಿ ಮಾಡಿಬಿಡುತ್ತಾನೆ. ನಿಜವಾಗಿ ತಪ್ಪು ಮಾಡಿದವನು ತಪ್ಪಿಸಿಕೊಂಡು ಬಿಡುತ್ತಾನೆ. ಹೊಸ ಸಚಿವರಿಗೆ ಇದೆಲ್ಲ ಕ್ರಮೇಣ ತಿಳಿಯುತ್ತದೆ. ಕೆಲವೊಮ್ಮೆ ಜವಾಬ್ದಾರಿ ನೇರವಾಗಿ ಹಣಕಾಸು ಸಚಿವರ ಹೆಗಲಿಗೆ ಬರಬಹುದು. ಅನಂತರ ಅದು ಪಾಟೀಲ್ ಸಾಹೇಬರ ಹೆಗಲಿಗೆ ಸಾಗಿ ಕೊನೆಗೆ ಕಾಮತರೇ ಜವಾಬ್ದಾರರು ಎಂದಾಗಬಹುದು. ಹೀಗೆ, ನಿಜವಾಗಿ ಕಾರಣರಾದವರು ದಂಡನೆಯಿಲ್ಲದೆಯೇ ಪಾರಾಗಿಬಿಡುತ್ತಾರೆ. ಇಂಥ ಸಂದರ್ಭಗಳನ್ನು ತಪ್ಪಿಸಲು ತಪ್ಪಿತಸ್ಥ ಹಿಡಿಯಲು ಪ್ರಯತ್ನಿಸುವುದಕ್ಕಿಂತ ದೋಷವನ್ನೇ ನಿವಾರಿಸುವ ದಿಕ್ಕಿನಲ್ಲಿ ಸರ್ಕಾರ ಪ್ರಯತ್ನಿಸುವುದು ಒಳ್ಳೆಯದು.

ನನ್ನ ಮಾತನ್ನು ಮುಗಿಸುವ ಮುನ್ನ, ಮತ್ತೊಂದು ಮಾತನ್ನು ಹೇಳ ಬಯಸುತ್ತೇನೆ. ಸರ್ಕಾರದಲ್ಲಿ ಈಗಿರುವ ಸಚಿವರುಗಳು ಅವರನ್ನು ಮಂತ್ರಿ ಮಂಡಲ ದಿಂದ ಕೈಬಿಟ್ಟ ಕೂಡಲೇ ಖಾಸಗೀ ವಲಯ ಉದ್ಯಮಗಳ ತೀವ್ರ ಬೆಂಬಲಿಗರಾಗಿ ಮಾರ್ಪಡುತ್ತಾರೆ. ಆದರೆ ನನ್ನಂಥ ವ್ಯಕ್ತಿ ಸದಾ ಕಾಲವೂ ಸರ್ಕಾರೀ ವಲಯದ ಉದ್ಯಮಗಳ ಬೆಂಬಲಿಗನಾಗಿಯೇ ಉಳಿಯುತ್ತಾನೆ.

-:=:=:-



16

# 7. ಮೂರನೇ ಪಂಚವಾರ್ಷಿಕ ಯೋಜನೆಯ ಮಧ್ಯಕಾಲೀನ ಮೌಲ್ಯಮಾಪನದ ಬಗ್ಗೆ ವರದಿ *

ಈ ಯೋಜನೆಯನ್ನು ರೂಪಿಸಿದವರು ರಾಷ್ಟ್ರೀಯ ಪ್ರಜ್ಞೆ ಹಾಗೂ ಉದ್ದೇಶವಿಲ್ಲದ ತೋರಿಕೆಯ ಬುದ್ಧಿ ಜೀವಿಗಳಾದರೆ ಅದನ್ನು ಕಾರ್ಯರೂಪಕ್ಕೆ ತರುವವರು ವೈಭವಯುತ ಜೀವನದಲ್ಲಿ ನಂಬಿಕೆಯಿಟ್ಟಿರುವ ವ್ಯಕ್ತಿಗಳು.

ಇದನ್ನು ರೂಪಿಸಿರುವವರು ತೋರಿಕೆಯ ಬುದ್ಧಿಜೀವಿಗಳು. ಅಸಂಗತ ಹಾಗೂ ಅನಾವಶ್ಯಕ ವಿಷಯಗಳನ್ನು ಕೈಬಿಟ್ಟಿದ್ದರೆ 40-50 ಪುಟಗಳಲ್ಲಿ ಅಡಕಗೊಳಿಸಬಹುದಾದ ಈ ವರದಿ 175 ಪುಟಗಳಷ್ಟು ಬೆಳೆದಿರುವುದೇ ಇದಕ್ಕೆ ಸಾಕ್ಷಿ. ಬ್ರಿಟಿಷರನ್ನು ಅನುಕರಿಸುವುದರಲ್ಲೂ ಅವರು ಪರಿಣತಿ ಪಡೆದಿಲ್ಲದಿರುವುದು ಇದಕ್ಕೆ ಕಾರಣವಿರಬಹುದು.

ಆರ್ಥಿಕ ಹಿನ್ನೆಲೆಯ ಬಗೆಗಿನ ಅಧ್ಯಾಯ ಸುಮಾರು ಹತ್ತು ಪುಟಗಳಷ್ಟಿದೆ. ಇದನ್ನು ಸುಲಭವಾಗಿ ಒಂದೂವರೆ ಪುಟಕ್ಕೆ ತಗ್ಗಿಸಬಹುದು. ಇದು ತರ್ಕ ಸಮ್ಮತವಲ್ಲದ ಅವೈಚಾರಿಕತೆಯಿಂದ ಕೂಡಿದ ಶಬ್ದಾಡಂಬರ ಹಾಗೂ ಅನಗತ್ಯ ವಿವರಗಳಿಂದ ಕೂಡಿದೆ. ಇದು ಉದ್ದೇಶರಹಿತವಾಗಿದ್ದು ವಸ್ತುನಿಷ್ಠತೆಯಿಂದ ದೂರವಾಗಿದೆ. ಹಾಗಾಗಿ, ಬಳಸು ಹಾದಿಯ ಕೋಟೆಯ ಸಂದಿಗೊಂದಿಗಳಲ್ಲಿ ತಪ್ಪಿಸಿ ಕೊಂಡ ಹಾಗೆಲ್ಲ ಯಾವುದೆ ಪರಿಹಾರವನ್ನು ಕಂಡುಹಿಡಿಯಲು ಅಸಮರ್ಥರಾಗಿದ್ದಾರೆ. ಸೋವಿಯತ್ ರಷ್ಯಾ ಹಾಗೂ ಅಮೇರಿಕಾ ಪದ್ಧತಿಗಳಿಂದ ಆಕರ್ಷಿತರಾದ ಅವರಿಗೆ ಯಾವುದೇ ರಾಷ್ಟ್ರೀಯ ಭಾವನೆ ಇಲ್ಲ. ಹಾಗೂ ಸ್ಥಳೀಯ ಪದ್ಧತಿಗಳ ಬಗ್ಗೆ ಅವರು ಯೋಚಿಸುವುದಿಲ್ಲ. ತಮ್ಮ ಬಗ್ಗೆ ಅಷ್ಟೇ ಅವರಿಗೆ ಕಾಳಜಿ. ಅಲ್ಲದೆ ಅವರು ನಮ್ಮ ದೇಶದ ಪುರಾತನ ಉತ್ಪಾದನಾ ವ್ಯವಸ್ಥೆಯ ತಳಹದಿಯ ಮೇಲೆ ಅಮೇರಿಕಾ ಹಾಗೂ ಸೋವಿಯತ್ ರಷ್ಯಾ ದೇಶಗಳ ಮಾದರಿಯ ಬಳಕೆವ್ಯವಸ್ಥೆಯನ್ನು ತರಬಯಸಿದ್ದಾರೆ. ಭ್ರಷ್ಟಾಚಾರಕ್ಕೆ ಸಂಬಂಧಪಟ್ಟಂತೆ, ಸಚಿವರಿಗೆ ಕೇಳುವ ಸಹನೆಯಿದ್ದರೆ, ಸರ್ಕಾರದ ಹಣದಿಂದ ಎರಡು ಲಕ್ಷ ರೂಪಾಯಿ ಮೌಲ್ಯದ ಹಾಸುಗಂಬಳಿ ಹಾಕಿ ನಮ್ಮ ಸರ್ಕಾರದ ಮುಖ್ಯಸ್ಥರ ಮನೆಯನ್ನು ಅಲಂಕರಿಸಲಾಗಿದೆ ಎಂಬುದನ್ನು ಹೇಳಬಯಸುತ್ತೇನೆ. ಇದೂ ಸಹ ಯೋಜನೆಗೆ ಮಾರಕವಾಗುತ್ತದೆ. ಏಕೆಂದರೆ, ಈ ಹಣವನ್ನು ಸಹ ಯಾವುದಾದರೊಂದು ಕಾರ್ಖಾನೆಯಲ್ಲಿ ತೊಡಗಿಸಬಹುದಾಗಿತ್ತು. ಹೀಗೆ ಎಷ್ಟು ಲಕ್ಷ ರೂಪಾಯಿಗಳನ್ನು ವೆಚ್ಚ ಮಾಡಲಾಗಿದೆಯೋ ತಿಳಿಯದು. ಈ ರೀತಿಯಲ್ಲಿ 200 ಕೋಟಿ ರೂಪಾಯಿ ಅಥವಾ 20,000 ಕೋಟಿ

* ಲೋಕ ಸಭಾ ಚರ್ಚೆಗಳು, ಡಿಸೆಂಬರ್ 9, 1963.

ರೂಪಾಯಿಗಳನ್ನು ವ್ಯರ್ಥವಾಗಿ ಬಳಸಲಾಗಿದೆ.

ನಾನು ಬಳಕೆಯ ಬಗ್ಗೆ ಮಾತನಾಡುತ್ತಿದ್ದೆ. ಉತ್ಪಾದನೆಯ ತಳಹದಿ ಭಾರತೀಯವಾಗಿಯೇ ಉಳಿದಿರುವಾಗ ಬಳಕೆಯ ವ್ಯವಸ್ಥೆಯನ್ನು ನಮಗೆ ಅನ್ಯವಾದ ರಷ್ಯಾ ಮತ್ತು ಅಮೇರಿಕಾದ ಮಾದರಿಯಲ್ಲಿ ತರಲಾಗುತ್ತಿದೆ. ಈ ಯೋಜನೆಯ ವಿರುದ್ಧ ಇದಕ್ಕಿಂತಲೂ ಶಕ್ತಿಯುತವಾದ ಹಾಗೂ ಬಲವಾದ ವಾದ ಇರಲಾರದು.

ವರದಿಯ ವಸ್ತುನಿಷ್ಠ ವಿಶ್ಲೇಷಣೆಯ ಬಗ್ಗೆ ಮಾತನಾಡಿದ್ದೆ. ನೀರಾವರಿಯ ಬಗ್ಗೆ ಕೊಟ್ಟಿರುವ ಅಂಕಿ ಅಂಶಗಳನ್ನು ನಾವು ನೋಡಿದರೆ, ಮೊದಲನೆಯ ಹಾಗೂ ಎರಡನೆಯ ವರ್ಷಗಳಿಗೆ ಮಾತ್ರ ಅಂಕಿಗಳನ್ನು ಕೊಡಲಾಗಿದೆ. ಮೂರನೆಯ ವರ್ಷಕ್ಕೆ ಕಾಲ್ಪನಿಕ ಅಂಕಿ ಅಂಶಗಳನ್ನು ಕೊಡಲಾಗಿದೆ. ಪರಿಣಾಮವಾಗಿ, ಮೊದಲನೆಯ ಮತ್ತು ಎರಡನೆಯ ವರ್ಷಗಳಲ್ಲಿ, ಭಾರೀ ಮತ್ತು ಮಧ್ಯಮ ನೀರಾವರಿಗಳ ಅಡಿಯಲ್ಲಿ ತೋರಿಸಲಾಗಿರುವ ಪ್ರದೇಶ ಹೆಚ್ಚೆಂದರೆ 12 ಲಕ್ಷ ಎಕರೆಗಳು. ಆದರೆ ಮೂರನೆಯ ವರ್ಷಕ್ಕೆ ನಿಗದಿ ಪಡಿಸಿರುವ ಗುರಿ 25 ಲಕ್ಷ ಎಕರೆಗಳು. ಹೀಗಾಗಿ, ಶೇಕಡಾ ಪ್ರಮಾಣ 35 ರಷ್ಟು ಆಗುತ್ತದೆ. ಆದರೆ, ಆದ ಕೆಲಸ ನೋಡಿದರೆ ಅದು ಕೇವಲ ಶೇಕಡ 27ರಷ್ಟು ಆಗುತ್ತದೆ. ಹಾಗೆಯೇ ಸಣ್ಣ ನೀರಾವರಿಯ ಬಗ್ಗೆ ಕೊಡಲಾಗಿರುವ ಅಂಕಿ ಅಂಶಗಲ್ಲೂ ಕಡಿಮೆ ಆಗುತ್ತದೆ. ಆದ್ದರಿಂದ, ವರದಿಯನ್ನು ಪ್ರಾಮಾಣಿಕವಾಗಿ ಸಿದ್ಧಪಡಿಸಿಲ್ಲ ಎಂಬುದು ನನ್ನ ಅಭಿಪ್ರಾಯ.

ನನ್ನ ಅಭಿಪ್ರಾಯಕ್ಕೆ ಬೆಂಬಲವಾಗಿ ನಾನು ಇನ್ನು ಒಂದು ಉದಾಹರಣೆಯನ್ನು ಕೊಡುತ್ತೇನೆ. ಯಂತ್ರೋಪಕರಣಗಳಿಗೆ ಸಂಬಂಧಿಸಿದಂತೆ ಅಗತ್ಯವಾದ ವಿವರಗಳನ್ನು ಕೊಡದೆ ಅವುಗಳ ಮೌಲ್ಯವನ್ನಷ್ಟೇ ಕೊಡಲಾಗಿದೆ. ಇಷ್ಟು ರೂಪಾಯಿ ಮೌಲ್ಯದ ಸಕ್ಕರೆ ಗಿರಣಿಗಳನ್ನು ಮತ್ತು ಇಷ್ಟು ರೂಪಾಯಿ ಮೌಲ್ಯದ ಯಂತ್ರೋಪಕರಣಗಳನ್ನು ಸ್ಥಾಪಿಸಲಾಗಿದೆ ಎಂದು ಹೇಳಲಾಗಿದೆಯೇ ವಿನಃ ಅವುಗಳ ಸಾಮರ್ಥ್ಯದ ಬಗ್ಗೆ ಒಂದು ಮಾತೂ ಇಲ್ಲ. ಈ ಅಂಶವನ್ನು ಇನ್ನಷ್ಟು ವಿಶದೀಕರಿಸುವ ಮುನ್ನ ಕೆಲವೊಂದು ಸಾಮಾನ್ಯ ಅಂಶಗಳನ್ನು ಹೇಳಬಯಸುತ್ತೇನೆ. ಇದಕ್ಕೆ ಬಹುಶಃ ಆಡಳಿತ ಪಕ್ಷವೂ ಆಕ್ಷೇಪಿಸಲಾರದು. ಮೊದಲನೆಯ ಅಂಶ, ಲೋಪದೋಷಗಳ ಜವಾಬ್ದಾರಿಯಿಂದ ನುಣುಚಿಕೊಳ್ಳುವುದಕ್ಕೆ ಸಂಬಂಧಿಸಿದೆ. ಯೋಜನೆಯನ್ನು ರೂಪಿಸಿ ಸಿದ್ಧಪಡಿಸಿ ಬರೆಯುವವರು ದೋಷವನ್ನು ಅದನ್ನು ಕಾರ್ಯರೂಪಕ್ಕೆ ತರುವವರ ಮೇಲೆ ಹಾಕುತ್ತಾರೆ ಮತ್ತು ಸರ್ಕಾರದ ಎಲ್ಲ ಅಧಿಕಾರಿಗಳೂ ತಮ್ಮ ಲೋಪಗಳನ್ನು ಹಾಗೂ ಕೃತ್ಯಗಳನ್ನು ಸಮರ್ಥಿಸಿಕೊಳ್ಳುವ ಪ್ರವೃತ್ತಿಯನ್ನು ಬೆಳೆಸಿಕೊಂಡಿದ್ದಾರೆ. ಸರಿಯಾದ ಪರಿಹಾರವನ್ನು ಕಂಡುಹಿಡಿಯಲು

ಯಾರೂ ಪ್ರಯತ್ನಿಸುವುದಿಲ್ಲ. ಕಡತವನ್ನು ಪರಿಶೀಲಿಸಿದರೆ, ''ಇದಕ್ಕೆ ನಾನು ಕಾರಣವಲ್ಲ, ಬೇರೊಬ್ಬರು ಇದಕ್ಕೆ ಜವಾಬ್ದಾರರು '' ಎಂದು ಅಂಚಿನಲ್ಲಿ ಬರೆದಿರುವುದನ್ನು ಕಾಣಬಹುದು. ಈ ಪ್ರವೃತ್ತಿಯನ್ನು ಈ ಸದನದಲ್ಲಿಯೂ ನಾವು ನೋಡಿದ್ದೇವೆ. ಸದನದಲ್ಲಿ ಗುರ್ ಪ್ರಕರಣವನ್ನು ಎತ್ತಿದಾಗ, ಬ್ರಹ್ಮ ಪರ್‌ಕಾಶ್ ಅವರು ಯಾವುದೇ ರೀತಿಯಲ್ಲೂ ತಾವು ಅದಕ್ಕೆ ಕಾರಣರಲ್ಲವೆಂದು ಅದಕ್ಕೆ ಕಾರಣ ರೈಲ್ವೆ ಮಂತ್ರಾಲಯದ ದೋಷವೆಂದೂ ಮತ್ತು ಅವರು ಜನರಿಂದ ಕಾನೂನಬಾಹಿರವಾಗಿ ಇನಾಮುಗಳನ್ನು ಪಡೆದರೆಂದೂ ಹೇಳಿದರು. ತಮ್ಮನ್ನು ದೂಷಿಸಬಾರದೆಂದು ರೈಲ್ವೆ ಮಂತ್ರಾಲಯ ಹೇಳಬಹುದು, ಪ್ರಧಾನಮಂತ್ರಿಯವರೇ ಹೊಸ ಶೈಲಿಯ ಹಾಗೂ ವೈಭವಯುತವಾದ ಯುಗಕ್ಕೆ ಕೊಂಡೊಯ್ಯುತ್ತಿರುವಾಗ ಅವರಾದರೂ ಏನು ಮಾಡಬಲ್ಲರು. ಹಾಗಾಗಿ, ಉಂಟಾದ ದೋಷಗಳ ಜವಾಬ್ದಾರಿಯಿಂದ ನುಣುಚಿಕೊಳ್ಳುವ ಪರಿಪಾಠ ಬೆಳೆಯುತ್ತಿದೆ. ಆದ್ದರಿಂದ, ಆದ ತಪ್ಪನ್ನು ನಿರಾಕರಿಸಬೇಡಿ, ಪರಿಹಾರ ಕ್ರಮಗಳನ್ನು ಕೈಗೊಳ್ಳಿ, ಜವಾಬ್ದಾರಿಯನ್ನು ನಿಗದಿಮಾಡಿ, ಅಗತ್ಯವಿದ್ದಲ್ಲಿ ಮತ್ತು ತಪ್ಪಿತಸ್ಥರನ್ನು ಶಿಕ್ಷಿಸಿ ಎಂಬುದನ್ನು ನಾನು ಒತ್ತಿ ಹೇಳುತ್ತೇನೆ. ಅದೇ ರೀತಿಯಲ್ಲಿ ಹಾಕಿಕೊಳ್ಳುವ ಗುರಿಗಳ ಬಗ್ಗೆ ಹೇಳಲಿಚ್ಛಿಸುತ್ತೇನೆ. ಆದರಲ್ಲಿ ಮೊದಲನೆಯದು ವೆಚ್ಚ, ಎರಡನೆಯದು ಸಾಮಗ್ರಿಗಳು, ಮೂರನೆಯದು ಮಾನವ. ವೆಚ್ಚಕ್ಕೆ ಸಂಬಂಧಿಸಿದಂತೆ ಹೇಳುವುದಾದರೆ, ವಿವಿಧ ಶೀರ್ಷಿಕೆಗಳಡಿಯಲ್ಲಿ ವೆಚ್ಚಕ್ಕಾಗಿ ಹಣ ಹಂಚಿಕೆಯಾಗಿರುತ್ತದೆ ಮತ್ತು ವರ್ಷದ ಕೊನೆಯಲ್ಲಿ ಎಂದರೆ ಮಾರ್ಚ್ ಅಥವಾ ಏಪ್ರಿಲ್‌ನಲ್ಲಿ ಎಲ್ಲ ಇಲಾಖೆಗಳೂ ಆ ಹಣವನ್ನು ಪೂರ್ಣವಾಗಿ ವೆಚ್ಚ ಮಾಡಲು ಆತುರದಿಂದ ತೊಡಗುತ್ತವೆ. ಇದರಿಂದಾಗಿ ಅನಗತ್ಯ ದುಂದು ಉಂಟಾಗುತ್ತದೆ. ಆದ್ದರಿಂದ, ವೆಚ್ಚ ಮಾಡಬೇಕೆಂದು ನಿಗದಿ ಪಡಿಸುವ ಗುರಿ ಅಧಿಕವಾಗಿರಬಾರದು. ಅದರ ಬದಲು, ಸಾಮಗ್ರಿಗಳ ಗುರಿ ಅಧಿಕವಾಗಿರಬೇಕು. ಎಲ್ಲಕ್ಕಿಂತ ಹೆಚ್ಚಾಗಿ ಮಾನವರಿಗೆ ಅತಿ ಹೆಚ್ಚಿನ ಗುರಿ ಹಾಕಿಕೊಳ್ಳಬೇಕು. ಆದರೆ, ಇದನ್ನು ಸರ್ಕಾರ ಯಾವಾಗಲೂ ಮರೆಯುತ್ತದೆ. ಭಾರತದಲ್ಲಿನ ಪ್ರಜೆಗಳು ಅತಿ ದುರ್ಬಲರಾಗಿದ್ದಾರೆ. ಅವರು ಕಷ್ಟಪಟ್ಟು ಕೆಲಸ ಮಾಡಲಾರರು, ಸನಿಕೆ ಹಿಡಿಯಲಾರರು, ಭೂಮಿ ಅಗೆಯಲಾರರು, ಅಂಥಹವರು ಬಂದೂಕನ್ನು ಹೇಗೆ ಬಳಸಿಯಾರು. 20 ಮಂದಿಯ ಪೈಕಿ ಕೇವಲ ಒಬ್ಬನು ಬಂದೂಕನ್ನು ಎತ್ತಬಲ್ಲ. ಉಳಿದವರು ಅಷ್ಟನ್ನೂ ಮಾಡಲಾಗದವರು. ಆದರೆ ಕೇವಲ ಬಂದೂಕುಗಳಷ್ಟೇ ನನ್ನ ಕಾಳಜಿಯ ವಿಷಯವಲ್ಲ, ಸನಿಕೆಯ ಬಗ್ಗೆಯೂ ಇದೇ ಅನ್ವಯಿಸುತ್ತದೆ. ಭಾರತದ ಜನ ದುರ್ಬಲರಾಗುತ್ತಿದ್ದಾರೆ. ಆದ್ದರಿಂದ, ಅವರು ಕಷ್ಟಪಟ್ಟು ಕೆಲಸ ಮಾಡಲು ಸಬಲರನ್ನಾಗಿಸುವ ಯೋಜನೆ ನಮ್ಮ ಇಂದಿನ ಅಗತ್ಯ.

ಯೋಜನೆಯನ್ನು ರೂಪಿಸುವ ಉದ್ದೇಶದ ಬಗ್ಗೆ ತಿಳಿಯೋಣ. ಯೋಜನೆಯಲ್ಲಿ ಯಾವ ವಿಷಯಕ್ಕೆ ಮುಖ್ಯವಾಗಿ ಪ್ರಾಮುಖ್ಯತೆ ಕೊಡಬೇಕು ? ಉದಾಹರಣೆಗೆ ಕೃಷಿ. ಕೃಷಿಗೆ ದೀರ್ಘ ಇತಿಹಾಸವಿದೆ. ಕೃಷಿಯನ್ನು ಉತ್ತಮ ಗೊಳಿಸುವ ಪ್ರಯತ್ನಗಳನ್ನೂ ಮಾಡಬೇಕೆಂಬುದು ನಿಜ. ಒಂದು ಕ್ಷೇತ್ರವನ್ನು ಆಯ್ದುಕೊಂಡಾಗ ಅದರ ಎಲ್ಲ ಅಂಶಗಳಿಗೆ ಗಮನ ಕೊಡುವ ಬದಲು ಅದರ ಒಂದು ಅಂಶಕ್ಕೆ ಗಮನ ಕೊಟ್ಟು ಅದನ್ನು ಸಾಧಿಸಬೇಕು. ಕೃಷಿಗೆ ಸಂಬಂಧಿಸಿದಂತೆ, ನದೀ ನೀರಿನಿಂದ ಉಂಟಾಗುವ ಭೂ ಸವೆತದಿಂದ ಭೂಮಿಯನ್ನು ಕಾಪಾಡಲು ಭೂಸಾರ ಸಂರಕ್ಷಣೆಯ ಕ್ರಮಗಳನ್ನು ಕೈಗೊಳ್ಳಲಾಗುವುದೆಂದು ಮತ್ತು ಮುಳುಗಡೆಯಾಗಿರುವ ಭೂಮಿಯನ್ನು ಕೃಷಿ ಯೋಗ್ಯವನ್ನಾಗಿ ಮಾಡಲಾಗುವುದೆಂದು ತಿಳಿಸಲಾಗಿದೆ. ಸರ್ವತೋಮುಖ ಸುಧಾರಣೆಯ ದೃಷ್ಟಿಯಿಂದ ಅವನ್ನು ಮಾಡಬಹುದು. ಆದರೆ , ಜೊತೆಗೆ ಒಂದು ನಿರ್ದಿಷ್ಟ ಕಾರ್ಯಾಚರಣೆಯ ಕ್ರಮವನ್ನೂ ನಿರ್ಧರಿಸಬೇಕು, ಹಾಗೂ ದೇಶದಲ್ಲಿ ಮುಳುಗಡೆಯಾಗಿರುವ ಇಡೀ ಪ್ರದೇಶವನ್ನು ಕೃಷಿ ಯೋಗ್ಯವನ್ನಾಗಿ ಮಾಡುವಂಥ ವಾಸ್ತವಿಕ ಗುರಿಹಾಕಿ ಕೊಳ್ಳಬೇಕು. ಅಂಥ ಪ್ರದೇಶ ಮೂರು ಕೋಟಿ ಎಕರೆಗಳಾಗಿರಬಹುದು. ಅಥವಾ ನಾಲ್ಕು ಕೋಟಿ ಎಕರೆಗಳಾಗಿರಬಹುದು. ಈ ಉದ್ದೇಶವನ್ನು ಈಡೇರಿಸುವುದಕ್ಕೆ ದೃಢ ನಿರ್ಧಾರದಿಂದ ಪ್ರಯತ್ನಿಸಬೇಕು.

ಇನ್ನು ಶಿಕ್ಷಣ ಕ್ಷೇತ್ರ. ಶಿಕ್ಷಣ ಕ್ಷೇತ್ರದಲ್ಲಿ ತೀವ್ರ ಸುಧಾರಣೆಗಳನ್ನು ತರಲು ಸಾಧ್ಯವಿದೆ. ಗುರಿ ಇರಬೇಕು. ಆದರೆ, ಶಿಕ್ಷಣದ ಅನೇಕ ಮುಖಗಳ ಪೈಕಿ ಒಂದನ್ನು ಆಯ್ದು ಅದನ್ನು ಸಾಧಿಸುವ ಪ್ರಯತ್ನ ಮಾಡಬೇಕು. ಉದಾಹರಣೆಗೆ ಸಾಕ್ಷರತೆ. ದೇಶಾದ್ಯಂತ ಸಂಪೂರ್ಣ ಸಾಕ್ಷರತೆಯನ್ನು ಸಾಧಿಸಲಾಗುತ್ತದೆಂಬುದನ್ನು ಮತ್ತು ಪ್ರತಿಯೊಬ್ಬರೂ ಅಕ್ಷರ ಜ್ಞಾನ ಉಳ್ಳದವರಾಗುತ್ತಾರೆಂಬುದನ್ನು ಖಚಿತಪಡಿಸಿಕೊಳ್ಳಿ, ಹೀಗೆ ಸಾಕ್ಷರತೆಯ ಗುರಿಯನ್ನು ಸಾಧಿಸಿ.

ಇದೇ ರೀತಿಯಲ್ಲಿ ಆರೋಗ್ಯಕ್ಕೆ ಆದ್ಯತೆಯನ್ನು ನಾವು ಕೊಡಬಹುದು. ಆ ಕ್ಷೇತ್ರದಲ್ಲಿ ಒಟ್ಟಾರೆ ಸುಧಾರಣೆಯನ್ನು ಸಾಧಿಸಿ, ದೇಶದಾದ್ಯಂತ ಪ್ರತಿಯೊಂದು ಹಳ್ಳಿಗೆ ಮತ್ತು ಪ್ರತಿಯೊಂದು ನಗರಕ್ಕೆ ಕುಡಿಯುವ ನೀರಿನ ನಲ್ಲಿಗಳನ್ನು ಒದಗಿಸುತ್ತೇವೆ ಎಂಬ ಒಂದು ಅಂಶಕ್ಕೆ ಆದ್ಯತೆ ನೀಡಿ.

ಹೀಗೆ ಯಾವುದೇ ಕ್ಷೇತ್ರದಲ್ಲಿ ಒಟ್ಟಾರೆಯಾಗಿ ಸುಧಾರಣೆಯನ್ನು ತರುವುದರ ಜೊತೆಗೆ ಒಂದು ಅಂಶಕ್ಕೆ ಆದ್ಯತೆ ನೀಡಿ ಅದರ ಮೇಲೆ ಗಮನವನ್ನು ಕೇಂದ್ರೀಕರಿಸಿ ಅದನ್ನು ಸಾಧಿಸಲು ಪ್ರಯತ್ನಿಸಿ ಎಂಬ ವಿಷಯವನ್ನು ನಾನು ಒತ್ತಿ ಹೇಳುತ್ತಿದ್ದೇನೆ.

ಈ ಯೋಜನೆಯಲ್ಲಿ ಆದಾಯಕ್ಕಿಂತ ವೆಚ್ಚ ಹೆಚ್ಚಾಗಿದೆ. ಬಹುತೇಕ ಎಲ್ಲ ಇಲಾಖೆಗಳಲ್ಲೂ ಇದೇ ಪರಿಸ್ಥಿತಿ ಇರುವುದನ್ನು ನಾನು ನೋಡಿದ್ದೇನೆ. ಸದ್ಯದಲ್ಲಿ ನಾನು ಕೈಗಾರಿಕೆ ಮತ್ತು ಗಣಿಗಳನ್ನಷ್ಟೇ ಪರಿಶೀಲಿಸುತ್ತೇನೆ. 1960 - 61 ರಲ್ಲಿ 450 ಕೋಟಿ ರೂಪಾಯಿಗಳನ್ನು ನಿರ್ಮಾಣ ಕಾರ್ಯಗಳಿಗಾಗಿ ಖರ್ಚು ಮಾಡಲಾಗುತ್ತದೆಂದು ಸೂಚನೆ ನೀಡಲಾಯಿತು. ಆದರೆ ಅದು 690 ಕೋಟಿ ರೂಪಾಯಿಗಳಿಗೆ ಏರಿತು ಎಂದರೆ ಮೊದಲಿನದಕ್ಕಿಂತ ಒಂದೂಮುಕ್ಕಾಲು ಪಟ್ಟು ಜಾಸ್ತಿ . ಹೀಗೆ, ಇಡೀ ಯೋಜನಾ ವಧಿಯಲ್ಲಿ ಇದು 1800 ಕೋಟಿ ರೂಪಾಯಿಗಳಿಂದ 2300 ಕೋಟಿ ರೂಪಾಯಿಗಳಿಗೆ ಏರುತ್ತದೆ. ಆದ್ದರಿಂದ, ಕೈಗಾರಿಕೆ ಮತ್ತು ಗಣಿಗಳಬಾಬಿನಲ್ಲೇ ವೆಚ್ಚ 500 ಕೋಟಿ ರುಪಾಯಿಗಳಷ್ಟು ಹೆಚ್ಚಾಯಿತು. ಏಕೆ ಹೀಗೆ ಏರಿತು ? ಹೇಗೆ ಜಾಸ್ತಿಯಾಯಿತೆಂಬುದನ್ನು ನಾನು ವಿವರಿಸುತ್ತೇನೆ. ಬರೌನಿಯಲ್ಲಿ ತೈಲ ಸಂಸ್ಕರಣ ಸ್ಥಾವರವೊಂದನ್ನು ಸ್ಥಾಪಿಸಬೇಕಿತ್ತು. ಈ ಉದ್ದೇಶಕ್ಕಾಗಿ ಅರ್ಜಿಸಲಾದ ಭೂಮಿ ಎಷ್ಟು ಕೆಳಮಟ್ಟದಲ್ಲಿತ್ತೆಂದರೆ, ಮಳೆ ನೀರೆಲ್ಲ ಅಲ್ಲಿ ಸಂಗ್ರಹವಾಗುತ್ತಿತ್ತು. ಭೂಮಿಯನ್ನು ತುಂಬಿ ಸಮಮಟ್ಟಕ್ಕೆ ತರಲು ಕೋಟ್ಯಾಂತರ ರೂಪಾಯಿಗಳನ್ನು ಖರ್ಚು ಮಾಡಲಾಯಿತು.

ಟ್ರಾಂಬೆ ಪ್ರಕರಣವನ್ನೇ ತೆಗೆದುಕೊಳ್ಳೋಣ. ತೈಲ ಸಂಸ್ಕರಣ ಸ್ಥಾವರದಿಂದ ಅನಿಲ ಸುಲಭವಾಗಿ ದೊರೆಯುತ್ತದೆಂಬ ದೃಷ್ಟಿಯಿಂದ ಅಲ್ಲಿ ಒಂದು ರಾಸಾಯನಿಕ ಗೊಬ್ಬರದ ಕಾರ್ಖಾನೆಯನ್ನು ಸ್ಥಾಪಿಸಬೇಕಾಯಿತು. ಆದರೆ, ಅಲ್ಲಿ ಭೂಮಿಗಾಗಿ ಅತಿ ಹೆಚ್ಚು ಬೆಲೆಯನ್ನು ತರಬೇಕಾಯಿತು. ಭೂಮಿ ಕಡಿಮೆ ಬೆಲೆಗೆ ಸಿಗಬಹುದಾದಂಥ ಸ್ಥಳದಲ್ಲಿ ಕಾರ್ಖಾನೆಯನ್ನು ಸ್ಥಾಪಿಸಿದಿದ್ದರೆ ಕಾರ್ಖಾನೆಯ ತನಕ ಕೊಳವೆಗಳ ಮೂಲಕ ಅನಿಲವನ್ನು ಸರಬರಾಜು ಮಾಡಬಹುದಿತ್ತು. ಆದರೆ ಈ ಅಂಶವನ್ನು ಪರಿಶೀಲಿಸಲಿಲ್ಲ. ಏಕೆಂದರೆ ಹಣ ಸರ್ಕಾರದ್ದು ಸರ್ಕಾರದ ಹಣವನ್ನು ಅಜಾಗರೂಕತೆಯಿಂದ ಹಾಗೂ ವಿವೇಚನೆಯಿಲ್ಲದೆ ಬಳಸಲಾಗುತ್ತಿದೆ.

ಈಗ, ವರಮಾನದ ವಿಷಯಕ್ಕೆ ಬರುತ್ತೇನೆ. ಈ ಯೋಜನೆಯಲ್ಲಿ, ಸರ್ಕಾರಿ ವಲಯದ ಕೈಗಾರಿಕೆಗಳಿಂದ 450 ಕೋಟಿ ರೂಪಾಯಿಗಳ ಲಾಭ ಬರುತ್ತದೆಂದು ತೋರಿಸಲಾಗಿದೆ. ಸರ್ಕಾರಿ ವಲಯದ ಕೈಗಾರಿಕೆಗಳಲ್ಲಿ ತೊಡಗಿಸಿರುವ ಒಟ್ಟು ಹಣವನ್ನು ಅಂದಾಜು ಮಾಡಲು ನಾನು ಪ್ರಯತ್ನಿಸಿದೆ ಈ ಸರ್ಕಾರ ಅಧಿಕಾರಕ್ಕೆ ಬರುವುದಕ್ಕೂ ಮೊದಲು ಕೆಲವೊಂದು ಸಾರ್ವಜನಿಕ ವಲಯದ ಕೈಗಾರಿಕೆಗಳಿದ್ದವು. ಈ ಕೈಗಾರಿಕೆಗಳಲ್ಲಿ ಹೂಡಲಾದ ಹಣ ಎಷ್ಟು ಎಂದು ತಿಳಿಯಲು ಪ್ರಯತ್ನಿಸಿದೆ. ಅದು ತಿಳಿದರೆ, ಕೈಗಾರಿಕೆಗಳಲ್ಲಿ ತೊಡಗಿಸಿರುವ ಒಟ್ಟು ಮೊಬಲಗು, ಅವು ಗಳಿಸುವ ಲಾಭ ತಿಳಿಯಬಹುದಿತ್ತು. ಆದರೆ, ಅದು ಸಾಧ್ಯವಾಗಲಿಲ್ಲ. ಈ ವರದಿಯಲ್ಲಿ ಈ

ಮಾಹಿತಿಗಳಿವೆಯೋ ಇಲ್ಲವೋ ನನಗೆ ತಿಳಿಯದು. ಈ ಎಲ್ಲ ಮಾಹಿತಿಗಳು ಅದರಲ್ಲಿದ್ದರೂ ಅದನ್ನು ಹುಡುಕುವುದು ಸುಲಭದ ಕೆಲಸವಲ್ಲ? ಅದು ಕತ್ತಲಲ್ಲಿ ತಡಕಾಡಿದಂತೆ. ಇಲ್ಲಿ ಲಾಭವೆಂದು 450 ಕೋಟಿ ರೂಪಾಯಿಗಳನ್ನು ತೋರಿಸಲಾಗಿದೆ. ಇದನ್ನು ಸುಲಭವಾಗಿ 1000 ಕೋಟಿ ರೂಪಾಯಿಗಳಿಗೆ ಏರಿಸಬಹುದೆಂದು ನನಗನ್ನಿಸುತ್ತದೆ. ವೆಚ್ಚವನ್ನು 400 ರಿಂದ 500 ಕೋಟಿ ರೂಪಾಯಿಗಳಷ್ಟು ಕಡಿಮೆ ಮಾಡಬಹುದು. ಹಾಗೆ ಮಾಡಿದಲ್ಲಿ, 400 ರಿಂದ 500 ಕೋಟಿ ರೂಪಾಯಿಗಳಷ್ಟು ಲಾಭ ಹೆಚ್ಚುತ್ತದೆ. ಈ ರೀತಿ ಕೈಗಾರಿಕೆ ಮತ್ತು ಗಣಿ ವಲಯದಲ್ಲಿ ಹೆಚ್ಚು ಲಾಭ ಗಳಿಕೆ ಮತ್ತು ಉಳಿತಾಯಗಳ ರೂಪದಲ್ಲಿ 1000 ಕೋಟಿ ರೂಪಾಯಿಗಳಷ್ಟು ಮೌಲ್ಯದ ಸಂಪನ್ಮೂಲ ಸಂಗ್ರಹಣೆ ಈ ಯೋಜನೆಯಲ್ಲಿ ಸಾಧ್ಯ.

10,000 ಕೋಟಿ ರೂಪಾಯಿಗಳ ವೆಚ್ಚವನ್ನು ಒಳಗೊಂಡಿರುವ ಒಟ್ಟು ಯೋಜನೆಯ ಬಗ್ಗೆ ಹೇಳುವುದಾದರೆ, ನಿಖರವಾಗಿ ಅಲ್ಲದಿದ್ದರೂ ಸುಮಾರು 3000 ದಿಂದ 4000 ಕೋಟಿ ರೂಪಾಯಿಗಳವರೆಗೆ ವ್ಯರ್ಥವಾಗಿ ಹಾಗೂ ಅನುಚಿತವಾಗಿ ವೆಚ್ಚವಾಗುತ್ತದೆ. ವ್ಯರ್ಥವಾಗಿ ವೆಚ್ಚವಾಗುವುದು ಎಂದರೆ, ಬರೌನಿ ತೈಲ ಸಂಸ್ಕರಣ ಸ್ಥಾವರಕ್ಕೆ ಸಂಬಂಧಿಸಿದಂತೆ ನಾನು ಹೇಳಿದ ರೀತಿಯಲ್ಲಿ ವೆಚ್ಚವಾಗುವುದು ಮತ್ತು ದುಂದು ವೆಚ್ಚ ಎಂದರೆ ವೈಭವಯುತವಾದ ಹಾಗೂ ಆಡಂಬರವಾದ ಜೀವನ ನಡೆಸುವುದಕ್ಕೆ ಹಾಗೂ ಯೂರೋಪಿಯನ್ನರ ಜೀವನ ರೀತಿಯನ್ನು ಅನುಕರಿಸುವುದರಿಂದ ಆಗುವವೆಚ್ಚ.

ಈ ಯೋಜನೆಗೆ ಸರ್ಕಾರ ಪ್ರತಿ ವರ್ಷ ಮಾಡುತ್ತಿರುವ ವೆಚ್ಚ 10,000 ಕೋಟಿ ರೂಪಾಯಿಗಳು. 5 ವರ್ಷಗಳಿಗೆ ಆಗುವ ವೆಚ್ಚ 25,000 ಕೋಟಿ ರೂಪಾಯಿಗಳು. 25,000 ಕೋಟಿ ರೂಪಾಯಿಗಳಿಲ್ಲಿ ಸುಮಾರು 10,000 ಕೋಟಿ ರುಪಾಯಿಗಳು ವ್ಯರ್ಥವಾಗಿ ಅನುಚಿತವಾಗಿ ವೆಚ್ಚವಾಗುತ್ತದೆ. ಆದ್ದರಿಂದ, ನಾವು ಇನ್ನೂ ವಿಸ್ತೃತ ದೃಷ್ಟಿಕೋನವನ್ನು ಹೊಂದಿರಬೇಕು ಮತ್ತು ಕ್ಷುಲ್ಲಕ ವಿಷಯಗಳಿಗೆ ಗಮನ ಕೊಡಬಾರದು. ಕೆಲವೊಂದು ಅಪ್ರಮುಖ ಕ್ಷೇತ್ರಗಳಲ್ಲಿ ನಾವು ಸ್ವಲ್ಪ ಉಳಿತಾಯ ಮಾಡಿದರೂ ಆದರಿಂದ ಯಾವುದೇ ಪ್ರಯೋಜನವಾಗುವುದಿಲ್ಲ. ಗಣನೀಯ ಪ್ರಮಾಣದಲ್ಲಿ ಉಳಿತಾಯ ಮಾಡುವ ಕ್ಷೇತ್ರಗಳಿಗೆ ಹೆಚ್ಚಿನ ಗಮನ ಕೊಡಬೇಕು.

ಇಲ್ಲಿರುವ ಇತರ ಮಹನೀಯರಿಗೆ ನಾನು ಏನನ್ನೂ ಹೇಳಬಯಸುವುದಿಲ್ಲ. ಆದರೆ ಸಾಮಾನ್ಯವಾಗಿ ಇಲ್ಲಿ ಹಾಜರಿರದ ತಮ್ಮ ನಾಯಕನಿಗೆ ನಾನು ಹೇಳುವುದನ್ನು ತಲುಪಿಸಲಿ ಎಂದು ಆಶಿಸುತ್ತೇನೆ. ಭಾರತೀಯರ ಸರಾಸರಿ ಜೀವಿತ ವಯಸ್ಸು 40 ಅಥವಾ 42 ವರ್ಷಗಳಿಗೆ ಏರಿದೆ ಎಂದು ಅವರು ಹೆಮ್ಮೆ ಪಡುತ್ತಾರೆ. ಆದರೆ, ನನ್ನ

ಅಭಿಪ್ರಾಯದಲ್ಲಿ ಇಂತಹ ವಿವರಗಳು ಸಾಮಾನ್ಯವಾಗಿ ತಪ್ಪಾಗಿರುತ್ತವೆ. ಏಕೆಂದರೆ ಶಿಶು ಮರಣ ಪ್ರಮಾಣದಲ್ಲಿ ಬದಲಾವಣೆಯಾಗಿದೆ ಮತ್ತು ಅದರ ಪರಿಣಾಮವಾಗಿ ಸರಾಸರಿ ವಯಸ್ಸು ಹೆಚ್ಚಾಗಿದೆ. ಇದರ ಅರ್ಥ ಮಾಳವೀಯಜೀಯವರೆಂತೆ ಜನತೆಯ ಜೀವಿತಾವಧಿ ಹೆಚ್ಚಾಗಿದೆ ಎಂದಲ್ಲ.

ಅದೇ ರೀತಿ ಸೈಕಲ್ಲುಗಳು ಅಥವಾ ರೇಡಿಯೋಗಳು ಬಗ್ಗೆ ಕೂಡ ಈ ಸದನದಲ್ಲಿ ಪ್ರಸ್ತಾಪಿಸಲಾಗಿದೆ. ಯಾವುದೇ ಒಂದು ಯೋಜನೆಯನ್ನು ರೂಪಿಸಬೇಕಾದರೆ ನಾವು ಮೂರು ದೃಷ್ಟಿಕೋನಗಳನ್ನು ಹೊಂದಿರಬೇಕು. ಮೊದಲನೆಯದಾಗಿ ನಮ್ಮ ಹಿಂದಿನ ಕಾರ್ಯ ನಿರ್ವಹಣೆಗೆ ಹೋಲಿಸಿದರೆ ಈಗ ನಾವು ಸಾಧಿಸಿರುವಾ ಪ್ರಗತಿ ಏನು ? ಎರಡನೆಯದಾಗಿ ನಮ್ಮ ನೆರೆ ರಾಷ್ಟ್ರಗಳು ಮತ್ತು ಇತರ ರಾಷ್ಟ್ರಗಳಿಗೆ ಹೋಲಿಸಿದಾಗ ನಾವು ಸಾಧಿಸಿರುವ ಪ್ರಗತಿ ಏನು? ಮತ್ತು ಮೂರನೆಯದಾಗಿ ನಮ್ಮ ಅಶೋತ್ತರಗಳೇನು?

ಬೈಸಿಕಲ್ಲು ಅಥವಾ ರೇಡಿಯೋವನ್ನು ಪ್ರಸ್ತಾಪಿಸುವ ವ್ಯಕ್ತಿಗಳಿಗೆ ನಾನು ಒಂದು ವಿಷಯವನ್ನು ಹೇಳಲಿಚ್ಛಿಸುತ್ತೇನೆ. ಭಾರತ, ತನ್ನ ಹಿಂದಿನ ದಿನಗಳಿಗೆ ಹೋಲಿಸಿದರೆ ಸ್ವಲ್ಪವಾದರೂ ಪ್ರಗತಿಯನ್ನು ಸಾಧಿಸಿದೆ. ಆದರೆ ನಮ್ಮ ನೆರೆ ರಾಷ್ಟ್ರಗಳಿಗೆ ಮತ್ತು ವಿಶ್ವದ ಇತರೆ ರಾಷ್ಟ್ರಗಳಿಗೆ ಹೋಲಿಸಿದರೆ ಕಳೆದ 15 ವರ್ಷಗಳಲ್ಲಿ ನಾವು ಯಾವುದೆ ಪ್ರಗತಿಯನ್ನು ಸಾಧಿಸಿಲ್ಲ ಎಂದು ಹೇಳಬಹುದು. ಕಳೆದ 15 ವರ್ಷಗಳ್ಲಿ ಚೈನಾ ದೇಶ ಸಾಕಷ್ಟು ಪ್ರಗತಿ ಸಾಧಿಸಿದೆ. ಆದರೆ ನಾವು ಹಿಂದೆಯೇ ಉಳಿದಿದ್ದೇವೆ. ಚೈನಾ ದೇಶ ಅತಿ ದೊಡ್ಡ ರಾಷ್ಟ್ರ ಎಂಬ ಕಾರಣಕ್ಕೆ ಅದರೊಡನೆ ಹೋಲಿಸುವುದನ್ನು ಬಿಟ್ಟರೂ ಸಣ್ಣ ರಾಷ್ಟ್ರವಾದ ಘಾನಾ ಕೂಡ ಸಾಕಷ್ಟು ಪ್ರಗತಿಯನ್ನು ಸಾಧಿಸಿದೆ. ನಾವು ಸಹ, ನಮಗಿಂತ ಹಿಂದುಳಿದಿರುವ ದೇಶಕ್ಕೆ ಹೋಲಿಸಿದರೆ ಸ್ವಲ್ಪ ಮಟ್ಟಿಗಿನ ಪ್ರಗತಿಯನ್ನು ಸಾಧಿಸಿದ್ದೇವೆ ಎಂದು ಹೇಳಬಹುದು. ಆದರಿಂದಲೇ ನಾನು ಹೇಳುವುದು ನಮ್ಮ ದೃಷ್ಟಿಕೋನವನ್ನು ವಿಸ್ತೃತಗೊಳಿಸಬೇಕೆಂದು

ನಾನು ಈ ಸದನದ ಮುಂದೆ ಒಂದು ವಿಸ್ತೃತ ದೃಷ್ಟಿಕೋನವನ್ನು ಮಂಡಿಸಲು ಇಚ್ಛಿಸುತ್ತೇನೆ. ಈ ದೇಶದಲ್ಲಿ 27 ಕೋಟಿ ಜನರು ದಿನಕ್ಕೆ ಕೇವಲ 3 ಆಣೆಗಳ ವೆಚ್ಚದಲ್ಲಿ ಜೀವಿಸುತ್ತಿದ್ದಾರೆ. ಇದರ ಬಗ್ಗೆ ಚರ್ಚೆ ಮಾಡುವುದಕ್ಕೆ ಆಸ್ಪದವೇ ಇಲ್ಲ. ನಂದಾಜಿಯವರು ಈ ಹಿಂದೆ ಆಕ್ರೋಶದಿಂದ ಮಾತನಾಡಿದ್ದರು. ಮತ್ತು ಇಂದೂ ಸಹ ಅದೇ ಆಕ್ರೋಶದಿಂದ ಅವರು ಮಾತನಾಡುವುದನ್ನು ಕೇಳಿದ್ದೇವೆ. ಆದರೆ ಅವರು ಮಾಡಿದ ಒಂದೇ ತಪ್ಪು ಎಂದರೆ ಕೃಷಿಯೇತರ ಕಸುಬುಗಳಿಂದ ಬರುವ ಆದಾಯವನ್ನು ಅವರು ಎರಡು ಬಾರಿ ಲೆಕ್ಕ ಹಾಕಿರುವುದು. ಅದರ ಪ್ರಕಾರ ಈ ವ್ಯತ್ಯಾಸ 1500 ಕೋಟಿ

ರೂಪಾಯಿಗಳು. ಆದರೆ ಆ ಬಗೆಗಿನ ವಿವರಗಳನ್ನು ನಾನು ಪರಿಶೀಲಿಸುವುದಿಲ್ಲ. ಈ ದೇಶದ 27 ಕೋಟಿ ಜನತೆ ದಿನಕ್ಕೆ 3 ಆಣೆಗಳ ಆಧಾರದಿಂದ ಬದುಕುತ್ತಿದ್ದಾರೆ. ಸರ್ಕಾರದ ನಿಜವಾದ ಮುಖವನ್ನು ಹಾಗೂ ಭಾರತದ ಜನತೆಯ ಸ್ಥಿತಿಗತಿಗಳ ನೈಜ ಚಿತ್ರವನ್ನು ನಿಮ್ಮ ಮುಂದೆ ಇಡುವುದು ನನ್ನ ಆಶಯ. ಆದರೆ ಇದೆಷ್ಟೇ ನನ್ನ ಉದ್ದೇಶ ಅಲ್ಲ. ಸಮಸ್ಯೆಯ ಜೊತೆಯಲ್ಲಿಯೇ ಪರಿಹಾರವನ್ನು ಸೂಚಿಸಬೇಕೆಂಬುದು ನನ್ನ ಆಸೆ. ಈ ದೇಶದ 27 ಕೋಟಿ ಜನತೆ ದಿನವೊಂದಕ್ಕೆ 3 ಆಣೆಗಳ ಸರಾಸರಿ ವರಮಾನದಲ್ಲಿ ತೃಪ್ತಿಪಡಬೇಕಾಗಿದೆ. ಮತ್ತು ಉಳಿದ 16 ಕೋಟಿ ಜನರು ಸರಾಸರಿ ತಲಾ ಒಂದು ರೂಪಾಯಿ ವರಮಾನದಿಂದ ತೃಪ್ತಿ ಪಡಬೇಕಾಗಿದೆ. ಆದರೆ ಇದಕ್ಕೆ ಪ್ರತಿಯಾಗಿ ಈ ದೇಶದಲ್ಲಿ ಸುಮಾರು 50 ಲಕ್ಷ ಜನರಲ್ಲಿ ಒಬ್ಬರು ದಿನಕ್ಕೆ ಸರಾಸರಿ 33 ರೂಪಾಯಿಗಳಷ್ಟು ವೆಚ್ಚ ಮಾಡುತ್ತಿದ್ದಾರೆ. ನಮ್ಮ ಸಮಾಜ ಇಂತಹ ವ್ಯಾಧಿಯಿಂದ ಬಳಲುತ್ತಿರಬೇಕಾದರೆ ಯಾವುದಾದರೊಂದು ಪರಿಹಾರವನ್ನು ಕಂಡು ಹಿಡಿಯಬೇಕಾಗಿರುವುದು ಅತ್ಯಗತ್ಯವಾಗಿದೆ. ಆದರೆ, ದಿನಕ್ಕೆ 33 ರೂಪಾಯಿಗಳನ್ನು ವೆಚ್ಚ ಮಾಡುತ್ತಿರುವ ಜನರನ್ನು ದಿನಕ್ಕೆ 3 ಆಣೆಗಳನ್ನು ವೆಚ್ಚ ಮಾಡುತ್ತಿರುವ ಮಟ್ಟಕ್ಕೆ ತರಬೇಕೆಂಬುದು ನನ್ನ ಅರ್ಥವಲ್ಲ. ಆದರೆ , ಅವರನ್ನು ದಿನಕ್ಕೆ 15 ಅಥವಾ 16 ರೂಪಾಯಿಗಳ ಮಟ್ಟಕ್ಕೆ ತಂದರೆ, ಸರ್ಕಾರದ ತೆರಿಗೆಗಳಿಗೆ ಸಂಬಂಧಪಟ್ಟಂತೆ ಇರುವ ಅಂಕಿಅಂಶಗಳ ಪ್ರಕಾರ 2500 ಕೋಟಿ ಅಥವಾ 1500 ಕೋಟಿ ರೂಪಾಯಿಗಳಷ್ಟು ಮೊಬಲಗನ್ನು ಸುಲಭವಾಗಿ ಉಳಿಸಬಹುದು. ಹೀಗೆ ಯೋಜನೆಯ ಇಡೀ ಅವಧಿಯಲ್ಲಿ 7500 ಅಥವಾ 10,000 ಕೋಟಿ ರೂಪಾಯಿಗಳಷ್ಟನ್ನು ಉಳಿಸಬಹುದೆಂದು ಅಂದಾಜು ಮಾಡಬಹುದು. ಇದರಿಂದ ಪಂಚವಾರ್ಷಿಕ ಯೋಜನೆಯನ್ನು ಸುಗಮವಾಗಿ ಮುನ್ನಡೆಸುವುದು ಸಾಧ್ಯವಾಗುತ್ತದೆ.

ಈ ಹಿಂದೆಯೂ ನಾನು ಸಮಾಜವನ್ನು ಆವರಿಸಿರುವ ಈ ವ್ಯಾಧಿಯ ಬಗ್ಗೆ ಹಾಗೂ ಸಂಭಾವ್ಯ ಪರಿಹಾರದ ಬಗ್ಗೆ ಈ ಸದನದ ಮುಂದೆ ಹೇಳಿದ್ದೆ. ಈಗ ಮತ್ತೊಮ್ಮೆ ಅದನ್ನು ಒತ್ತಿ ಹೇಳುತ್ತೇನೆ. ಸರಿಪಡಿಸುವ ಕ್ರಮಗಳನ್ನು ಕೈಗೊಂಡ ಹೊರತು ಈ ಸಮಸ್ಯೆನ್ನು ಪರಿಹರಿಸುವುದು ಸಾಧ್ಯವಿಲ್ಲ. ಅಮೆರಿಕ, ರಷ್ಯಾ ಮತ್ತು ಇತರ ಯೂರೋಪ್ ದೇಶಗಳಂಥ ಶ್ರೀಮಂತ ದೇಶಗಳಲ್ಲಿ ಅನುಸರಿಸುತ್ತಿರುವಂಥ ಅಭಿವೃದ್ಧಿ ಯೋಜನೆಯ ಮಾದರಿಯನ್ನು ನಾವು ಭಾರತದಲ್ಲಿ ಅಳವಡಿಸಿಕೊಂಡಿದ್ದೇವೆ. ನಮ್ಮ ದಲ್ಲದ ಈ ಮಾದರಿಯನ್ನು ನಾವು ಬದಲಾಯಿಸದ ಹೊರತು ನಮ್ಮ ಯೋಜನೆಗಳಲ್ಲಿ ಹಾಕಿಕೊಂಡಿರುವ ಧ್ಯೇಯೋದ್ದೇಶಗಳನ್ನು ಸಾಧಿಸುವುದು ಸಾಧ್ಯವಿಲ್ಲ. ಇದು ಸರ್ಕಾರಿ ಯೋಜನೆ ಹಾಗೂ ಸರ್ಕಾರಿ ಉದ್ಯಮಗಳನ್ನು ಹಾಗೂ ಖಾಸಗಿ ಉದ್ಯಮಗಳನ್ನು ಒಂದೇ ರೀತಿಯಲ್ಲಿ ನಡೆಸಲಾಗುತ್ತಿರುವುದರಿಂದ ಮತ್ತು ಸರ್ಕಾರಿ ಉದ್ಯಮ ಹಾಗೂ ಶ್ರೀಮಂತ ಬಂಡವಾಳಗಾರರು ಒಡೆತನ ಹೊಂದಿರುವ ಖಾಸಗಿ ಉದ್ಯಮಗಳು ಸಂಪೂರ್ಣ ಬೇರೆ

ಬೇರೆ ಎಂದು ಹೇಳಿದರೆ ಏನೇನೂ ಸಾಧಿಸಿದಂತೆ ಆಗುವುದಿಲ್ಲ. ಏಕೆಂದರೆ ಅವುಗಳ ಧ್ಯೇಯೋದ್ದೇಶಗಳು ಮತ್ತು ಅವು ಕಾರ್ಯ ನಿರ್ವಹಿಸುತ್ತಿರುವ ರೀತಿ ಒಂದೇ ಆಗಿದೆ. ಅವುಗಳ ಕಾರ್ಯ ನಿರ್ವಹಣಾಧಿಕಾರಿಗಳ ವೇತನ ಮತ್ತು ಭತ್ಯೆಗಳು ಹಾಗೂ ಅವುಗಳ ವ್ಯವಸ್ಥಾಪಕರು ನಡೆಸುತ್ತಿರುವ ಜೀವನ ಮಟ್ಟ ಸಹ ಒಂದೇ ಆಗಿದೆ. ಹೀಗೆ ಅವೆರಡರ ನಡುವೆ ಲಕ್ಷ್ಮಣ ರೇಖೆ ಎಳೆಯುವುದರಲ್ಲಿ ಯಾವುದೇ ಅರ್ಥವಿಲ್ಲ. ಆದರೆ, ಇವೆರಡನ್ನೂ ಪ್ರತ್ಯೇಕಿಸುವುದೂ ಅಗತ್ಯ ಮತ್ತು ದಿನಕ್ಕೆ 33 ರೂಪಾಯಿಗಳನ್ನು ವೆಚ್ಚ ಮಾಡುವ ಜನರನ್ನು ದಿನಕ್ಕೆ 15 ರಿಂದ 16 ರೂಪಾಯಿಗಳನ್ನು ವೆಚ್ಚ ಮಾಡುವ ಮಟ್ಟಕ್ಕೆ ತರಬೇಕಾಗಿದೆ ಎಂಬ ಅಂಶವನ್ನು ಅರ್ಥ ಮಾಡಿಕೊಂಡಾಗ ಮಾತ್ರ ಇವೆರಡರ ನಡುವೆ ಮೂಲಭೂತ ಪ್ರತ್ಯೇಕತೆಯನ್ನು ತರಬಹುದು. ಇದರ ಬಗ್ಗೆ ನಾನು ಹೆಚ್ಚೇನನ್ನೂ ಹೇಳಲಾರೆ. ಏಕೆಂದರೆ ಈ ಬಗ್ಗೆ ಮಾಡುವ ಯಾವುದೇ ಹೆಚ್ಚಿನ ಟೀಕೆಗಳು ಅವರನ್ನು ಭಯಗ್ರಸ್ಥರನ್ನಾಗಿಸುತ್ತವೆ. ಆದರೂ ಈ ದೇಶದಲ್ಲಿ ಬಡ ಜನತೆ ದಾಟಿ ಬರಬೇಕಾದ ಹಂತಗಳಬಗ್ಗೆ ನಾನು ಪ್ರಸ್ತಾಪಿಸಲು ಇಚ್ಚಿಸುತ್ತೇನೆ. ಈ ದೇಶದಲ್ಲಿ ಬಡವರು ಹಾಗೂ ಶ್ರೀಮಂತರು ದಾಟಬೇಕಾದ ಬಡತನ ಹಾಗೂ ಶ್ರೀಮಂತಿಕೆಯ ಅನೇಕ ಹಂತಗಳು ಇವೆ. ಈ ಹಂತಗಳು ಕೇವಲ ಒಂದು ಎರಡು ಅಲ್ಲ, ಲಕ್ಷಾಂತರ ಹಂತಗಳಿವೆ. ಲಕ್ಷಾಂತರ ಅಲ್ಲದಿದ್ದರೆ ಸಾವಿರಾರು. ಈ ಹಂತಗಳು ಎರಡು ಅಥವಾ ಮೂರು ಆಗಿದ್ದಿದ್ದರೆ ಈ ಹೊತ್ತಿಗೆ ಸಮಸ್ಯೆ ಪರಿಹಾರ ಆಗಿಬಿಡುತ್ತಿತ್ತು. ಆದರೆ, ಬಡವರು ಹಾಗೂ ಶ್ರೀಮಂತರ ನಡುವಿನ ಅಂತರದ ಹಂತಗಳು ಅನೇಕ ಇರುವುದರಿಂದ ವ್ಯವಸ್ಥೆಯನ್ನು ಸುಧಾರಿಸುವುದು ಕಷ್ಟ. ನಮ್ಮ ವ್ಯವಸ್ಥೆಯಲ್ಲಿ ಇರುವ ಮೂಲಭೂತ ನ್ಯೂನತೆಗಳೇ ನಮ್ಮ ಯೋಜನೆಗಳಲ್ಲೂ ಸಹ ಪ್ರತಿಬಿಂಬಿತವಾಗಿದೆ. ಮುಲಭೂತ ನ್ಯೂನತೆ ಎಂದರೆ ನಮ್ಮ ಸಾಗುವಳಿ ವ್ಯವಸ್ಥೆ ಮತ್ತು ಕೃಷಿ ಉತ್ಪನ್ನಗಳು ಮಧ್ಯ ಯುಗದಷ್ಟು ಹಳೆಯದಾಗಿದೆ ಮತ್ತು ನಮ್ಮ ರೈತರು 1500 ವರ್ಷಗಳಷ್ಟು ಹಿಂದೆ ಬಳಸುತ್ತಿದ್ದಂಥ ಪರಿಕರಗಳನ್ನೇ ಇಂದಿಗೂ ಬಳಸಿ ಕೆಲಸ ಮಾಡುತ್ತಿದ್ದಾರೆ. ಟ್ರಾಕ್ಟರುಗಳು ಬಳಕೆ ಕೆಲವೇ ಸ್ಥಳಗಳಲ್ಲಿ ಬಂದಿರಬಹುದು. ಆದರೆ ಸುಮಾರು ಎಲ್ಲ ಕಡೆಗಳಲ್ಲೂ ನಮ್ಮ ರೈತರು ತೀರ ಹಳೆಯ ಪದ್ದತಿಯ ಕೃಷಿ ಪರಿಕರಗಳನ್ನೇ ಬಳಸುತ್ತಿದ್ದಾರೆ. ನಮ್ಮ ನೇಕಾರರು ಬಳಸುವ ಮಗ್ಗಗಳು ಸಹ 2000 ಅಥವಾ 1000 ವರ್ಷಗಳಷ್ಟು ಹಿಂದೆ ಬಳಸುತ್ತಿದ್ದವುಗಳಂಥವೇ ಆಗಿವೆ. ಅದರಲ್ಲಿ ಯಾವುದೆ ಬದಲಾವಣೆ ಆಗಿಲ್ಲ. ಕೆಲವು ಗಿರಣಿಗಳನ್ನು ಸ್ಥಾಪಿಸಿರಬಹುದು ಅಷ್ಟೇ. ಆದರೆ ಇವು ಉತ್ಪಾದನೆಯ ಮೂಲಭೂತ ಸೌಕರ್ಯಗಳಲ್ಲಿ ಯಾವುದೇ ಮೂಲಭೂತ ಬದಲಾವಣೆಗಳನ್ನು ತರಲಾರವು. ಏಕೆಂದರೆ ಈ ಮೂಲಭೂತ ಸೌಕರ್ಯಗಳು ಪುರಾತನ ಸ್ವರೂಪದಲ್ಲೇ ಉಳಿದಿವೆ. ಆದರೆ ನಮ್ಮ ಬಳಕೆಯ ರೀತಿಯಲ್ಲಿ ಮಾತ್ರ ಅಪಾರವಾದ ಬದಲಾವಣೆ ಆಗಿದೆ ಎಂದರೆ ಆಧುನಿಕತೆಯಿಂದ ಅತ್ಯಾಧುನಿಕತೆಗೆ ಬದಲಾಗಿದೆ. ನಮ್ಮ ಪುರಾತನ ಉತ್ಪಾದನಾ ವ್ಯವಸ್ಥೆಯು, ನಾವು ಪಾಶ್ಚಾತ್ಯ ದೇಶಗಳನ್ನು ಅನುಕರಿಸಿ ಅಳವಡಿಸಿಕೊಂಡಿರುವ ಈ

ಅತ್ಯಾಧುನಿಕ ಬಳಕೆಮಾದರಿಯ ಅಗತ್ಯಗಳನ್ನು ಪೂರೈಸಬಲ್ಲದೇ ಎಂಬುದು ಪ್ರಶ್ನೆ. ಇತ್ತೀಚೆಗೆ ಪ್ರಾರಂಭಿಸಲಾದ ಈ ಯೋಜನೆ, ಇಂತಹ ಪರಿಸ್ಥಿತಿ ಹೆಚ್ಚು ಕಾಲ ಮುಂದುವರಿಯಲಾರದು ಎಂಬುದನ್ನು ಸಂಶಯಾತೀತವಾಗಿ ರುಜುವಾತು ಪಡಿಸಿದೆ.

ಸರ್ಕಾರ ಹಾಗೂ ಇತರ ಅಧಿಕಾರಿಗಳು ಜನ ಸೇವೆ ಮಾಡಬೇಕು. ಆದರೆ, ಸರ್ಕಾರದ 5000 ಉನ್ನತ ಅಧಿಕಾರಿಗಳಿಗೆ ಸೌಲಭ್ಯಗಳನ್ನು ಒದಗಿಸುವುದಕ್ಕಾಗಿ ಸುಮಾರು ಒಂದು ಲಕ್ಷ ಜನ ಕೆಲಸ ಮಾಡುತ್ತಿದ್ದಾರೆ. ಸುಮಾರು ಒಂದು ಕೋಟಿ ಸರ್ಕಾರಿ ನೌಕರರು ಕೆಲಸ ಮಾಡುತ್ತಿದ್ದಾರೆಂದು ಅಂದಾಜು ಮಾಡಲಾಗಿದೆ. ಹೀಗೆ ನೌಕರರ ಒಂದು ದೊಡ್ಡ ಸೈನ್ಯವನ್ನೇ ಈ ಉನ್ನತ ಅಧಿಕಾರಿಗಳ ಸೇವೆಗಾಗಿ ಸರ್ಕಾರದ ವೆಚ್ಚದಲ್ಲಿ ಇಡಲಾಗಿದೆ. ಇದರಿಂದ ಅವರು ವೈಭವಯುತವಾಗಿ ಹಾಗೂ ಆಡಂಬರದ ಜೀವನ ನಡೆಸಬಹುದಾಗಿದೆ. ಇದು ಸರ್ಕಾರದ ಬೊಕ್ಕಸ ಮೇಲಿನ ಹೊರೆಯನ್ನು ಹೆಚ್ಚಿಸಿದೆ. ನಮ್ಮ ದೇಶದ ಆರ್ಥಿಕ ಅಭಿವೃದ್ಧಿಯೊಂದಿಗೆ ಎಲ್ಲವೂ ತಾನೇ ತಾನಾಗಿ ಸರಿಹೋಗುತ್ತದೆ ಎಂಬ ಅಭಿಪ್ರಾಯ ನಮ್ಮ ಯೋಜನಾಕರ್ತರಿಗಿದೆ. ಆದರೆ ಇದು ಅತ್ಯಂತ ತಪ್ಪು ಯೋಚನೆ. ಕಳೆದ 15 ವರ್ಷಗಳಲ್ಲಿ ನಮ್ಮ ದೇಶ ಎದುರಿಸುತ್ತಿರುವ ಯಾವುದೇ ಸಮಸ್ಯೆನ್ನು ಪರಿಹರಿಸುವಲ್ಲಿ ನಾವು ವಿಫಲರಾಗಿದ್ದೇವೆ.

ಇದರೊಂದಿಗೆ ಪ್ರತಿಯೊಂದು ಸಮಸ್ಯೆಗೂ ಸಹ ವಿಚಿತ್ರವಾಗಿ ಕೈಂಚಿ (ಎಂದರೆ ಕತ್ತರಿ) ಹಾಕಲಾಗುತ್ತದೆ. ನಾನು ಇದನ್ನು ಕಾಂಗ್ರೆಸ್ ಪಕ್ಷದ ಕೈಂಚಿ ಎಂದು ಕರೆಯುತ್ತೇನೆ. ದ್ವಿವಿಧ ನೀತಿಯನ್ನು ಹೊಂದಿರುವುದಕ್ಕೆ ಒಂದು ನಾಚಿಕೆಗೆಟ್ಟ ಉದಾಹರಣೆ ಎಂದರೆ ಹಿಂದಿನ ರಾಜ ಸಂಸ್ಥಾನಗಳ ರಾಜ ಮಹಾರಾಜರುಗಳಿಗೆ ರಾಜಧನವನ್ನು ಮಂಜೂರು ಮಾಡಿರುವುದು. ಕಾಂಗ್ರೆಸ್ ಪಕ್ಷವೇ ಅವರಿಗೆ ರಾಜಧನವನ್ನು ಮಂಜೂರು ಮಾಡಿರುವುದರ ಬಗ್ಗೆ ಆಕ್ರೋಶದಿಂದ ದೂಷಿಸಿದರೆ, ಅದೇ ಪಕ್ಷ ತಾನು ಅವರಿಗೆ ಕೊಟ್ಟ ಮಾತಿಗೆ ಬದ್ಧವಾಗಿದೆ ಎಂದು ಹೇಳುತ್ತಾ ಅದನ್ನು ರದ್ದು ಮಾಡಲು ತಾನು ಅಸಮರ್ಥವಾಗಿರುವುದಾಗಿ ತಿಳಿಸುತ್ತದೆ. ಒಂದೆಡೆ ರಾಜಧನವನ್ನು ದೂಷಿಸುತ್ತದೆ, ಇನ್ನೊಂದೆಡೆ ತಾನು ಕೊಟ್ಟ ಮಾತಿನಂತೆ ನಡೆಯಬೇಕಾಗಿದೆ ಎಂಬುದನ್ನು ಕಾಂಗ್ರೆಸ್ ಪಕ್ಷ ಒತ್ತಿ ಹೇಳುತ್ತದೆ. ಈ ಆಶ್ವಾಸನೆಯನ್ನು ಕೊಟ್ಟ ವ್ಯಕ್ತಿಗಳು ತಮ್ಮ ಸ್ಥಾನವನ್ನು ಬಿಡಬೇಕು ಎಂದು ನಾನು ಹೇಳುತ್ತೇನೆ. ಅವರು ರಾಜಧನವನ್ನು ರದ್ದು ಮಾಡುವ ಧೈರ್ಯ ಇರುವವರಿಗೆ ತಮ್ಮ ಸ್ಥಾನವನ್ನು ತೆರವು ಮಾಡಿಕೊಡಬೇಕು. ಅವರ ವಾದದಲ್ಲಿ ಯಾವುದೇ ವಿವೇಚನೆ ಇಲ್ಲ. ಸಮಸ್ಯೆ ಭಾಷೆಗೆ ಸಂಬಂಧಪಟ್ಟಿದ್ದುದೇ ಆಗಿರಲಿ ಸಂಪತ್ತಿಗೆ ಸಂಬಂಧಪಟ್ಟಿದ್ದುದೇ ಆಗಿರಲಿ ಬಹು ಪಾಲು ಎಲ್ಲ ಸಮಸ್ಯೆಗಳಿಗೂ ಕಾಂಗ್ರೆಸ್ ಪಕ್ಷ ಇದೇ ರೀತಿಯ ಕತ್ತರಿಯನ್ನು ಹಾಕುತ್ತದೆ.

ಹೀಗೆಯೇ ಅಖಿಲ ಭಾರತ ಸೇವೆಗಳಿಗೆ ಸೇರಿದ ವ್ಯಕ್ತಿಗಳು ಹಾಗೂ ಇತರ ಸರ್ಕಾರಿ ಸೇವೆಗಳಲ್ಲಿ ಇರುವ ವ್ಯಕ್ತಿಗಳ ಸೇವಾ ಷರತ್ತುಗಳ ಬಗ್ಗೆ ನಾನು ತಿಳಿಯಲು ಇಚ್ಚಿಸುತ್ತೇನೆ. ಏಕೆಂದರೆ ಗ್ರಾಮೀಣ ಪ್ರದೇಶಗಳಲ್ಲಿ ತಿಂಗಳಿಗೆ ಕೇವಲ ಐದು ರೂಪಾಯಿ ವೇತನ ಪಡೆದು 'ಚೌಕಿದಾರ' ನಾಗಿ ಕೆಲಸ ಮಾಡುತ್ತಿರುವ ವ್ಯಕ್ತಿಗಳು ಇದ್ದಾರೆ. ಈ ಬಗ್ಗೆ ನಾವು ತಿಳಿಯುವುದು ಅಗತ್ಯ. ಇಲ್ಲಿ ಸರ್ಕಾರವು ನೀಡುವ ಅತಿ ದೊಡ್ಡ ಮೊತ್ತದ ಸಂಬಳದ ಬಗ್ಗೆ ನಾನು ಮಾತನಾಡುವುದಿಲ್ಲ. ಏಕೆಂದರೆ ಅದು ಮತ್ತೆ ಅವರನ್ನು ಚುಚ್ಚುತ್ತದೆ.

ಈಗ ನಾನು, ಸರ್ಕಾರದ ಒಂದುಪ್ರಯತ್ನವಾದ ಮಥೊನ್ ಆಣೆಕಟ್ಟಿನ ಬಗ್ಗೆ ಪ್ರಸ್ತಾಪಿಸುತ್ತೇನೆ. ಈ ಯೋಜನೆಯಲ್ಲಿ ನಿಯೋಜಿತರಾದ ನೌಕರರ ಸಂಖ್ಯೆ ಸತತವಾಗಿ ಎರಡು ಕಾರಣಗಳಿಗಾಗಿ ಹೆಚ್ಚುತ್ತಲೇ ಹೋಯಿತು. ಮೊದಲನೆಯದಾಗಿ ತಮ್ಮ ತಮ್ಮ ನಾಡಿನ ಹೆಚ್ಚು ಹೆಚ್ಚು ಜನರಿಗೆ ಉದ್ಯೋಗವನ್ನು ಕೊಡುತ್ತೇವೆ ಎಂಬ ಬಗ್ಗೆ ಬಂಗಾಳಿಗಳು ಮತ್ತು ಬಿಹಾರಿಗಳ ನಡುವೆ ಏರ್ಪಟ್ಟ ಸ್ಪರ್ಧೆ. ಎರಡನೆಯದಾಗಿ ತಮ್ಮ ತಮ್ಮ ಜಾತಿಯ ಹೆಚ್ಚು ಹೆಚ್ಚು ಜನರನ್ನು ಸೇರಿಸಬೇಕೆಂದು ''ಕಾರ್ಯಸ್ಥ''ರು ಮತ್ತು ''ಬ್ರಾಹ್ಮಣ''ರ ನಡುವೆ ಏರ್ಪಟ್ಟ ಅದೇ ರೀತಿಯ ಮತ್ತೊಂದು ಸ್ಪರ್ಧೆ. ಇಲ್ಲಿ ನನಗೆ ಒಂದು ಘಟನೆ ನೆನಪಿಗೆ ಬರುತ್ತದೆ. ಕಾಮರಾಜ್ ಯೋಜನೆ ಪ್ರಕಾರ ಕೇಂದ್ರ ಸಚಿವ ಸಂಪುಟದಿಂದ ಮೊರಾರ್ಜಿ ದೇಸಾಯಿಯವರನ್ನು ಕೈಬಿಡುವುದಕ್ಕೆ ಮುಂಚೆ ನಾನು ಅನಗತ್ಯವಾಗಿ ಗಲಾಟೆ ಮಾಡುತ್ತೇನೆಂದು ಒಮ್ಮೆ ಅವರು ನನ್ನ ಬಳಿ ಹೇಳಿದ್ದರು. ನಿಜವಾದ ಸಮರ್ಥ ವ್ಯಕ್ತಿಗಳು ಸರ್ಕಾರದ ಸೇವೆಗಳಿಗೆ ಸೇರುವುದನ್ನು ಯಾವುದೂ ತಡೆಯಲಾರದು ಎಂದಿದ್ದರು. ಅವರು ಒಂದು ವೇಳೆ ಭಾರತದ ಪ್ರಧಾನಮಂತ್ರಿ ಆಗಿದ್ದಿದ್ದರೆ, ಅನಾವಿಲ ಬ್ರಾಹ್ಮಣರು ಎಂದು ಕರೆಯಲಾಗುವ ಅವರ ಜಾತಿಗೆ ಸೇರಿದ ವ್ಯಕ್ತಿಗಳನ್ನಷ್ಟೇ ಅವರು ಭಾರತದ ಅತ್ಯಂತ ಸಮರ್ಥ ವ್ಯಕ್ತಿಗಳೆಂದು ಪರಿಗಣಿಸುತ್ತಿದ್ದರು ಎಂಬುದನ್ನು ನಾನು ಅತ್ಯಂತ ನಮ್ರತೆಯಿಂದ ಹೇಳಬಯಸುತ್ತೇನೆ. ಅಧಿಕಾರದ ಸ್ಥಾನಕ್ಕೆ ಯಾರೇ ಬಂದರೂ ಅವರು ತಮ್ಮ ಜಾತಿಗೆ ಅಥವಾ ಪಂಗಡಕ್ಕೆ ಸೇರಿದ ವ್ಯಕ್ತಿಗಳನ್ನೇ ಅನೇಕ ಅಧಿಕಾರಗಳಲ್ಲಿ ಸ್ಥಾಪಿಸುವ ಕೆಲಸವನ್ನು ಮಾಡುತ್ತಾರೆ ಎಂಬುದು ನಮ್ಮ ದೇಶದ ದುರ್ದೈವ.

ಹಾಗೆಯೇ, ಯೋಜನೆಯ ಅಡಿಯಲ್ಲಿ ಆಡಂಬರಕ್ಕೆ ಮತ್ತು ಪ್ರದರ್ಶನಕ್ಕೆ ಪ್ರಾಮುಖ್ಯತೆಯನ್ನು ಕೊಟ್ಟಿರುವುದು ಒಂದು ದೊಡ್ಡ ನ್ಯೂನತೆ. ಆಡಂಬರ ಮತ್ತು ಪ್ರದರ್ಶನದ ಒಂದು ಉದಾಹರಣೆಯನ್ನು ಇಲ್ಲಿ ಹೇಳಬಯಸುತ್ತೇನೆ. ಇತ್ತೀಚೆಗೆ ಅಲಾಹಾಬಾದ್ ರೈಲ್ವೆ ನಿಲ್ದಾಣವನ್ನು ಒಂದು ಕೋಟಿ ರೂಪಾಯಿ ವೆಚ್ಚದಲ್ಲಿ ನವೀಕರಿಸಲಾಯಿತು. ಈ ಕ್ರಮವನ್ನು ಕೈಗೊಳ್ಳದಿದ್ದರೂ ಅದು ಇನ್ನೂ 50 ವರ್ಷಗಳಷ್ಟು

ಕಾಲ ಜನರಿಗೆ ಉಪಯುಕ್ತ ಸೇವೆಯನ್ನು ಸಲ್ಲಿಸಲು ಸಮರ್ಥವಾಗಿತ್ತು. ಆದರೆ ಅದನ್ನು ನವೀಕರಿಸುವ ಹೆಸರಿನಲ್ಲಿ ಪುನಃ ನಿರ್ಮಾಣ ಮಾಡಲಾಯಿತು. ಆದರ ಬದಲಿಗೆ 4 ರಿಂದ 5 ಕೋಟಿ ರೂಪಾಯಿಗಳು ವೆಚ್ಚದಲ್ಲಿ ಗಂಗಾ ಅಥವಾ ರಾಮಗಂಗಾ ನದಿಗಳಿಗೆ ಅಡ್ಡವಾಗಿ ಪಿತೋರಾಘರ್ ಎಂಬ ಸ್ಥಳಕ್ಕೆ ಸೇನೆಯ ಸರಬರಾಜುಗಳನ್ನು ಸಾಗಿಸುವ ಸ್ಥಳದಲ್ಲಿ, ಯಾವುದೇ ಸೌಲಭ್ಯವಿಲ್ಲದ ಮತ್ತು ಹಿಂದುಳಿದ ಪ್ರದೇಶಗಳಲ್ಲಿ ಚೈನಾದವರನ್ನು ಧೈರ್ಯವಾಗಿ ಎದುರಿಸುತ್ತಿರುವ ಸೈನಿಕರಿಗಾಗಿ ಒಂದು ಸೇತುವೆಯನ್ನು ಕಟ್ಟಿದ್ದರೆ ಈಗ ಪ್ರಯಾಣಕ್ಕೆ ಹಿಡಿಯುವ 10 ಗಂಟೆಗಳನ್ನು 3 ಗಂಟೆಗಳಿಗೆ ಇಳಿಸಬಹುದಾಗಿತ್ತು.

ಅಲ್ಲದೆ ಈ ಯೋಜನೆಯ ಮೌಲ್ಯವನ್ನು ನಿರ್ಧರಿಸಬೇಕಾದರೆ ದೆಹಲಿಗೆ ಸಂಬಂಧಿಸಿದಂತೆ ಇರುವ ಯೋಜನೆಯ ಭಾಗವನ್ನು ನೀವು ಓದಬೇಕು. ದೆಹಲಿಗೆ ಯೋಜನೆಯನ್ನು ಸಿದ್ಧಪಡಿಸುವುದಕ್ಕೆ ಸರ್ಕಾರಕ್ಕೆ 7 ಲಕ್ಷ ರೂಪಾಯಿಗಳ ವೆಚ್ಚವಾಯಿತು. ದೆಹಲಿಗೆ ಸಂಬಂಧಿಸಿದಂತೆ ಈ ಸ್ಥಿತಿ ಇರುವುದಾದರೆ ಮಿಕ್ಕಿದ್ದನ್ನು ನಾನು ನಿಮ್ಮ ಕಲ್ಪನೆಗೆ ಬಿಡುತ್ತೇನೆ. ಹಾಗೆಯೇ ಈ ಯೋಜನೆಯ ಇನ್ನೊಂದು ಮುಖವನ್ನು ಕಾಣಬೇಕಾದರೆ ನೀವು ಅಹಮದಾಬಾದಿಗೆ ಹೋಗಬೇಕು. ಅಹಮದಬಾದಿನಲ್ಲಿ ಕಂದು ಬಣ್ಣದ 'ಸಾಹೇಬ' ರಿಗಾಗಿ 10 ರಿಂದ 15 ಸಾವಿರ ಬಂಗಲೆಗಳನ್ನು ನಿರ್ಮಿಸಲಾಗಿದೆ. ವಾಸ್ತವವಾಗಿ ಸಾಮಾನ್ಯ ಜನರ ಉಪಯೋಗಕ್ಕಾಗಿ ಮಾಡಿದ ಯೋಜನೆ ಅಲ್ಲ ಇದು. ಈಗ ದೇಶದಲ್ಲಿ ಸುಮಾರು 50 ಲಕ್ಷ ಇರಬಹುದಾದ ಶ್ರೀಮಂತ ವ್ಯಕ್ತಿಗಳ ಸಂಖ್ಯೆಯನ್ನು ಕ್ರಮೇಣವಾಗಿ ಹೇಗಾದರೂ ಮಾಡಿ ಹೆಚ್ಚಿಸುವ ಉದ್ದೇಶದಿಂದ ಮಾಡಲಾದುದಾಗಿದೆ. ಪ್ರತಿ ವರ್ಷ 2 ರಿಂದ 3 ಲಕ್ಷ ಹೊಸ ಸಾಹೇಬರು ಹುಟ್ಟಿಕೊಳ್ಳುತ್ತಿದ್ದಾರೆ. ಇದು ಭಾರತದಲ್ಲಿ ಸಮಾಜವಾದವನ್ನು ತರುವ ನಮ್ಮ ದಾರಿಗೆ ಅಡ್ಡಿಮಾಡುತ್ತದೆ. ಬೆಚ್ಚಗಿನ ಬಂಗಲೆಗಳಲ್ಲಿ ವಾಸಿಸುವುದಕ್ಕೆ ಒಗ್ಗಿಹೋಗಿರುವ ಈ ಸಾಹೇಬರುಗಳು ಕ್ರಾಂತಿಯ ಮೂಲ ತತ್ವಕ್ಕೆ ವಿರುದ್ಧವಾದ ಹೋರಾಟವನ್ನು ಕೈಗೊಳ್ಳುತ್ತಾರೆ.

ತಿವಾರಿಜೀಯವರ ಮಾತುಗಳನ್ನು ನಾನು ಕೇಳಿದ್ದೇನೆ. ಬಿಹಾರದ ಬಗ್ಗೆ ಪಕ್ಷಪಾತವನ್ನು ತೋರಿಸಲಾಗುತ್ತಿದೆ ಎಂಬ ಆಶ್ಚರ್ಯಕರ ಸಂಗತಿಯನ್ನು ಹೇಳಿದ್ದಾರೆ. ಆದರೆ ಹೇಳಬೇಕಾದುದನ್ನು ಅವರು ತಪ್ಪಾಗಿ ಹೇಳಿದ್ದರು. ಹೀಗಾಗಿ ಒಳ್ಳೆಯ ಹಾಗೂ ಪ್ರಾಮಾಣಿಕವಾದ ಒಂದು ಪ್ರಕರಣದ ಬಗ್ಗೆ ವಿವರಗಳನ್ನು ಸರಿಯಾದ ರೀತಿಯಲ್ಲಿ ಮುಂದಿಟ್ಟಂತೆ ಆಗಲಿಲ್ಲ. ಆದರೆ ನಿಜವಾಗಿ ಆಗಿರುವುದು ಏನು ? ಪಕ್ಷಪಾತವನ್ನು ತೋರಲಾಗುತ್ತಿದೆ ನಿಜ. ಆದರೆ ಅದು ಬಡವರ ವಿರುದ್ಧವಾದ ಪಕ್ಷಪಾತ. ಇದನ್ನು ಸಮರ್ಥಿಸುವುದಕ್ಕಾಗಿ ಒರಿಸ್ಸಾ, ಆಂಧ್ರ ಪ್ರದೇಶ, ಉತ್ತರ ಪ್ರದೇಶ ಮತ್ತು ಬಿಹಾರ ಇವುಗಳ ಉದಾಹರಣೆಯನ್ನು ಕೊಡಲಿಚ್ಛಿಸುತ್ತೇನೆ. ಇಲ್ಲಿ ಸರಾಸರಿ ವಾರ್ಷಿಕ ವರಮಾನ

ಕೇವಲ 200 ರೂಪಾಯಿಗಳು. ಆದರೆ ಬ್ರಿಟಿಷರ ವಿದೇಶೀ ವ್ಯಾಪಾರದ ಆಸಕ್ತಿಯ ಪಳಿಯುಳಿಕೆ ಇನ್ನು ಇರುವಂತಹ ಮುಂಬೈ ಮತ್ತು ಕಲಕತ್ತಾದಂಥ ನಗರದ ಕೆಲವು ಪ್ರದೇಶಗಳಲ್ಲಿ ಸರಾಸರಿ ವರಮಾನ 400 ರೂಪಾಯಿಗಳು.

ಇದೆಲ್ಲದರ ಜೊತೆಗೆ, ಉನ್ನತ ಸ್ಥಾನದಲ್ಲಿ ಇರುವ ವ್ಯಕ್ತಿ ತಾನು ಬಂದಂಥ ಸ್ಥಳವನ್ನು ಸುಧಾರಿಸಲು ತೊಡಗುತ್ತಾನೆ. ಉದಾಹರಣೆಗೆ ಒಬ್ಬ ಸಚಿವ ಇತರ ಪ್ರದೇಶಗಳಿಗೆ ತೊಂದರೆಯಾದರೂ ಸರಿ ತನ್ನ ಪ್ರದೇಶ ಅಭಿವೃದ್ಧಿಗೊಳಿಸಿಯೇ ಗೊಳಿಸುತ್ತಾನೆ.

ಇನ್ನು, ಎರಡು ಲಕ್ಷ ನಲವತ್ತು ಸಾವಿರ ಎಕರೆಗಳಷ್ಟು ಪ್ರದೇಶ ಸಹಕಾರೀ ಸಾಗುವಳಿಗೆ ಒಳಪಟ್ಟಿದೆ. ಚುನಾವಣೆಯ ಸಮಯದಲ್ಲಿ ಸಹಕಾರೀ ಸಾಗುವಳಿಯ ಬಗ್ಗೆ ಅಬ್ಬರದ ಪ್ರಚಾರವನ್ನು ಮಾಡಲಾಗಿತ್ತು. ಆದರೆ ವಾಸ್ತವವಾಗಿ 30 ಕೋಟಿ ಎಕರೆಗಳಷ್ಟು ಸಾಗುವಳಿ ಯೋಗ್ಯ ಪ್ರದೇಶದಲ್ಲಿ ಕೇವಲ 2,40,000 ಎಕರೆಗಳಷ್ಟೇ ಸಹಕಾರೀ ಸಾಗುವಳಿಗೆ ಒಳಪಟ್ಟಿರುವ ಪ್ರದೇಶ. ಇದನ್ನು ನಾನು ಏಕೆ ಹೇಳುತ್ತಿದ್ದೇನೆ ಎಂದರೆ, ಚುನಾವಣೆಯ ಸಮಯದಲ್ಲಿ ಸುಳ್ಳು ಭರವಸೆಗಳನ್ನು ನೀಡುತ್ತಾರೆ ಎಂದು ಹೇಳಲು. ಅವರು ನಡೆದುಕೊಳ್ಳುವ ರೀತಿಗೂ ಸರ್ಕಾರದಲ್ಲಿನ ಅವರ ವೃತ್ತಿಗೂ ಬಹಳಷ್ಟು ಅಂತರವಿದೆ.

ಇನ್ನು ಭ್ರಷ್ಟಾಚಾರದ ಬಗ್ಗೆ ಕಡಿಮೆ ಹೇಳಿದಷ್ಟೂ ಒಳ್ಳೆಯದು. ಯೋಜನೆಯ ಅಡಿಯಲ್ಲಿ ಖಾದಿ ಮತ್ತು ಗುಡಿ ಕೈಗಾರಿಕೆಗಳಿಗೆ 52 ಕೋಟಿ ರೂಪಾಯಿಗಳನ್ನು ವೆಚ್ಚ ಮಾಡಲಾಯಿತು. ಈ ಬಂಡವಾಳ ಹೂಡಿಕೆಯೊಂದಿಗೆ ಬಟ್ಟೆಯ ಉತ್ಪಾದನೆ 6.4 ಕೋಟಿ ಗಜಗಳಿಂದ 7.7 ಕೋಟಿ ಗಜಗಳಿಗೆ ಏರಿತು. ನೂರಾರು ಕೋಟಿ ಗಜಗಳಷ್ಟು ಬಟ್ಟೆಯ ಒಟ್ಟು ಉತ್ಪಾದನೆಗೆ ಹೋಲಿಸಿದಾಗ ಉತ್ಪಾದನೆಯಲ್ಲಾದ ಈ ಏರಿಕೆ ಅತ್ಯಲ್ಪವಾದುದು. ಹಾಗಾದರೆ, ಈ ಯೋಜನೆಯ ಉದ್ದೇಶವಾದರೂ ಏನು? ಈ ಯೋಜನೆಯನ್ನು ಪ್ರಧಾನಮಂತ್ರಿಯವರ ಅಪ್ಪಣೆಯ ಮೇರೆಗೆ ಕೆಲವೊಂದು ಬೇರೆ ಉದ್ದೇಶಗಳನ್ನು ಇರಿಸಿಕೊಂಡು ಮಾಡಲಾಗಿದೆ. ನಿಜವನ್ನು ತಿಳಿಯುವ ವ್ಯಕ್ತಿಗಳಿಗೆ ಬೇರೆ ಆಮಿಷವನ್ನು ಒಡ್ಡಿ ಅವರ ಬಾಯಿ ಮುಚ್ಚಿಸುವುದು ಬಹುಶಃ ಒಂದು ಉದ್ದೇಶವಾಗಿರಬಹುದು? ಭಾರತದಲ್ಲಿ, ಮಂತ್ರಿ ಮಂಡಲಕ್ಕೆ ಸೇರಿಸಿಕೊಳ್ಳಲಾಗದ ವಿವಿಧ ಜಾತಿಗಳಿಗೆ ಮತ್ತು ಪಂಗಡಗಳಿಗೆ ಸೇರಿದ ಒಂದು ದೊಡ್ಡ ಗುಂಪಿನ ಜನರಿಗೆ ಮತ್ತು ಮಂತ್ರಿಯಾಗಲು ಇಚ್ಚಿಸಿದ ಅನೇಕ ಜನರಿಗೆ ಸರ್ಕಾರಿ ಕೆಲಸ ಕೊಟ್ಟು ಅವರನ್ನು ಬೇರೆ ಕಾರ್ಯದಲ್ಲಿ ತೊಡಗಿರುವಂತೆ ಮಾಡುವುದು. ನಂತರ, ನೌಕರರು, ಭೋಧಕರು, ಶಿಕ್ಷಣ ತಜ್ಞರು ಹೀಗೆ ಜೀವನದ ಅನೇಕ ಕ್ಷೇತ್ರಗಳಿಗೆ ಸೇರಿದ ಜನರು ಇದರಲ್ಲಿ ಸೇರುತ್ತಾರೆ.

ಈ ಧೋರಣೆ ನಮ್ಮ ಇಡೀ ಯೋಜನೆಯನ್ನೇ ವಿರೂಪಗೊಳಿಸಿದೆ ಮತ್ತು ಆಧಾರರಹಿತವನ್ನಾಗಿ ಮಾಡಿದೆ. ಈ ಪರಿಸ್ಥಿತಿಯನ್ನು ಸುಧಾರಿಸಬೇಕಾದರೆ ನಮಗೆ ಉಳಿದ ಒಂದೇ ಒಂದು ದಾರಿ ಎಂದರೆ ನಮ್ಮ ಕೃಷಿ ಮತ್ತು ಕೈಗಾರಿಕೆಯ ವ್ಯವಸ್ಥೆಯಲ್ಲಿಯೇ ಒಂದು ಬದಲಾವಣೆಯನ್ನು ತರುವುದಕ್ಕಾಗಿ ಸಂಘಟನೆಯನ್ನು ರೂಪಿಸುವುದು. ನಮ್ಮ ಕೃಷಿ ಮತ್ತು ಕಾರ್ಖಾನೆಗಳ ಕಾರ್ಯ ವ್ಯವಸ್ಥೆಯಲ್ಲಿ ಬದಲಾವಣೆಯನ್ನು ತರಬಹುದಾದಂಥ ಯಾವುದೇ ಒಂದು ಸಂಘಟನೆ ಇಲ್ಲದಿರುವಂಥ ಅಥವಾ ಅಂತಹ ಒಂದು ಸಂಘಟನೆಯನ್ನು ಸ್ಥಾಪಿಸುವ ಸಂಕಲ್ಪ ಇಲ್ಲದಿರುವಂಥ ಸರ್ಕಾರದಿಂದ ನಾನು ಇದನ್ನು ನಿರೀಕ್ಷಿಸುವಂತಿಲ್ಲ. ಆದರೆ ಕೆಲಸಕ್ಕೆ ಬಾರದಂಥ ವ್ಯವಸ್ಥೆಯನ್ನು ಈ ದೇಶದಿಂದ ಹೋಗಲಾಡಿಸಲು ಸಮರ್ಥವಾಗಿರುವಂಥ ಒಂದು ಸಂಘಟನೆಯನ್ನು ಸ್ಥಾಪಿಸಲು ನಾವು ಸಹ ಏನೂ ಮಾಡುತ್ತಿಲ್ಲ ಎಂಬುದರ ಬಗ್ಗೆ ನನಗೆ ವಿಷಾದವಿದೆ. ನಮ್ಮ ಕೃಷಿ ಕ್ಷೇತ್ರಗಳಲ್ಲಿ ಮತ್ತು ಕಾರ್ಖಾನೆಗಳಲ್ಲಿ ಇರುವ ದೋಷಯುತ ಪದ್ಧತಿಯನ್ನು ಸರಿಪಡಿಸುವಂತಹ ಒಂದು ಸಂಘಟನೆಯನ್ನು ಸರ್ಕಾರ ತಾನಾಗಿಯೇ ಸ್ಥಾಪಿಸದಿರುವುದು ಈ ದೇಶದ ಮುಂದಿರುವ ಸಮಸ್ಯೆ. ಈ ದೇಶದ ಜನತೆಯು ಸಹ ಸರ್ಕಾರವನ್ನು ಅಧಿಕಾರದಿಂದ ಕಿತ್ತೊಗೆಯುವಂಥಹ ಒಂದು ಸಂಘಟನೆಯನ್ನು ಸ್ಥಾಪಿಸುವಲ್ಲಿ ಅಸಮರ್ಥರಾಗಿದ್ದಾರೆ. ಇದಕ್ಕೆ ಬಹುಶಃ ನಾವು ಸ್ವಾರ್ಥಿಗಳಾಗಿದ್ದೇವೆ ಎಂಬುದು ಕಾರಣ ಇರಬಹುದು. ಪ್ರತಿಯೊಬ್ಬನೂ ತನ್ನ ಹಿತಾಸಕ್ತಿಯ ದೃಷ್ಟಿಯಿಂದ ಮಾತ್ರವೇ ಯೋಚನೆ ಮಾಡುತ್ತಾನೆ. ಇನ್ನು ಹೆಚ್ಚು ಪ್ರಾಮಾಣಿಕವಾಗಿ ಹೇಳುವುದಾದರೆ, ನಾನು ದೆಹಲಿಗೆ ಬಂದು ನೀರಿನ ಹೊರಗಿರುವ ಮೀನಿನಂತೆ ಆಗಿದ್ದೇನೆ. ಇಂತಹ ಕೆಟ್ಟ ಸ್ಥಳಕ್ಕೆ ನಾನು ಏಕಾದರೂ ಬಂದೆ ಎಂದು ಯೋಚಿಸಲು ಪ್ರಾರಂಭಿಸಿದ್ದೇನೆ. ಪ್ರತಿ ದಿನವೂ ಅನೇಕ ಜನರು ನನ್ನ ಬಳಿ ತಮ್ಮ ತೊಂದರೆಗಳನ್ನು ಹೇಳಿಕೊಳ್ಳಲು ಬರುತ್ತಾರೆ. ಇವರು ಆಕಾಶವಾಣಿ, ಅಂಚೆ ಮತ್ತು ತಂತಿ, ಕೃಷಿ ಕಾರ್ಮಿಕರು ಹೀಗೆ ಅನೇಕ ಕ್ಷೇತ್ರಗಳಿಗೆ ಸೇರಿದವರು. ಅವರಿಗೆ ಹೇಳಲು ತಮ್ಮದೇ ಆದ ವ್ಯಥೆಯ ಕಥೆಗಳಿವೆ. ಇಷ್ಟಾಗಿಯೂ ಜನರ ಸ್ಥಿತಿಯನ್ನು ಉತ್ತಮಪಡಿಸಲು ಸುಧಾರಿಸಲು ಯಾವುದೇ ನಿರ್ದಿಷ್ಟ ಪ್ರಯತ್ನಗಳನ್ನೂ ಮಾಡುತ್ತಿಲ್ಲ. ಇಲ್ಲಿ ರಾಷ್ಟ್ರೀಯ ಪ್ರಯತ್ನ ಇಲ್ಲ. ಇದಕ್ಕೆ ಕಾರಣ ಈ ಯೋಜನೆಯ ಮೂಲಕ ದೇಶದ ಜನತೆಯ ಆತ್ಮವಿಶ್ವಾಸವನ್ನು ಧೂಳಿಪಟ ಮಾಡುತ್ತಿರುವ ಸರ್ಕಾರವೇ ಆಗಿದೆ. ಅದಕ್ಷ ನಾಯಕರನ್ನು ಒಳಗೊಂಡ ಸದ್ಯದ ಸರ್ಕಾರಕ್ಕೆ ಬದಲಾಗಿ ಇತರ ಪಕ್ಷಗಳಿಗೆ ಸೇರಿದ ವ್ಯಕ್ತಿಗಳಿಂದ ಸರ್ಕಾರವನ್ನು ರಚಿಸಿದರೂ, ಅವರೂ ಸಹ ಅದಕ್ಷರಾಗುವುದಿಲ್ಲ ಎಂದು ಏನು ಖಾತರಿ ಎಂಬ ಅಭಿಪ್ರಾಯ ಜನರಲ್ಲಿ ಇದೆ. ಈ ವಾದದಲ್ಲಿ ಯಾವುದೇ ತರ್ಕ ಸಮ್ಮತತೆ ಇಲ್ಲ. ಇತರೆ ಪಕ್ಷಗಳು ಸೇರಿ ರಚಿಸಿದ ಸರ್ಕಾರವು ಸಹ ಜನರ ಆಶೋತ್ತರಗಳನ್ನು ಈಡೇರಿಸುವಲ್ಲಿ ವಿಫಲವಾದರೆ ಅದನ್ನೂ ಸಹ, ದಿನನಿತ್ಯ ಮನೆಯ ಕಸವನ್ನು ಕಸದ ಬುಟ್ಟಿಗೆ ಎಸೆಯುವ ರೀತಿಯಲ್ಲೇ ಬೇರೆ ವ್ಯಕ್ತಿಗಳನ್ನು ತರುವುದರ ಮೂಲಕ

ಬದಲಾಯಿಸಬಹುದು. ಆದರೆ ಹೀಗೆ ಮಾಡಬಲ್ಲ ಯಾವುದೇ ಒಂದು ಸಂಘಟನೆಯನ್ನು ರೂಪಿಸುವಲ್ಲಿ ನಾವು ಅಸಮರ್ಥರಾಗಿದ್ದೇವೆ. ಈ ಯೋಜನೆ ನಮ್ಮ ಅಸಮರ್ಥತೆಯನ್ನು ತೋರಿಸುತ್ತದೆ ಎಂದಷ್ಟೇ ನಾನು ಹೇಳಬಲ್ಲೆ. ಇತ್ತೀಚಿನ ದಿನಗಳಲ್ಲಿ ನಮ್ಮ ಆರ್ಥಿಕ ಜೀವನವನ್ನು ವಿಸ್ತಾರಗೊಳಿಸುವ ಪ್ರವೃತ್ತಿಯನ್ನೇ ಕಾಣುತ್ತೇವೆ. ಮೂರನೆಯ ದರ್ಜೆಯ ರೈಲ್ವೆ ಬೋಗಿಯಲ್ಲಿ ದಪ್ಪಗಿರುವ ಪ್ರಯಾಣಿಕನು ಹೆಚ್ಚಿನ ಸ್ಥಳವನ್ನು ಆಕ್ರಮಿಸಿಕೊಂಡಿರುವುದನ್ನು ಮತ್ತು ಉಳಿದ ಪ್ರಯಾಣಿಕರು ಅಷ್ಟೇ ಜಾಗದಲ್ಲೇ ಒಂದು ಮೂಲೆಯಲ್ಲಿ ಮುದುರಿಕೊಂಡು ಕುಳಿತಿರುವ ದೃಶ್ಯವನ್ನು ನೋಡಿದಾಗ ನಾನು ಹೇಳುವುದನ್ನು ಸುಲಭವಾಗಿ ಊಹಿಸಿಕೊಳ್ಳಬಹುದು. ಈ ದುರ್ಬಲ ವ್ಯಕ್ತಿಗಳು , ದೇಶದಲ್ಲಿನ ಈ ಪ್ರವೃತ್ತಿಯನ್ನು ತಡೆಗಟ್ಟುವ ಸಂಕಲ್ಪ ಮಾಡದೇ ಹೋದರೆ ನಮ್ಮ ಯೋಜನೆಗಳು ಯಶಸ್ವಿಯಾಗುವುದು ಸಾಧ್ಯವಿಲ್ಲ.

-:=:=:-

# 8. ಪ್ರತಿಬಂಧಕ ಸ್ಥಾನಬದ್ಧತೆ (ಮುಂದುವರಿಕೆ) ವಿಧೇಯಕ

ಸ್ವಾತಂತ್ರ್ಯ ನಂತರದ ಈ ಹದಿನೈದು ವರ್ಷಗಳಲ್ಲಿ ಕಾಂಗ್ರೆಸ್ ಮುಖಂಡರ ಮತ್ತು ಸಚಿವರುಗಳ ನಿಕಟ ಸಂಪರ್ಕದ ಅವಕಾಶ ನನಗೆ ದೊರೆತಿರಲಿಲ್ಲ. ಕಳೆದ ಮೂರು ನಾಲ್ಕು ತಿಂಗಳುಗಳಿಂದ ನಾನು ಅವರನ್ನು ಗಮನಿಸುತ್ತಿದ್ದೇನೆ. ಇಬ್ಬರು ಗೃಹಮಂತ್ರಿಗಳ ಕಾರ್ಯನಿರ್ವಹಣೆಯನ್ನು ನಾನು ಕಂಡಿದ್ದು, ಅದು ಸ್ವಲ್ಪಮಟ್ಟಿನ ಗೊಂದಲವನ್ನುಂಟು ಮಾಡಿದೆ. ರಾಜ್ಯಾಡಳಿತ ನಡೆಸುವವರು ವಿನೀತರೂ, ಮೃದುಭಾಷಿಗಳೂ ಆಗಿರಬೇಕು. ಶ್ರೀಲಾಲ್ ಬಹಾದುರ್ ಶಾಸ್ತ್ರಿಯವರು ಮೃದು ಹೃದಯಿಗಳೇ ಅಲ್ಲವೇ ಎಂಬುದು ನನಗೆ ತಿಳಿದಿಲ್ಲ. ಆದರೆ ಅವರು ಮೃದುಭಾಷಿಗಳಂತೂ ಆಗಿದ್ದಾರೆ. ಶ್ರೀ ನಂದಾ ಅವರ ಮನಸ್ಸು ಹಾಗೂ ಮಾತು - ಎರಡೂ ಗಡಸು. ನಮ್ಮ ಮೇಲೆ ಅಧಿಕಾರ ಚಲಾಯಿಸಿದಾಗ ನಮಗುಂಟಾದ ಅಸಮಾಧಾನವನ್ನು ನಾವು ವ್ಯಕ್ತಪಡಿಸಬೇಕು. ದರ್ಪದ ಅಧಿಕಾರದಿಂದ ನಮಗೆ ಬೇಸರವಾದರೂ, ದಂಡವನ್ನು ಹಿಡಿದವರು ದಯಾಳುಗಳಾಗಿರಬೇಕು; ಹಾಗೆಂದು ಅವರು ರಾಜದಂಡವನ್ನು ಬಿಡುವಂತಿಲ್ಲ. ರಾಜ್ಯಭಾರ ನಡೆಸುವವರಲ್ಲಿ ಯಾರು ಒಳ್ಳೆಯವರು, ಯಾರು ಒಳ್ಳೆಯವರಲ್ಲ ಎಂಬುದನ್ನು ನಾನು ಹೇಳಲಾರೆ. ಇವರ ಪೈಕಿ ಶ್ರೀನಂದಾಜಿಯವರು ಉತ್ತಮ ಆಡಳಿತಗಾರರು, ಏಕೆಂದರೆ ಇವರ ಮನಸ್ಸು ಹಾಗೂ ಮಾತು ಎರಡೂ ಕಠಿಣ. ಹಾಗಾದಾಗ ಬಹುಬೇಗ ಕ್ರಾಂತಿಗೆ ನಾಂದಿಯಾಗುತ್ತದೆ. ಈ ವಿಚಾರದಲ್ಲಿ, ಚರ್ಚಿಸುವುದಕ್ಕಿಂತ ಗೃಹಮಂತ್ರಿಗಳು ಅತ್ಯಂತ ಜಾಗರೂಕರಾಗಿರಬೇಕಷ್ಟೇ ಅಲ್ಲ, ಅವರು ಸಹಾನುಭೂತಿಪರರು ಮೃದು ಭಾಷಿಗಳೂ ಆಗಿರಬೇಕೆಂಬುದು ನನ್ನ ಅನಿಸಿಕೆ. ಈಗ ನಾನು ''ಪ್ರತಿಬಂಧಕ ಸ್ಥಾನಬದ್ಧತೆ ಕಾಯ್ದೆ'' ಕುರಿತು ಹೇಳುವುದು ಇಷ್ಟೇ, ಸರ್ಕಾರವು ತನ್ನ ಪೋಲೀಸ್ ಬಲವನ್ನು ಅಧಿಕಾರವನ್ನು ಹಾಗೂ ತನ್ನ ಗೃಹಮಂತ್ರಿಗಳನ್ನು ಸ್ವಲ್ಪಮಟ್ಟಿಗೆ ಅಂಕೆಯಲ್ಲಿಟ್ಟು ಕೊಳ್ಳಬೇಕು. ಈ ' ಪ್ರತಿಬಂಧಕ ಸ್ಥಾನಬದ್ಧತೆ ಕಾಯ್ದೆ' ಯ ಬಗ್ಗೆ ಹೇಳುವುದಾದರೆ, ಕಳೆದ 3 ತಿಂಗಳಲ್ಲಿ ನಡೆದ ಘಟನೆಗಳು ನನ್ನ ಮನಸ್ಸನ್ನು ಕದಡಿವೆ. ನಾನು ಸಹಜವಾಗಿಯೇ ಅಹಿಂಸಾವಾದಿ. ಈ ಸಂದರ್ಭದಲ್ಲಿ 1942 ರಲ್ಲಿ ನಡೆದ ಸಂಗತಿಯೊಂದರ ಬಗ್ಗೆ ನಾನು ಹೇಳಬಯಸುತ್ತೇನೆ. ರೈಲುಗಳ ಹಳಿತಪ್ಪಿಸಬೇಕಾದ ಸಂದರ್ಭದಲ್ಲಿ ನಾನು ಸಂಧಿಗ್ಧ ಪರಿಸ್ಥಿತಿಗೆ ಒಳಗಾಗಿದ್ದೇನೆ. ಸರಕು ಸಾಗಣೆ ರೈಲು ಹಾಗೂ ಸೈನಿಕರನ್ನು ಸಾಗಿಸುವ ರೈಲು, ಇವೆರಡರ ಪೈಕಿ ಯಾವುದನ್ನು ಹಳಿ ತಪ್ಪಿಸಬೇಕು, ಎಂಬ ವಿಚಾರದಲ್ಲಿ, ನನ್ನ ಮನಸ್ಸು ಡೋಲಾಯಮಾನವಾಗಿತ್ತು, ಸೈನಿಕರನ್ನು ಸಾಗಿಸುವ ರೈಲು ಹಳಿ ತಪ್ಪುವ ವಿಚಾರ ನನಗೆ ಸರಿಬರಲಿಲ್ಲ. ಆದರೆ ಪ್ರಸಕ್ತ ಘಟನೆಗಳು ನನ್ನ ಅಹಿಂಸಾ ಮನೋಧರ್ಮದ ಮೇಲೆ ಕೆಲವು ಕ್ಷಣಗಳ ಮಟ್ಟಿಗಾದರೂ ಪ್ರಭಾವ ಬೀರಿವೆ ಎಂಬ ಅಂಶವನ್ನು ನಾನು ವಿಷಾದದಿಂದಲೇ ಹೇಳಬೇಕಾಗಿದೆ.

ಸರ್ಕಾರವು ಮತ್ತೆ ಮತ್ತೆ ಜಾರಿಗೆ ತರುತ್ತಿರುವ ಪ್ರತಿಬಂಧಕ ಸ್ಥಾನಬದ್ಧತೆ ಕಾಯ್ದೆಯನ್ನು ಭಾರತ ದಂಡ ಸಂಹಿತೆಯ ಒಂದು ಭಾಗ ಎಂದು ಸ್ಪಷ್ಟವಾಗಿ ಘೋಷಿಸಿರದಿದ್ದರೂ, ವಾಸ್ತವವಾಗಿ ಅದು ಭಾರತ ದಂಡ ಸಂಹಿತೆಯ ಒಂದು ಭಾಗವೇ ಆಗಿದೆ. ಇದು ಸಂವಿಧಾನದ 21 ಹಾಗೂ 22ನೇ ಅನುಚ್ಛೇದಗಳಿಗೆ ಸಂಬಂಧಿಸಿದೆ. ಗೃಹ ಸಚಿವರು ತಮ್ಮ ಭಾಷಣದಲ್ಲಿ ಇಂಥ ವಿಚಾರಗಳನ್ನು ಹೇಳಿದ್ದಾರೆ. ನಾನೇನಾದರೂ ಅಧಿಕಾರದಲ್ಲಿದ್ದಿದ್ದರೆ ಅವರು ಹೇಳಿದ ಈ ಮಾತುಗಳಿಗಾಗಿ ನಾಗರಿಕ ಹಕ್ಕುಗಳ ರಕ್ಷಣೆಗೆ ಸಂಬಂಧಿಸಿದ ಸಂವಿಧಾನದ ಉಲ್ಲಂಘನೆ ಆರೋಪದ ಮೇಲೆ, ಅವರ ಮೇಲೆ ಕಾನೂನು ಕ್ರಮ ಜರೂಗಿಸಿ ಬಂದೀಖಾನೆಗೆ ಕಳುಹಿಸಿ ಬಿಡುತ್ತಿದ್ದೆ. ಆಣೆ, ''ಈ ಪ್ರತಿಬಂಧಕ ಸ್ಥಾನ ಬದ್ಧತೆ ಕಾಯ್ದೆ''ಯನ್ನು ನಾನು ಪ್ರಸ್ತಾವಿಸಿಲ್ಲವಾದ್ದರಿಂದ ಈ ವಿಷಯ ಉದ್ಭವಿಸಲಾರದು. ಅವರ ಪ್ರಕಾರ ನಾಗರಿಕ ಹಕ್ಕುಗಳಿಗೆ ಸಂಬಂಧಿಸಿದ ಎಲ್ಲ ಅನುಚ್ಛೇದಗಳನ್ನು ಗಮನಿಸಿದಾಗ ಆ ಅನುಚ್ಛೇದಗಳು ಒಂದಕ್ಕೊಂದು ವಿರುದ್ಧವಾಗಿದೆ. ಇವರ ಈ ಹೇಳಿಕೆಗಂತೂ ನಾನು ಇವರ ಮೇಲೆ ಕಾನೂನು ಕ್ರಮ ಕೈಗೊಳ್ಳುತ್ತಿದೆ. ಸಂವಿಧಾನವನ್ನು ಈ ರೀತಿಯಾಗಿ ಅರ್ಥೈಸಿದ್ದೇ ಆದರೆ ಅದು ತನ್ನ ಅಸ್ತಿತ್ವವನ್ನೇ ಕಳೆದುಕೊಳ್ಳುತ್ತದೆ. ನಾಗರಿಕ ಹಕ್ಕುಗಳಿಗೆ ಸಂಬಂಧಿಸಿದ ಅನುಚ್ಛೆದಗಳು ಪರಸ್ಪರ ವಿರುದ್ಧವಾಗಿರದೇ, ಅವು ಒಂದಕ್ಕೊಂದು ಪೂರಕವಾಗಿ ಇರುವುದೂ ಒಂದು ಹೆಗ್ಗಳಿಕೆಯ ವಿಷಯ. 21 ಹಾಗೂ 22ನೇ ಅನುಚ್ಛೇದಗಳು ಇತರ ಯಾವುದೇ ಅನುಚ್ಛೇದಗಳಿಗೆ ಸಂಬಂಧಿಸಿಲ್ಲ. ಇತರ ಅನುಚ್ಛೇದಗಳು 21 ಹಾಗೂ 22ನೇ ಅನುಚ್ಛೇದದ ಉಪಬಂಧಗಳನ್ನು ತಿದ್ದುಪಡಿ ಮಾಡಲಾರವು . 22ನೇ ಅನುಚ್ಛೇದವು ಸ್ವತಃ ಕೆಲಮಟ್ಟಿಗೆ ಮಾರ್ಪಾಡುಗಳನ್ನು ತರುವಂಥದ್ದಾಗಿದೆ.

ದೇಶದ ಭದ್ರತೆಗೆ ಹಾಗೂ ವಿದೇಶೀ ಸಂಬಂಧಗಳಿಗೆ ಸಂಬಂಧಿಸಿದ 19ನೇ ಪ್ರಕರಣವನ್ನು ಶ್ರೀ ಗುಲ್‌ಜಾರಿಲಾಲ್ ನಂದಾ ಉಲ್ಲೇಖಿಸಿದ್ದಾರೆ. ಅದು ಪ್ರತಿಬಂಧಕ ಸ್ಥಾನಬದ್ಧತೆಗೆ ಸಂಬಂಧಪಡುವುದೇ ಇಲ್ಲ. ಪ್ರತಿಬಂಧಕ ಸ್ಥಾನಬದ್ಧತೆ ಕಾಯ್ದೆ ತೀರ ಪ್ರತ್ಯೇಕ ವಿಚಾರ. ಸ್ವತಂತ್ರವಾಗಿ ಜೀವಿಸುವುದಕ್ಕೆ ಹಾಗೂ ಬಂಧನದ ತರುವಾಯ 24 ಗಂಟೆಯೊಳಗೆ ಮ್ಯಾಜಿಸ್ಟ್ರೇಟರ ಮುಂದೆ ಹಾಜರುಪಡಿಸಲ್ಪಡುವುದಕ್ಕೆ ನಮಗೆ ಹಕ್ಕು ಇದ್ದೇ ಇದೆ. ಆದ್ದರಿಂದ ಈ ಪ್ರಕರಣದಲ್ಲೇ ಹೇಳಿರುವ ಷರತ್ತುಗಳನ್ನು ನಾವು ಗಮನಿಸಬೇಕು.

ನಮ್ಮ ಪ್ರಜಾಪ್ರಭುತ್ವ ವ್ಯವಸ್ಥೆ ಇನ್ನೂ ಶೈಶವಾವಸ್ಥೆಯಲ್ಲಿದೆ ಎಂದೂ, ಇಂಥ ವ್ಯವಸ್ಥೆಯನ್ನು ಹೊರಗಿನ ಅಪಾಯಗಳಿಂದ ರಕ್ಷಿಸಿ ಸೂಕ್ತ ಬೆಳವಣಿಗೆಗೆ ಅನುಕೂಲಕರ ಪರಿಸರವುಂಟುಮಾಡಲು, ಸುತ್ತಲೂ ಬೇಲಿ ಹಾಕಿ, ಬೆಳೆಯುವ ಸಸಿಯನ್ನು ಸಂರಕ್ಷಿಸುವಂತೆಯೇ ನಾವು ನಮ್ಮ ಈಗಿನ ಪ್ರಜಾಪ್ರಭುತ್ವವನ್ನು ರಕ್ಷಿಸಬೇಕಾಗಿದೆ ಎಂದು

ಹೇಳಿದ್ದಾರೆ. ಆದರೆ, ಸಸ್ಯಗಳ ಮೇಲೆಯೇ ಬೆಳೆಯುವ 'ಅಮರ್ ಬೇಲ್' ಎಂಬ ಬಳ್ಳಿ, ಸಸ್ಯವನ್ನೇ ನಾಶಪಡಿಸುವಂತೆ, ಸರ್ಕಾರವು ಪ್ರಸ್ತಾವಿಸಿದ ಈ ಕ್ರಮಗಳು, ಶೈಶವಾವಸ್ಥೆಯಲ್ಲಿರುವ ನಮ್ಮ ಪ್ರಜಾಪ್ರಭುತ್ವ ವ್ಯವಸ್ಥೆಯನ್ನು ರಕ್ಷಿಸುವ ಬದಲು ಅದನ್ನೇ ನಾಶ ಪಡಿಸುವಂತಿದೆ. ಸಸಿಯಂತಿರುವ ಈ ಪ್ರಜಾಪ್ರಭುತ್ವವನ್ನು ರಕ್ಷಿಸುವ ಉದ್ದೇಶ ಅವರಿಗೆ ಇದ್ದುದೇ ಆದರೆ, ಸಸ್ಯದ ಬೆಳವಣಿಗೆಗೆ ಗೊಬ್ಬರ ಹಾಗೂ ಸೂರ್ಯನ ಬೆಳಕು ಹೇಗೆ ಅಗತ್ಯವೋ, ಅದೇ ರೀತಿ ಜನರಿಗೂ ಸಂಪೂರ್ಣ ಸ್ವಾತಂತ್ರ್ಯದ ಅಗತ್ಯವಿದೆ. ಆಗ ಮಾತ್ರವೇ ಪ್ರಜಾಪ್ರಭುತ್ವ ವ್ಯವಸ್ಥೆಯು ಸದೃಢವಾಗುತ್ತದೆ. ಈ ಪ್ರತಿಬಂಧಕ ಸ್ಥಾನ್ಬದ್ಧತೆ ವಿಧೇಯಕವನ್ನು ಜಾರಿಗೆ ತಂದದ್ದೇ ಆದರೆ, ನಮ್ಮ ಈ ಪ್ರಜಾಪ್ರಭುತ್ವದ ಈ ಸಸಿಯು ಬಾಡಿಹೋಗಿ ಸಂಪೂರ್ಣವಾಗಿ ನಿರ್ಮೂಲವಾಗುವ ಅಪಾಯವಿದೆ.

ಇಂಗ್ಲೆಂಡ್ ಹಾಗೂ ಯುರೋಪ್ ದೇಶಗಳ ಜನತೆ ಮೂರು ಶತಮಾನಗಳ ದೀರ್ಘಕಾಲ ನಡೆಸಿದ ಹೋರಾಟ ಫಲವಾಗಿ ನಾಗರಿಕ ಹಕ್ಕುಗಳನ್ನು ಪಡೆದರು ಎಂಬ ಐತಿಹಾಸಿಕ ಘಟನೆಗಳನ್ನು ಉಲ್ಲೇಖಿಸಿ ತಮ್ಮ ವಾದವನ್ನು ಸಮರ್ಥಿಸಿಕೊಳ್ಳಲಾಗುತ್ತಿದೆ. ಇಂಗ್ಲೆಂಡ್ ಮತ್ತು ಯುರೋಪ್‌ಗಳ ಇತಿಹಾಸದ ಪುಟಗಳನ್ನು ತೆರೆದು ನೋಡಿದರೆ, ಇಂಗ್ಲೆಂಡಿನಲ್ಲಿ ನಾಗರಿಕ ಹಕ್ಕುಗಳನ್ನು ಪಡೆಯುವುದಕ್ಕಾಗಿಯೇ ಎಷ್ಟೋ ಜನ ರಾಜರುಗಳನ್ನು, ರಾಣಿಯರನ್ನು, ಮಂತ್ರಿಗಳನ್ನು ಅಲ್ಲದೇ ಪ್ರಧಾನ ಮಂತ್ರಿಗಳನ್ನೇ ಮರಣದಂಡನೆಗೆ ಗುರಿಪಡಿಸಿದ್ದ ಸಂಗತಿಯನ್ನು ಅಲ್ಲಗಳೆಯುವಂತಿಲ್ಲ. ಒಂದು ವೇಳೆ ನೀವು ಇಂಗ್ಲೆಂಡಿನ ಈ ಇತಿಹಾಸವೇ ಭಾರತದಲ್ಲಿಯೂ ಪುನರಾವರ್ತನೆಯಾಗಬೇಕೆಂದು ಬಯಸಿದರೆ, ಅನೇಕ ವಿಪತ್ತುಗಳಿಗೆ ಎಡೆಮಾಡಿಕೊಟ್ಟಂತಾಗುತ್ತದೆ. ನಮ್ಮ ಇತಿಹಾಸವನ್ನು ನಾವೇ ರೂಪಿಸಿಕೊಳ್ಳಬೇಕು. ನಾವು '' ಸತ್ಯಾಗ್ರಹ'' ಹಾಗೂ ''ನಾಗರೀಕ ಅಸಹಕಾರ'' ಚಳುವಳಿಗಳನ್ನು ನಡೆಸಿ ಸ್ವಾತಂತ್ರ್ಯವನ್ನು ಗಳಿಸಿದ್ದೇವೆ. ಸತ್ಯಾಗ್ರಹ ಹಾಗೂ ನಾಗರೀಕ ಅಸಹಕಾರಗಳನ್ನು ಆಧಾರವಾಗಿಟ್ಟುಕೊಂಡು ನಡೆಸಿದ ಹೋರಾಟದಿಂದಾಗಿ ಸ್ವತಂತ್ರ ಭಾರತವು ಅಸ್ತಿತ್ವಕ್ಕೆ ಬಂದಿದ್ದು, ಈ ದೇಶಕ್ಕೆ ವಿಭಿನ್ನ ರೀತಿಯ ನಿಯಮಗಳ ಹಾಗೂ ಕಾನೂನುಗಳ ಅಗತ್ಯವಿದೆ ಮತ್ತು ಇಂಥ ಕಾಯ್ದೆ ಕಾನೂನುಗಳನ್ನು ಅಮೇರಿಕಾ ಹಾಗೂ ಇಂಗ್ಲೆಂಡಿನಲ್ಲಿ ಇರುವ ಕಾಯ್ದೆ ಕಾನೂನುಗಳೊಂದಿಗೆ ಹೋಲಿಸಲಾಗದು ಎಂಬುದನ್ನು ಶ್ರೀ ನಂದಾ ಅವರು ಮರೆಯಬಾರದು.

ಭಾರತದಲ್ಲಿ ನಾಗರಿಕ ಹಕ್ಕುಗಳನ್ನು ಹಂತಹಂತವಾಗಿ ಮೊಟಕುಗೊಳಿಸುತ್ತಲೇ ಬಂದಿದ್ದು, ಕಾನೂನು ವ್ಯವಸ್ಥೆಯು ಅದೇ ರೀತಿ ಕ್ಷೀಣಿಸುತ್ತಾ ಹೋಗುತ್ತಿದೆ. ನೀರಿನ ಪ್ರವಾಹವು ಯಾವುದೇ ತಡೆ ಇಲ್ಲದೆ ಭೂಮಿಯನ್ನು ಕೊರೆಯುವ ಹಾಗೆ, ಇಂಥ ಕಾನೂನುಗಳು ಭಾರತದ ನಾಗರಿಕರು ಅನುಭವಿಸುತ್ತಿದ್ದ ನಾಗರಿಕ ಹಕ್ಕುಗಳಿಗೆ

ಸಂಬಂಧಿಸಿದ ಕಾನೂನುಗಳನ್ನು ಮೊಟಕುಗೋಳಿಸುತ್ತಲೇ ಬಂದಿವೆ. ಪ್ರತಿಬಂಧಕ ಸ್ಥಾನಬದ್ಧತೆ ಕಾಯ್ದೆಯೇ ಅಲ್ಲದೇ ಭಾರತ ರಕ್ಷಣಾ ನಿಯಮಗಳಂಥ ಕಾನೂನುಗಳು, ನಾಗರಿಕರ ಹಕ್ಕುಗಳಷ್ಟನ್ನೂ ಅಪರಿಹರಿಸಿವೆ. ನಾಗರಿಕ ಹಕ್ಕುಗಳನ್ನು ಮೊಟಕುಗೊಳಿಸಿ ಕಾನೂನು ವ್ಯವಸ್ಥೆ ಕ್ಷಯಿಸುವಂಥ ಪ್ರವೃತ್ತಿಯನ್ನು ತಡೆಗಟ್ಟದೆ ಉಳಿಯಗೊಟ್ಟದ್ದೇ ಆದರೆ, ಜನರು ಅದರಲ್ಲೂ ಸರ್ಕಾರಿ ಅಧಿಕಾರಿಗಳು ತಮ್ಮ ಅಧಿಕಾರಗಳನ್ನು ಚಲಾಯಿಸುವಲ್ಲಿ ಅಸಮರ್ಥರಾಗುತ್ತಾರೆ. ಅಷ್ಟೇ ಅಲ್ಲ, ಅವರು ಮಾನಸಿಕವಾಗಿಯೂ, ಆಡಳಿತಗಾರರಾಗಿಯೂ ಅಸಮರ್ಥರಾಗುತ್ತಾರೆ. ಅವರಿಗೆ ನ್ಯಾಯಾಲಯದ ಅಂಜಿಕೆಯೇ ಇಲ್ಲದಂತಾಗಿ ಅವರು ತಮ್ಮ ವಾದ ಸಮರ್ಥನೆಗೆ ಯಾವ ಸಿದ್ಧತೆಯನ್ನೂ ಮಾಡಿಕೊಳ್ಳುವುದಿಲ್ಲ. ನ್ಯಾಯಾಲಯಗಳಲ್ಲಿ ತಮ್ಮ ಯಾವುದೇ ಜವಾಬ್ದಾರಿಯಿದೆಯೆಂದಾಗಲೀ ತಮ್ಮ ವಾದ ವಿಫಲವಾಗುವ ಭಯವಾಗಲೀ ಅವರಿಗೆ ಇರುವುದಿಲ್ಲ. ಭಯದ ಅಂಕುಶವಿದ್ದಾಗ ಮಾತ್ರ ಅಧಿಕಾರಿಗಳು ಜಾಗೃತರಾಗಿರುತ್ತಾರೆ.

ಭಯದ ಅಂಕುಶ ದಿಲ್ಲದಿದ್ದರೆ, ಈ ಅಧಿಕಾರಿಗಳು ತಾವು ಯಾರನ್ನಾದರೂ ಬಂಧಿಸಿ ಬಂಧನದಲ್ಲಿಡಬಹುದೆಂದು ಭಾವಿಸುತ್ತಾರೆ. ಏಕೆಂದರೆ ಅವರು ನ್ಯಾಯಾಲಯದಲ್ಲಿ ತಮ್ಮ ವಾದವನ್ನು ಸಮರ್ಥಿಸಿಕೊಳ್ಳಬೇಕಾಗಿಲ್ಲ. ಅಧಿಕಾರದಲ್ಲಿರುವವರು ತಮ್ಮ ವೈಯಕ್ತಿಕ ದ್ವೇಷವನ್ನು ಸಾಧಿಸಿಕೊಳ್ಳಲು ಕಾನೂನನ್ನು ದುರುಪಯೋಗಪಡಿಸಿಕೊಂಡಿರುವ ಅನೇಕ ಉದಾಹರಣೆಗಳಿವೆ. ನಾನೂ ಇದಕ್ಕೆ ಬಲಿಪಶುವಾಗಿದ್ದೆ. ಒಮ್ಮೆ ಒಬ್ಬ ಕಲೆಕ್ಟರನು . ನ್ಯಾಯಾಲಯದಲ್ಲಿ ನನ್ನ ವಿರುದ್ಧ ಮೊಕದ್ದಮೆಯಲ್ಲಿ ವಿಫಲನಾದಾಗ 'ಪ್ರತಿಬಂಧಕ ಸ್ಥಾನಬದ್ಧತೆ ಕಾಯ್ದೆ' ಯ ಅಡಿಯಲ್ಲಿ ನನ್ನನ್ನು ಬಂಧಿಸಿದನು. ಸ್ವಲ್ಪಕಾಲದವರೆಗಷ್ಟೇ ನನ್ನನ್ನು ಬಂಧನದಲ್ಲಿಟ್ಟಿದ್ದರೂ, ಆ ತರುವಾಯ ನನ್ನ ವಿರುದ್ಧ ಅಪರಾಧ ನಿರ್ಣಯವಾಗಿ ಆ ಮೇಲೆ ಬಹಳಷ್ಟು ಘಟನೆಗಳೇ ನಡೆದವು.

ಕಾನೂನು ವೈಫಲ್ಯ ಕುರಿತು ಹೇಳುವುದಾದರೆ, ರಾಜಕೀಯವಾಗಿಯೂ ವೈಯಕ್ತಿಕ ವಾಗಿಯೂ ಸೇಡು ತೀರಿಸಿಕೊಳ್ಳುವ ದಿಸೆಯಲ್ಲಿ ಹಿಂಸಾಚಾರದ ಹಾಗೂ ಕೊಲೆ ಪಾತಕತನದ ಮಾರ್ಗವನ್ನು ಹಿಡಿಯುವ ಪ್ರವೃತ್ತಿ ನಮ್ಮ ದೇಶದಲ್ಲಿ ಬೆಳೆದಿದೆ ಎಂಬುದನ್ನು ಮಾನ್ಯ ಗೃಹಮಂತ್ರಿಗಳಿಗೆ ಹೇಳಬಯಸುತ್ತೇನೆ. ವೈಯಕ್ತಿಕ ಸೇಡನ್ನು ತೀರಿಸಿಕೊಳ್ಳುವ ಪ್ರವೃತ್ತಿಯಿಂದಾಗಿ ನಮ್ಮ ಸಮಾಜದಲ್ಲಿ ಈಗ ಹಿಂಸಾಚಾರ ತಾಂಡವವಾಡುತ್ತಿದೆ.

......ಗಣ್ಯರೆಂದು ಕರೆಸಿಕೊಳ್ಳುವ ಜನರೂ ತಮ್ಮ ಮಹತ್ವಾಕಾಂಕ್ಷೆಗಳನ್ನು ಈಡೇರಿಸಿಕೊಳ್ಳುವ ಸಲುವಾಗಿ ಕೊಲೆಯ ಮಾರ್ಗವನ್ನು ಅನುಸರಿಸುತ್ತಿದ್ದಾರೆ ಎಂಬ ಅಂಶವನ್ನು ನಾವೀಗ ಅರಿತುಕೊಳ್ಳಬೇಕಾಗಿದೆ.

ಒಂದು ಪ್ರಕರಣದಲ್ಲಿ, ಕೇವಲ ಬೇರೆ ಜಾತಿಯ ಯುವತಿಯರನ್ನು ಪ್ರೀತಿಸಿದ್ದರೆಂಬ ಕಾರಣಕ್ಕಾಗಿ ಇಬ್ಬರು ವಿದ್ಯಾರ್ಥಿಗಳನ್ನು ಕೊಲೆ ಮಾಡಲಾಯಿತು. ಪ್ರೀತಿಸುವುದು ತಪ್ಪೇನಲ್ಲ. ಯುವತಿಯರ ತಂದೆಯವರು ಆ ವಿದ್ಯಾರ್ಥಿಗಳ ಶಿಕ್ಷಕರಾಗಿದ್ದರು, ಆದರೂ ಈ ಪ್ರೀತಿಯ ವಿಷಯ ಅವರಿಗೆ ಇಷ್ಟವಾದುದಾಗಿರಲಿಲ್ಲ. ಕಾನೂನು ವ್ಯವಸ್ಥೆ ಈ ರೀತಿ ಕ್ಷೀಣಿಸಿದಾಗ ಜನರು, ಅದರಲ್ಲೂ ದೊಡ್ಡ ಮನುಷ್ಯರೆಂದೆನಿಸಿಕೊಂಡವರು, ತಾವು ಏನು ಮಾಡಿದರೂ ನಡೆಯುತ್ತದೆ ಎಂಬ ಭಾವನೆಯನ್ನು ಬೆಳೆಸಿಕೊಳ್ಳುತ್ತಾರೆ.

ಕಾನೂನಿನ ಅಡಿಪಾಯವನ್ನು ಕೊರೆಯುವ ಕಾರ್ಯ ನಿರಂತರವಾಗಿ ನಡೆದೇ ಇದೆ. ಜನರಿಂದ ಮಾತ್ರವೇ ಅರಾಜಕತೆಯುಂಟಾಗುವುದಿಲ್ಲ, ಸರ್ಕಾರದಿಂದಲೂ ಉಂಟಾಗುತ್ತದೆ. ಈಗ ಸರ್ಕಾರದಿಂದಲೇ ಜನ್ಮ ತಾಳಿದ ಅರಾಜಕತೆಯು ಪ್ರಸಕ್ತ, ಕಾನೂನುಗಳನ್ನು ನಿಷ್ಪಕ್ಷಪಾತವಾಗಿ ಜಾರಿಗೊಳಿಸಲು ಸಾಧ್ಯವಾಗದಂಥ ಪರಿಸ್ಥಿತಿಯನ್ನುಂಟು ಮಾಡಿದೆ, ಇದು ಭ್ರಷ್ಟಾಚಾರವಲ್ಲದೇ ಬೇರೆನೂ ಅಲ್ಲ. ಈ ಪ್ರತಿಬಂಧಕ ಸ್ಥಾನಬದ್ಧತೆ ಕಾನೂನಿನ ಕಟ್ಟುಕಟ್ಟಳೆಗಳನ್ನು ಹೊಸಗಿಹಾಕುತ್ತಿದೆ.

ನಾನು ಈಗಾಗಲೇ ಹೇಳಿರುವ ಹಾಗೆ ಪ್ರತಿಬಂಧಕ ಸ್ಥಾನಬದ್ಧತೆ ಕಾಯ್ದೆಯನ್ನು ಜಾರಿಗೊಳಿಸುವುದರಿಂದ , ಆಡಳಿತ ಯಂತ್ರವೂ ನಿರರ್ಥಕವಾಗಿ ಬಿಟ್ಟಿದೆ. ನಮ್ಮ ಬಂಧನವನ್ನು ಪ್ರಶ್ನಿಸುವ ಹಕ್ಕು ನಮಗಿದ್ದರೂ, ಆ ಕಾಯ್ದೆಯ ಅಡಿಯಲ್ಲಿ ಸ್ಥಾನಬದ್ಧತೆಯಲ್ಲಿಟ್ಟಾಗ, ಅಂಥ ಬಂಧನವನ್ನು ಪ್ರಶ್ನಿಸುವ ಹಕ್ಕು ನಮಗೆ ಇಲ್ಲವಾಗುತ್ತದೆ. ಹೆಚ್ಚೇಕೆ, ಕಲೆಕ್ಟರೇ ಆಗಲಿ, ಕಮಿಷನರೇ ಆಗಲಿ ಅಥವಾ ಯಾರೇ ಉನ್ನತ ಅಧಿಕಾರಿಯಾಗಲಿ ನಿಷ್ಕ್ರಿಯರಾಗುತ್ತಾರೆ. ಅದೇ ರೀತಿ, ಗೃಹಮಂತ್ರಿಗಳೂ ಹಾಗೂ ಮಾನ್ಯ ಪ್ರಧಾನ ಮಂತ್ರಿಗಳೂ ಏನೂ ಮಾಡಲಾರರು. ಈ ಎಲ್ಲ ಸಂಗತಿಗಳು, ಅರಾಜಕತೆಯತ್ತ ಕೊಂಡೊಯ್ಯುತ್ತವೆ. ಒಂದು ತಂತಿ ವಾದ್ಯದ ಸಡಿಲಗೊಂಡಿರುವ ತಂತಿಗಳನ್ನು ಬಿಗಿಗೊಳಿಸಿದಾಗ ಅಪೇಕ್ಷಿತ ಸ್ವರ ಅದರಿಂದ ಹೊರಡಿಸುವಂತೆ ಈ ಪ್ರತಿಬಂಧಕ ಸ್ಥಾನಬದ್ಧತೆ ಕಾಯ್ದೆಯನ್ನು ಹಿಂತೆಗೆದುಕೊಂಡಾಗ ಎಲ್ಲ ಜನರೂ ಹಾಗೂ ಸರ್ಕಾರವು ಹೆಚ್ಚು ಸಮರ್ಥವಾಗಿ ಕಾರ್ಯನಿರ್ವಹಿಸುವುದು ಸಾಧ್ಯವಾಗುತ್ತದೆ. ಈಗ ಇರುವ ಈ ಸರ್ಕಾರವು ತಂತಿಗಳು ಸಡಿಲಗೊಂಡ ಒಂದು ಮ್ಯಾಂಡೊಲಿನ್ ವಾದ್ಯದಂತಿದೆ. ಪ್ರತಿಬಂಧಕ ಸ್ಥಾನಬದ್ಧತೆ ಕಾಯ್ದೆಯನ್ನು ಮುಂದುವರೆಸಿದರೆ, ಈ ವಾದ್ಯದ ತಂತಿಗಳು ಇನ್ನಷ್ಟು ಸಡಿಲಗೊಳ್ಳಲು ಅವಕಾಶವಾಗುತ್ತದೆ. ವಾದ್ಯದ ಸಡಿಲಗೊಂಡ ತಂತಿಗಳನ್ನು ಬಿಗಿಗೊಳಿಸಿದಾಗಲೇ , ಉದ್ದೇಶ ಸಫಲವಾಗಿ, ಅಪೇಕ್ಷಿತ ಸ್ವರ ಹೊರಹೊಮ್ಮುತ್ತದೆ. ಇದನ್ನು ಗಮನದಲ್ಲಿಟ್ಟು ಕೊಂಡೇ , ಈ ಪ್ರತಿಬಂಧಕ ಸ್ಥಾನಬದ್ಧತೆ ಕಾಯ್ದೆಯನ್ನು ರದ್ದುಪಡಿಸಿದರೆ ಸರ್ಕಾರವು ಹೆಚ್ಚು ದಕ್ಷತೆಯಿಂದ ಕೆಲಸ ಮಾಡಬಹುದೆಂದು

ನಾನು ಹೇಳ ಹೊರಟಿದ್ದೇನೆ. ಈ ಬಗ್ಗೆ ಗಂಭೀರವಾಗಿ ವಿಚಾರ ಮಾಡಬೇಕೆಂದು ನಾನು ಸರ್ಕಾರದ ಮುಂದೆ ನನ್ನ ಈ ವಿಚಾರವನ್ನು ಇಟ್ಟಿದ್ದೇನೆ.

ವಿಶೇಷವಾಗಿ, ಸರ್ಕಾರವೇ ಅರಾಜಕ ಪರಿಸ್ಥಿತಿಯನ್ನು ನಿರ್ಮಿಸಿರುವ ಬಗ್ಗೆ ನಾನಿಲ್ಲಿ ಹೇಳಬಯಸುತ್ತೇನೆ, ಏಕೆಂದರೆ, ಸಾಮಾನ್ಯವಾಗಿ ಜನಸಾಮಾನ್ಯರಲ್ಲಿ ಗೂಂಡಾಗಳು, ಕಮ್ಯುನಿಷ್ಟರು ಹಾಗೂ ಅಹಿಂಸಾವಾದಿಗಳೆನಿಸಿಕೊಂಡವರಲ್ಲಿ ತಾಂಡವ ವಾಡುತ್ತಿರುವ ಅರಾಜಕತೆಯ ಬಗ್ಗೆ ಬಹಳಷ್ಟನ್ನು ಹೇಳಲಾಗಿದೆ. ಹಾಗೆಂದು ನಾನು ಕಮ್ಯುನಿಷ್ಟರ ಬೆಂಬಲಿಗನೇನಲ್ಲ. ನಾನು ಹತ್ತು ಹದಿನೈದು ವರ್ಷಗಳ ಹಿಂದೆ ಚಿಂತನ ಮಾಡುತ್ತಿದ್ದ ರೀತಿಗಿಂತ ಈಗ ಮಾಡುವ ಚಿಂತನೆ ಭಿನ್ನವಾಗಿದ್ದರೂ, ನಾನು ಕಮ್ಯುನಿಜಮ್‌ನ್ನು ಇಷ್ಟಪಡುವುದಿಲ್ಲ. ನಾನು ಮತ್ತು ಶ್ರೀ ಮಸಾನಿ ಅವರು, ಪರಸ್ಪರ ವಿಚಾರ ವಿನಿಮಯ ಮಾಡಿಕೊಳ್ಳುತ್ತಿದ್ದ ಕಾಲ ಒಂದಿತ್ತು, ಆದರೆ, ಈಚೀಚೆಗೆ ನಾನು ಅವರ ಮಾತನ್ನು ಸ್ವಲ್ಪಮಟ್ಟಿಗೆ ಒಪ್ಪಿಕೊಳ್ಳತೊಡಗಿದ್ದೇನೆ. ಅವರೂ ಇದೇ ಉತ್ಸುಕತೆಯನ್ನು ತೋರಿಸಿದ್ದರೆ ಒಳ್ಳೆಯದಿತ್ತು. ಅವರು ಕಮ್ಯುನಿಷ್ಟರ ವಿಚಾರ ಧಾರೆಯನ್ನು ಇಷ್ಟಪಡದಿರಬಹುದು, ಆದರೆ ಕಮ್ಯುನಿಷ್ಟರನ್ನು ದ್ವೇಷಿಸುವುದು ಸರಿ ಯಲ್ಲವೆಂದು ನಾನು ಹೇಳಬಯಸುತ್ತೇನೆ. ಕಮ್ಯುನಿಷ್ಟರನ್ನು ಬಂಧಿಸಲು ಪ್ರತಿಬಂಧಕ ಸ್ಥಾನಬದ್ಧತೆ ಕಾಯ್ದೆಯು ಅವಶ್ಯಕವಾಗಿದೆ ಎಂದು ಹೇಳುವುದು ಸರಿಯಾಗಲಾರದು. ಕಮ್ಯುನಿಷ್ಟರ ಬಗ್ಗೆ ನಿಮ್ಮ ಮನದಲ್ಲಿ, ಮನೆಯಲ್ಲಿ ಎಡೆಯಿಲ್ಲದಿರಬಹುದು, ಆದರೆ ಕಮ್ಯುನಿಷ್ಟರನ್ನು ಬಂಧಿಸುವಷ್ಟುಮಟ್ಟಿಗೆ ಅವರನ್ನು ದ್ವೇಷಿಸಕೂಡದು, ಇವೆರಡರ ನಡುವೆ ಬಹಳ ವ್ಯತ್ಯಾಸವಿದೆ.

ಕಮ್ಯುನಿಷ್ಟರು ತಳೆದ ನಿಲುವಿಗೆ ಸಂಬಂಧಿಸಿದ ಈ ವಿಷಯದಲ್ಲಿ ಶ್ರೀ ತ್ರಿವೇದಿಯವರನ್ನು ನಾನು ಶ್ಲಾಘಿಸಬಯಸುತ್ತೇನೆ. ಸರ್ಕಾರದ ರಾಗಕ್ಕೆ ತಕ್ಕಂತೆ ಕಮ್ಯುನಿಷ್ಟರು ಯಾವ ರೀತಿ ತಾಳ ಹಾಕುತ್ತಾರೆಂಬ ಬಗ್ಗೆ ನಾನು ಇಲ್ಲಿ ಹೇಳಬಯಸುತ್ತೇನೆ. ನಿನ್ನೆ ದಿನ ಶ್ರೀಮತಿ ರೇಣುಚಕ್ರವರ್ತಿಯವರು, ಸದಸ್ಯರಿಗೆ ಇನ್ನೂ ಹೆಚ್ಚು ಅಧಿಕಾರಗಳು ಅಗತ್ಯ ಎಂಬ ವಿಚಾರಕ್ಕೆ ತಮ್ಮ ಬೆಂಬಲವನ್ನು ನೀಡುವ ಬದಲು, ಸದಸ್ಯರ ಹಕ್ಕುಗಳನ್ನು ಇನ್ನಷ್ಟು ಮೊಟಕುಗೊಳಿಸಲು ಕೋರಿ ಕ್ರಿಯಾಲೋಪ ಎತ್ತಿದ್ದನ್ನು ಕಂಡು ನನಗೆ ದಿಗ್ಭ್ರಮೆಯಾಯಿತು. ಈ ಬಗ್ಗೆ ನನ್ನ ವಿಚಾರವನ್ನು ಮಂಡಿಸಲು ಅವಕಾಶ ಕೊಟ್ಟಿದ್ದರೆ, ಸದಸ್ಯರುಗಳಿಗೆ ಇನ್ನೂ ಹೆಚ್ಚಿಗೆ ಅಧಿಕಾರಗಳನ್ನು ಇರಬೇಕೆಂದು ಪ್ರತಿಪಾದಿಸುವಲ್ಲಿ ನಾನು ಸಫಲನಾಗುತ್ತಿದ್ದೆ. ತರಗತಿಯಲ್ಲಿ ವಿದ್ಯಾರ್ಥಿಗಳಿಗೆ ಉಪನ್ಯಾಸ ನೀಡುತ್ತಿದ್ದಾಗ, ಸಂಸತ್ ಸದಸ್ಯರು ಯಾವ ರೀತಿ ಹೆಚ್ಚು ಅಧಿಕಾರಗಳನ್ನು ಪಡೆದುಕೊಂಡರು ಎಂಬುದಕ್ಕೆ ಇಂಗ್ಲೆಂಡಿನ ಉದಾಹರಣೆಯನ್ನು ನೀಡುತ್ತಿದ್ದ ಆಕೆ, ಈಗ ಸದಸ್ಯರಿಗೆ ಹೆಚ್ಚು ಅಧಿಕಾರಗಳು ಬೇಕಾಗಿಲ್ಲ ಎಂದು ಹೇಳುತ್ತಿರುವುದು ನಿಜಕ್ಕೂ ಆಶ್ಚರ್ಯಕರ.

..........ಆದ್ದರಿಂದ, ಸರ್ಕಾರದಲ್ಲಿ ಹಾಗೂ ಆಡಳಿತದಲ್ಲಿ ಅಶಿಸ್ತು ಅತ್ಯಂತ ಆಳವಾಗಿ ಬೇರೂರಿ ಬಿಟ್ಟಿದೆ ಎಂಬುದನ್ನು ನಾನಿಲ್ಲಿ ಒತ್ತಿಹೇಳಬಯಸುತ್ತೇನೆ. ಕಾಯಿದೆ ಕಾನೂನುಗಳ ಬಗ್ಗೆ ಅವರಿಗೆ ಎಳ್ಳಷ್ಟೂ ಕಾಳಜಿ ಇಲ್ಲ. ಅವರು ಅವುಗಳನ್ನು ಪಾಲಿಸುವುದೂ ಇಲ್ಲ. ಅಥವಾ ಒಂದಲ್ಲ ಒಂದು ರೀತಿಯಲ್ಲಿ, ಹೇಗಾದರೂ ಮಾಡಿ ದೇಶದಲ್ಲಿ ಸ್ಥಿರತೆಯನ್ನು ಅವರು ಕಾಪಾಡಿಕೊಂಡು ಬರಲು ಪ್ರಯತ್ನಿಸಬೇಕೆಂದು ಹೇಳುವ ಪ್ರವೃತ್ತಿ ದೇಶಾದ್ಯಂತ ಹಬ್ಬಿಕೊಂಡಿದೆ. ಆದರೆ, ಈ ಸ್ಥಿರತೆ ಯಾವುದೆಂಬುದನ್ನು ತಿಳಿಯಲು, ವಾಸ್ತವವಾಗಿ ನೀವು 1000-1500 ವರ್ಷಗಳ ಚರಿತ್ರೆಯ ಪುಟಗಳನ್ನು ಅವಲೋಕಿಸಬೇಕಾಗುತ್ತದೆ. ಭಾರತ ಜಡವೆನ್ನುವಷ್ಟುಮಟ್ಟಿಗೆ ಸ್ಥಿರವಾಗಿದೆ. ಈ ಸ್ಥಿತಿ, ಭಾತವನ್ನು ಅ ಜೀವದ ಸ್ಥಿತಿಗೆ ತಂದಿದೆ. ನಾನು 'ಅರೆ ಜೀವ' ಎಂಬ ಪದವನ್ನು ಅದರ ಸ್ಥೂಲ ಅರ್ಥದಲ್ಲಿ ಬಳಸಿದ್ದೇನೆ. ಏಕೆಂದರೆ ವಾಸ್ತವವಾಗಿ ನಮ್ಮ ದೇಶ ಪೂರ್ಣವಾಗಿ ನಿರ್ಜೀವವಾಗಿದೆ. ಕಳೆದ 1000-1500 ವರ್ಷಗಳಲ್ಲಿ ದೇಶೀಯ ನಿರಂಕುಶ ಪ್ರಭುಗಳ ವಿರುದ್ಧ ಒಮ್ಮೆಯಾರೂ ಸಿಡಿದೆದ್ದಿಲ್ಲ. ನಿರಂಕುಶತೆಯ ವಿರುದ್ಧ ಪ್ರತಿಭಟಿಸಿದ್ದರೂ ಅದು ವಿದೇಶೀ ಆಕ್ರಮಣಕಾರರ ಅಥವಾ ವಿದೇಶೀ ಪ್ರಭುತ್ವದ ವಿರುದ್ಧ ಮಾತ್ರ. ಆದರೆ ಆಂತರಿಕ ದೌರ್ಜನ್ಯ, ಅನ್ಯಾಯಗಳನ್ನು ಈ ದೇಶದ ಜನರು ಎಂದಿಗೂ ಪ್ರತಿಭಟಿಸಿಲ್ಲ. 'ಜಡವೆನ್ನುವಷ್ಟು ಮಟ್ಟಿಗೆ ಸ್ಥಿರತೆ ಸಾಧಿಸಲು ಹೋಗಬೇಡಿ. ಈ ಸಂದರ್ಭದಲ್ಲಿ ನಾನು ಒಂದು ಮಾತನ್ನು ಹೇಳಬೇಕಾಗಿದೆ. ಜನಸಮುದಾಯದಲ್ಲಿ ಸ್ಥಿರತೆ ಅಪೇಕ್ಷಣೀಯ, ಆದರೆ ಈ ಜನಸಮುದಾಯ ನಿರ್ಜೀವ ಜನಸಮುದಾಯವಾಗಿದೆ. ನಾವೀಗ ಈ ಜನ ಸಮುದಾಯವನ್ನು ಸಚೇತನಗೊಳಿಸಬೇಕಾಗಿದೆ. ಅವರನ್ನು ಕ್ರಿಯಾಶೀಲರನ್ನಾಗಿಯೂ ಚಲನಶೀಲರನ್ನಾಗಿ ಮಾಡಬೇಕಾಗಿದೆ. ಇದಕ್ಕಾಗಿ ಅವರು ಸ್ವಲ್ಪಮಟ್ಟಿಗೆ ಪರ್ಯಾಯ ಮಾರ್ಗವನ್ನು ಅನುಸರಿಸಬಯಸಿದರೆ, ಅನುಸರಿಸಲಿ, ಇದು ಅವರಲ್ಲಿ ನವಚೈತನ್ಯವನ್ನು ತರುತ್ತದೆ. ಈ ಪರ್ಯಾಯ ಮಾರ್ಗ ಅಥವಾ ಕ್ರಾಂತಿಯಮಾರ್ಗ ಯಾವುದು ಆಗಿರಬೇಕು ಎಂಬ ಪ್ರಶ್ನೆ ಉದ್ಭವಿಸುತ್ತದೆ. ಅದು ಹಿಂಸಾತ್ಮಕವಾಗಿರಬೇಕೆ ಅಥವಾ ಅಹಿಂಸಾತ್ಮಕವಾಗಿರಬೇಕೇ? ಇದಕ್ಕೆ ನನ್ನ ಉತ್ತರ ಬಹಳ ಸ್ಪಷ್ಟವಿದೆ. ಹಿಂಸಾತ್ಮಕ ಕ್ರಾಂತಿ, ಪರಿಸ್ಥಿತಿಯನ್ನು ಯಾವಾಗಲೂ ಇನ್ನಷ್ಟು ಉಲ್ಬಣಗೊಳಿಸುವ ಕಾರಣ ಹಿಂಸಾತ್ಮಕವಲ್ಲದ ಕ್ರಾಂತಿಯೇ ಉತ್ತಮ ಮಾರ್ಗ. ಆದ್ದರಿಂದ ಮಾನ್ಯ ಗೃಹಮಂತ್ರಿಗಳು, ಸಿಟ್ಟಿಗೇಳದೆ ತಮ್ಮ ವಾದವನ್ನು ನಮ್ರತೆಯಿಂದ ಮಂಡಿಸಬೇಕೆಂದು ನಾನು ಕೇಳಿಕೊಳ್ಳುತ್ತೇನೆ.

ಅವರು ಕೆಲವು ವಿಷಯಗಳ ಬಗ್ಗೆ ಗಮನಹರಿಸುವುದು ಸೂಕ್ತ. ಅವರು ತುವಾಡುವ ಮಾತುಗಳ ಬಗ್ಗೆ ಗಮನಕೊಟ್ಟರಷ್ಟೇ ಸಾಲದು, ತಮ್ಮ ಯೋಚನಾ ಸರಣಿಯ ಬಗ್ಗೆಯೂ ಗಮನಹರಿಸಬೇಕು. ಅದೇನೇ ಇರಲಿ, ನಾನು ಈಗ ಹೇಳುತ್ತಿದ್ದುದೇನೆಂದರೆ, ಅವರು ಇಂಥ ಅರಾಜಕ ಪರಿಸ್ಥಿತಿಯ ಬಗ್ಗೆ ಗಾಬರಿಯಾಗುವ ಕಾರಣವಿಲ್ಲ. ಜನ

ಸಮುದಾಯದಲ್ಲಾಗಲಿ ಸರ್ಕಾರದಲ್ಲಾಗಲಿ ಅರಾಜಕ ಪರಿಸ್ಥಿತಿ ಇದ್ದಾಗ ಅವರು ಹತಾಶರಾಗಬಾರದು. ಯಾವುದೇ ಅಸಮಾಧಾನದಿಂದಾಗಿ ಜನರು ಕಲ್ಲೆಸೆಯುವ, ಬೆಂಕಿಯಿಡುವ ಅಥವಾ ಪುಂಡಾಟಿಕೆಯ ಕೆಲಸಗಳಲ್ಲಿ ತೊಡಗಿದರೆ, ಸರ್ಕಾರಕ್ಕೆ ಬಲವನ್ನು ಪ್ರಯೋಗಿಸುವ ಮುಕ್ತ ಅವಕಾಶವಿದೆ. ಆದರೆ, ಸಮಾಜವನ್ನು ಪರಿವರ್ತಿಸಿ ದೇಶವನ್ನು ಇನ್ನಷ್ಟು ಬಲಿಷ್ಠಗೊಳಿಸುವುದಕ್ಕಾಗಿ ಕಾನೂನನ್ನು ಉಲ್ಲಂಘಿಸುವ ಮೂಲಕ ಸತ್ಯಾಗ್ರಹ ಮಾರ್ಗವನ್ನು ಅನುಸರಿಸುವ ನನ್ನಂಥವರಿಗಾಗಿ ಸರ್ಕಾರ ಬೇರೆಯೇ ಕ್ರಮಗಳನ್ನು ಅನುಸರಿಸಬೇಕಾಗುತ್ತದೆ. ಏಕೆಂದರೆ ದೇಶದ ಒಳಗೇ ಇರುವ ನಿರಂಕುಶ ಆಡಳಿತಗಾರರ ವಿರುದ್ಧದ ಹೋರಾಟವನ್ನು ಮುಂದುವರಿಸಿದರೆ ಹೊರಗಿನ ಆಕ್ರಮಣವನ್ನೂ ಎದುರಿಸಲು ಸಮರ್ಥರಾಗುತ್ತೇವೆ ಎನ್ನುವುದು ನನ್ನ ಅಭಿಪ್ರಾಯ.

ಮಾನ್ಯ ಸಭಾಧ್ಯಕ್ಷರೇ, ನನಗೆ ಸಂಬಂಧಿಸಿದಂತೆ ಒಂದು ವಿಷಯವನ್ನು ಸ್ಪಷ್ಟಪಡಿಸಬಯಸುತ್ತೇನೆ. ಏಕೆಂದರೆ ನಾನೊಬ್ಬ ಅತ್ಯಂತ ಹತಾಶ ವ್ಯಕ್ತಿಯೆಂದು ನನ್ನ ಬಗ್ಗೆ ಜನರಲ್ಲಿ ತಪ್ಪು ತಿಳಿವಳಿಕೆ ಬೇರೂರಿದೆ. ಈ ಸರ್ಕಾರ ಬಹಳ ಕ್ರೂರವಾಗಿದೆ. ಆದರೂ ಅದನ್ನು ಕಿತ್ತೆಸೆಯಲು ಸಾಧ್ಯವಿಲ್ಲದಷ್ಟು ನಾವು ಅಸಮರ್ಥರಾಗಿದ್ದೇವೆ ಎಂಬ ಮಾತನ್ನು ಅನೇಕ ಸಲ ನಾನು ಈ ಸದನದಲ್ಲಿ ಹೇಳಿದ್ದೇನೆ. ಇವೆಲ್ಲ ವಿಷಮ ಪರಿಸ್ಥಿತಿಗಳಿದ್ದರೂ ಸಹ, ಈ ಸರ್ಕಾರವನ್ನು ಬದಲಾಯಿಸುವ ದಿಸೆಯಲ್ಲಿನ ನನ್ನ ಹೋರಾಟವನ್ನು ಮುಂದುವರಿಸುತ್ತಿರುವುದು ನನ್ನ ವಿಶ್ವಾಸವನ್ನು ಪ್ರತಿಬಿಂಬಿಸುತ್ತದೆ. ಈ ಸರ್ಕಾರ ಉರುಳುವುದೆಂಬ ಬಗ್ಗೆ ಕೇವಲ ಆಶಾಭಾವನೆಯಲ್ಲ, ವಿಶ್ವಾಸವೂ ನನಗಿದೆ. 22ನೇ ಅನುಚ್ಛೇದವನ್ನು ಉಲ್ಲಂಘಿಸಿ, ಪ್ರತಿಬಂಧಕ ಸ್ಥಾನಬದ್ಧತೆ ಕಾಯ್ದೆಯನ್ನು ಮತ್ತೆ ಭಾರತೀಯ ದಂಡ ಸಂಹಿತೆಯ ವ್ಯಾಪ್ತಿಗೊಳುಪಡಿಸುತ್ತಿರುವ ಈ ಸಂದರ್ಭದಲ್ಲಿ ಯಾವುದೇ ಕ್ರಾಂತಿಯ ಹೊರತಾಗಿ ರಾಷ್ಟ್ರದ ಪುನರುತ್ಥಾನ ಸಾಧ್ಯವಿಲ್ಲ. ಭಾರತದ ಜನತೆ, ಸದರಿ ಕಾಯ್ದೆಯ ವಿರುದ್ಧ ಕ್ರಾಂತಿಯನ್ನು ಘೋಷಿಸುವರೆಂಬ ವಿಶ್ವಾಸ ನನಗಿದೆ. ಏಕೆಂದರೆ ಈ ಗುರಿಯನ್ನು ಸಾಧಿಸಲು ಹಿಂಸಾಮಾರ್ಗವನ್ನು ಅನುಸರಿಸಬೇಕೇ ಅಥವಾ ಅಹಿಂಸಾ ಮಾರ್ಗವನ್ನು ಅನುಸರಿಸಬೇಕೇ ಎಂಬ ಪ್ರಶ್ನೆಗೆ ಕ್ಷಿಪ್ರ ಉತ್ತರದ ಅಗತ್ಯವಿದೆ. ಆತಂಕದ ಛಾಯೆ ನಮ್ಮ ಮನಸ್ಸನ್ನು ಅತಿಯಾಗಿ ಆವರಿಸಿದಂತೆ ನೋಡಿಕೊಳ್ಳಿ, ಏಕೆಂದರೆ ಇದು ದುಷ್ಪರಿಣಾಮಗಳಿಗೆ ಎಡೆಗೊಡುತ್ತದೆ.

ನಮ್ಮ ಮೇಲೆ ಬಲಪ್ರಯೋಗ ಮಾಡಲಾಗಿದೆ ಎಂದು ನಿಮಗೆ ಹೇಳಿದ್ದೆ, ಬಲ ಪ್ರಯೋಗ ಮಾಡಿರುವವರು ನೀವೇ ಆಗಿರುವುದರಿಂದ, ನೀವು ಶಾಂತಚಿತ್ತರಾಗಿರಬೇಕೆಂದು ಹೇಳಿದೆ. ಕೂಗಿಕೂಗಿ ನಮ್ಮ ಅಸಮಾಧಾನವನ್ನು ವ್ಯಕ್ತಪಡಿಸುವ ಹಕ್ಕು ನಮಗಿದೆ. ಬಲಪ್ರಯೋಗ ಮಾಡುವಾಗಲೂ ನೀವು ಶಾಂತಚಿತ್ತರಾಗಿಯೇ ಇರಿ.

ಆದರೆ ಹಾಗೆ ಮಾಡುವಾಗ ನೀವೇನು ಮಾಡುತ್ತಿದ್ದೀರೋ ಅದನ್ನು ಕಾನೂನಿಗನುಸಾರವಾಗಿ ಮಾಡಲಾಗುತ್ತದೆಯೇ ಎಂದುದನ್ನು ಖಚಿತಪಡಿಸಿಕೊಳ್ಳಿ. ಪ್ರತಿಬಂಧಕ ಸ್ಥಾನಬದ್ಧತೆ ಕಾಯ್ದೆಯು ಕಾನೂನಿಗನುಸಾರವಾಗಿಲ್ಲದಿರುವುದರಿಂದ ಇದನ್ನು ರದ್ದುಗೊಳಿಸಬೇಕು. ಹೀಗೆ ಮಾಡಿದ್ದಾದರೆ, ನಿಮ್ಮ ಮುಂದೊಂದು ಲಕ್ಷ್ಮಣ ರೇಖೆಯನ್ನು ಕಾಣುವಿರಿ. ಅದು ನಿಮ್ಮ ಅಧಿಕಾರವ್ಯಾಪ್ತಿಯ ಇತಿಮಿತಿಯನ್ನು ನಿಮಗೆ ಜ್ಞಾಪಿಸುವುದರಿಂದ ನೀವದನ್ನು ದಾಟಿ ಹೋಗಲಾರಿರಿ. ನಿಮ್ಮ ನಡತೆ, ನಿಮ್ಮ ವಿಚಾರಧಾರೆ, ಹಾಗೂ ನಿಮ್ಮ ಕಾರ್ಯಗಳು ಪರಿವರ್ತನೆಗೆ ಒಳಗಾಗುತ್ತವೆ. ನೀವು ಪ್ರತಿದಿನವೂ ''ಮರ್ಯಾದಾ ಪುರುಷೋತ್ತಮನ''_ಹೆಸರನ್ನು ಜಪಿಸಿತ್ತಿರುತ್ತಿರುತ್ತೀರಿ. 21 ಮತ್ತು 22ನೇ ಅನುಚ್ಛೇದಗಳಿಗೂ ತಮ್ಮದೇ ಆದ 'ಮರ್ಯಾದೆ' (ಪಾವಿತ್ರ್ಯ )ಇದೆ. ಭಾರತದ ಪ್ರಜೆಗಳು ಸ್ವತಂತ್ರವಾಗಿ ಜೀವಿಸಿದರಷ್ಟೇ ಸಾಲದು, ತಮಗೆ ಸದಾಕಾಲ ರಕ್ಷಣೆ ಇದೆಯೆನ್ನುವ ಬಗ್ಗೆ ಅವರಿಗೆ ಭರವಸೆ ಇರಬೇಕು. ಭಾರತಕ್ಕೆ ಸ್ವಾತಂತ್ರ್ಯ ಬಂದ ನಂತರ, ಈ ಹಿಂದೆ ಬ್ರಿಟಿಷರು ನನ್ನನ್ನು ಪುನಃ ಪುನಃ ಬಂಧಿಸುತ್ತಿದ್ದ ರೀತಿಯಲ್ಲಿ ಮತ್ತೆ ನನ್ನನ್ನು ಬಂಧಿಸಲಿಕ್ಕಿಲ್ಲ, ಎಂದು ನಾನು ಭಾವಿಸಿದ್ದೆ. ಆದರೆ, ಆ ಭಾವನೆ ಈಗ ಹುಸಿಯಾಗಿದೆ. ಎರಡು ಮೂರು ದಿವಸಗಳ ಹಿಂದೆ, ಶ್ರೀ ಜಾರ್ಜ್ ಫೆರ್ನಾಂಡಿಸ್ ಅವರನ್ನು ಪ್ರತಿಬಂಧಕ ಸ್ಥಾನಬದ್ಧತೆ ಕಾಯ್ದೆ ಅಡಿಯಲ್ಲಿ ಬಂಧಿಸಿ ತರುವಾಯ ಬಿಡುಗಡೆ ಮಾಡಲಾಯಿತು. ಇದಕ್ಕಾಗಿ ನಾನು ಗೃಹ ಮಂತ್ರಿಗಳನ್ನು ಅಭಿನಂದಿಸಬೇಕೆಂದು ಇಚ್ಛಿಸಿದರೂ ಅವರು ಹೇಗೆ ಬಿಡುಗಡೆಯಾದರೆಂಬ ಬಗ್ಗೆ ನಾನು ಏನನ್ನೂ ಹೇಳಲು ಇಚ್ಛಿಸುವುದಿಲ್ಲ. 25-30 ಸಾವಿರ ಜನರು ಅವರನ್ನು ಸ್ವಾಗತಿಸಲು ಸ್ಟೇಷನ್ನಿಗೆ ಹೋಗಿದ್ದರು. ಈ ಸ್ವರೂಪದ ಸ್ವಾಗತ ದೇಶಭಕ್ತರಿಗೆ ಮಾತ್ರ ಲಭಿಸುತ್ತದೆ. ಇಂಥದೇ ಇನ್ನೊಂದು ಪ್ರಕರಣ, ಜೈಲಿನಲ್ಲಿ ಬಂಧಿಸಿಟ್ಟಿರುವ ದರ್ಭಾಂಗ್‌ನ ಕೈಫಿ ಅಹಮ್ಮದ್ ಕೈಫಿ ಅವರದು. ಅವರನ್ನೇಕೆ ಬಂಧನದಲ್ಲಿ ಇಡಲಾಗಿದೆ? ಅವರನ್ನು ಜೈಲಿನಲ್ಲಿ ಇಟ್ಟಿದ್ದಕ್ಕೆ ಕಾರಣ ಇಷ್ಟೇ, ಈ ಸದನದ ಮಾನ್ಯ ಸದಸ್ಯರೊಬ್ಬರು ಅಧ್ಯಕ್ಷರಾಗಿರುವ ಒಂದು ಕಂಪನಿಗೆ, ಮಣ್ಣು ತೆಗೆಯುವ ಕಾಮಗಾರಿಗಾಗಿ ಸರ್ಕಾರ 110-00 ರೂ. ದರದಲ್ಲಿ ಹಣ ಸಂದಾಯ ಮಾಡುತ್ತದೆ. ಅವರು ಆ ಕಾಮಗಾರಿಯನ್ನು ಪುನಃ ಪಡೆದುಕೊಳ್ಳಲು ಸರ್ವ ಪ್ರಯತ್ನಗಳನ್ನು ಮಾಡುತ್ತಿದ್ದಾರೆ. ಮಣ್ಣು ತೆಗೆಯುವ ಕೆಲಸಕ್ಕಾಗಿ ಕಾರ್ಮಿಕರಿಗೆ ಕೇವಲ 40-50 ರೂ. ಗಳನ್ನು ಕೊಡಲಾಗುತ್ತಿದೆ. ಈ ಉದ್ದೇಶಕ್ಕಾಗಿ ಪ್ರತಿಬಂಧಕ ಸ್ಥಾನಬದ್ಧತೆ ಕಾಯ್ದೆಯನ್ನು ಬಳಸಲಾಗುತ್ತದೆ. ಆದ್ದರಿಂದ ಈ ವಿಷಯವನ್ನು ಗಂಭೀರವಾಗಿ ಪರಿಗಣಿಸಬೇಕೆಂದು ಮತ್ತು ಪ್ರತಿಬಂಧಕ ಸ್ಥಾನಬದ್ಧತೆ ಕಾಯ್ದೆಯನ್ನು ಹಿಂತೆಗೆದುಕೊಳ್ಳಬೇಕೆಂದು ನಾನು ವಿನಂತಿಸಿಕೊಳ್ಳುತ್ತೇನೆ.

-:=:=:-

# 9. ಭ್ರಷ್ಟಾಚಾರ

ದುರ್ನಡತೆ ಮತ್ತು ಭ್ರಷ್ಟಾಚಾರ, ಇವೆರಡೂ ಪರ್ಯಾಯ ಪದಗಳೇ ಆಗಿವೆ. ಈ ವಿಷಯವನ್ನು ಚರ್ಚಿಸುವಾಗ, ಉನ್ನತ ಹಂತದಲ್ಲಿ ಭ್ರಷ್ಟಾಚಾರ ಬೇರೂರಿದ್ದಾಗ, ಕೆಳಹಂತದಲ್ಲಿ ಅವನ್ನು ನಿರ್ಮೂಲನೆ ಮಾಡಹೊರಟರೆ ಅದು ಸೂಕ್ತ ಕ್ರಮವಾಗುತ್ತದೆಯೇ ಎಂಬುದನ್ನು ಪರಿಶೀಲಿಸಬೇಕಾಗುತ್ತದೆ. ಉನ್ನತಮಟ್ಟದಲ್ಲಿ ಭ್ರಷ್ಟಾಚಾರ ಕುರಿತು ಚರ್ಚಿಸುವಾಗ ಮಾನ್ಯ ಸದಸ್ಯರು, ಅತ್ಯಂತ ಸಂಯಮವನ್ನು ತೋರಬೇಕೆಂದು ನಾನು ವಿನಂತಿಸಿಕೊಳ್ಳುತ್ತೇನೆ. ಅವರ ಅಸಮಾಧಾನ ನನ್ನ ವಿರುದ್ಧವಾಗಿರದೇ ಪ್ರಸ್ತುತ ಭಾರತದಲ್ಲಿ ಇರುವಂಥ ಹೊಲಸು ಪರಿಸ್ಥಿತಿಯ ವಿರುದ್ಧವಾಗಿರಬೇಕು. ನಾನು ಸಂಯಮ ತೋರಲುಪ್ರಯತ್ನಿಸುತ್ತೇನೆ . ಇತರ ಮಾನ್ಯ ಸದಸ್ಯರು ಕೂಡ ಇದೇ ರೀತಿ ಸಂಯಮ ತೋರಿಸಬೇಕು ಮತ್ತು ಈ ವಿಷಯದಲ್ಲಿ ಭಾವೋದ್ರೇಕಕ್ಕೆ ಒಳಗಾಗದೆ ಮುಕ್ತ ಮನಸ್ಸಿನಿಂದ ಚರ್ಚಿಸಬೇಕು. ನನ್ನ ಮಾತುಗಳನ್ನು ಅನ್ಯಥಾ ಭಾವಿಸದೇ, ಭ್ರಷ್ಟಾಚಾರದ ಈ ಪೀಡೆಯನ್ನು ನಿರ್ಮೂಲನೆ ಮಾಡುವ ಬಗ್ಗೆ ವಿಚಾರ ಮಾಡಬೇಕು.

ಉನ್ನತ ವಲಯದಲ್ಲೇ ಭ್ರಷ್ಟಾಚಾರವಿದೆ ಎಂದು ನಾನು ಈ ಹಿಂದೆ ಹೇಳಿದ್ದೆ. ಸ್ವೇಚ್ಛಾನುಸಾರ ಆಡಳಿತ ನಡೆಸುತ್ತಿರುವುದರಿಂದ ಭಾರತದಲ್ಲಿ ಕಾನೂನೇ ಇಲ್ಲವೆನ್ನಬಹುದು. ಸೂಕ್ತ ನಿಯಮಗಳಿಲ್ಲ, ಇದ್ದರೂ ಅವುಗಳನ್ನು ಸೂಕ್ತವಾಗಿ ಜಾರಿಗೊಳಿಸಲಾಗುತ್ತಿಲ್ಲ. ಇದರಿಂದಾಗಿ ಸರ್ಕಾರದ ಪ್ರತಿಯೊಂದು ಕಾರ್ಯದಲ್ಲೂ ಪಕ್ಷಪಾತ ಮನೋಭಾವವನ್ನು ಕಾಣಬಹುದಾಗಿದೆ. ಈ ಪಕ್ಷಪಾತದ ಪರಿಣಾಮದಿಂದಾಗಿ ಯಾರಿಗಾದರೂ ಆರ್ಥಿಕ ಪ್ರಯೋಜನ ದೊರೆಯುವುದೇ ಇಲ್ಲವೆ ಎಂಬುದು ಗೌಣ ವಿಷಯ. ಪಕ್ಷಪಾತ, ಮನಸೋ ಇಚ್ಛೆ ಕಾರ್ಯನಿರ್ವಹಣೆ, ಲಂಚಗುಳಿತನ ಮತ್ತು ನಿಯಮಗಳ ಉಲ್ಲಂಘನೆ - ಇವೆಲ್ಲವನ್ನೂ ಭ್ರಷ್ಟಾಚಾರವೆಂದೇ ಪರಿಗಣಿಸಬೇಕು.

ಭ್ರಷ್ಟಾಚಾರದಲ್ಲಿ ಬೇರೇನೆಲ್ಲಾ ಸೇರುತ್ತದೆ ? ಅಪ್ರಾಮಾಣಿಕತೆಯಷ್ಟೇ ಭ್ರಷ್ಟಾಚಾರವಲ್ಲ, ಪರಿಜ್ಞಾನದ ಕೊರತೆಯೂ ಭ್ರಷ್ಟಾಚಾರವೇ ಆಗಿದೆ. ಜನರು ಅಪ್ರಾಮಾಣಿಕತೆಯನ್ನು ಮಾತ್ರ ಭ್ರಷ್ಟಾಚಾರವೆಂದು ಪರಿಗಣಿಸುತ್ತಾರೆಂಬ ಅಂಶ ನನಗೆ ಸಂಸತ್‌ನಲ್ಲಿ ಕಂಡುಬಂದಿದೆ. ಅಪ್ರಾಮಾಣಿಕತೆ, ಮನವರಿಕೆಯ ಕೊರತೆ ಸಹ ಭ್ರಷ್ಟವಾಗಿದೆ ಎಂದು ನಾನು ಹೇಳಬಯಸುತ್ತೇನೆ. ಭಾರತವನ್ನು ಮತ್ತು ಇಡೀ ವಿಶ್ವವನ್ನು ವ್ಯಾಪಿಸಿರುವ ಸನ್ನಿವೇಶವನ್ನು ನಾವು ಗ್ರಹಿಸದಿದ್ದರೆ ಹಾಗೂ ಭ್ರಷ್ಟಾಚಾರಕ್ಕೆ ಅನುವು ಮಾಡಿಕೊಡುವ ಪರಿಸ್ಥಿತಿಗಳು ಯಾವುವೆಂದು ಮತ್ತು ಭ್ರಷ್ಟಾಚಾರದ ಅಸ್ತಿತ್ವಕ್ಕೆ ಕಾರಣಗಳೇನು ಎಂಬುದನ್ನು ತಿಳಿದುಕೊಳ್ಳಲು ಯತ್ನಿಸದಿದ್ದರೆ ಹಾಗೂ ಭ್ರಷ್ಟಾಚಾರದ ಕ್ಷೇತ್ರಗಳನ್ನು ಗುರುತಿಸದಿದ್ದರೆ

ಅದನ್ನು ನಿರ್ಮೂಲನಗೊಳಿಸಲು ನಮಗೆ ಸಾಧ್ಯವಿಲ್ಲ. ಸರ್ಕಾರವು ಭ್ರಷ್ಟಾಚಾರದ ಸಮಸ್ಯೆಯನ್ನು ಇನ್ನೂ ಅರಿತುಕೊಂಡಂತಿಲ್ಲ ಎಂಬುದು ನನ್ನ ಅಭಿಪ್ರಾಯ. ಏಕೆಂದರೆ ಭ್ರಷ್ಟಾಚಾರವನ್ನು ನಿರ್ಮೂಲನಗೊಳಿಸುವ ದೃಷ್ಟಿಯಿಂದ ಸರ್ಕಾರವು ಕೇಂದ್ರ ಜಾಗೃತ ಆಯೋಗವೆಂಬ ಸಂಸ್ಥೆಯನ್ನು ಸ್ಥಾಪಿಸಲು ಹೊರಟಿದೆ. ಹಾಂಗದರೇನು? ಕೇಂದ್ರ ಜಾಗೃತ ಆಯೋಗವು ಭ್ರಷ್ಟಾಚಾರದ ಕ್ಷೇತ್ರಗಳನ್ನು ಗುರುತಿಸಿ ಅದನ್ನು ತಡೆಯುತ್ತದೆ ಎಂದೇ ಅರ್ಥ? ಪ್ರಾಯಶಃ ಇದೊಂದು ಪರಿಹಾರ ಆಗಬಹುದು. ಈಗಾಗಲೇ ಘಟಿಸಿರುವಂಥ ಅಪರಾಧಕ್ಕೆ ದಂಡನೆ ವಿಧಿಸುವ ಮಾರ್ಗ ಇದಾಗಿದೆ. ಆದರೆ ಭ್ರಷ್ಟಾಚಾರ ತಡೆಯುವುದಕ್ಕೆ ಸಂಬಂಧಿಸಿದಂತೆ ಯಾವುದೇ ಪರಿಹಾರದ ಕುರಿತು ಸರ್ಕಾರವು ಈವರೆಗೆ ಆಲೋಚಿಸಿಲ್ಲ.

ಭ್ರಷ್ಟಾಚಾರವನ್ನು ತಡೆಗಟ್ಟುವುದು ಒಂದು ಮಾರ್ಗವಾದರೆ, ಭ್ರಷ್ಟಾಚಾರದ ಸಮಸ್ಯೆಗೆ ಪರಿಹಾರ ಕಂಡುಕೊಳ್ಳುವುದು ಇನ್ನೊಂದು ಮಾರ್ಗವಾಗಿದೆ. ಕೇಂದ್ರ ಜಾಗೃತ ಆಯೋಗದ ಉದ್ದೇಶ ಭ್ರಷ್ಟಾಚಾರವೆಂಬ ಈ ಮಾರಕ ವ್ಯಾಧಿಯನ್ನು ತಡೆಯುವುದಾಗಿರದೆ ಆ ಸಂಬಂಧದಲ್ಲಿ ಕೇವಲ ಪರಿಹಾರ ಕಂಡುಕೊಳ್ಳುವುದಷ್ಟೇ ಆಗಿದೆ ಎಂಬುದು ನಾನು ಮೊತ್ತ ಮೊದಲಿಗೆ ಹೇಳಬಯಸುವ ಅಂಶ. ಆದರೆ, ಈ ಯತ್ನ ವಿಫಲವಾಗುವುದು ಖಂಡಿತ. ಈ ವೈಫಲ್ಯಕ್ಕೆ ಪ್ರಮುಖ ಕಾರಣವೇನೆಂದು ಹೇಳುತ್ತೇನೆ. ಪ್ರಭಾವಿ ವ್ಯಕ್ತಿಗಳು ಈ ಭ್ರಷ್ಟಾಚಾರದ ಬಲೆಗೆ ಬಿದ್ದಾಗಲೆಲ್ಲ ಸುಲಭವಾಗಿ ಇದರಿಂದ ನುಣುಚಿಕೊಳ್ಳುತ್ತಾರೆ ಮತ್ತು ಸಾಮಾನ್ಯ ಜನರು ಮಾತ್ರವೇ ದಂಡನೆಗೆ ಗುರಿಯಾಗುತ್ತಾರೆ. ಆದ್ದರಿಂದ, ಪರಿಹಾರ ಕ್ರಮವಾಗಿದ್ದರೂ ಸಹ ಇದು ವಿಫಲವಾಗುತ್ತದೆ. ಭ್ರಷ್ಟಾಚಾರ ತಡೆಗಟ್ಟುವ ಪ್ರಶ್ನೆಗೆ ಸಂಬಂಧಿಸಿದಂತೆ ಮಾನ್ಯ ಗೃಹಮಂತ್ರಿಗಳು ಗಮನಹರಿಸಿದಂತಿಲ್ಲ.

ಮತ್ತೊಂದು ಸಂಗತಿಯನ್ನು ನಾನು ತಮಗೆ ತಿಳಿಸಬಯಸುತ್ತೇನೆ. ಭಾರತದಲ್ಲಿಂದು, ಇತರರ ಹೆಸರಿನಲ್ಲಿ ಶಿಕ್ಷೆಗೊಳಗಾಗುವುದಕ್ಕೆ, ಕಣ್ಣಿಗೆ ಯಣ್ಣೆರಚುವುದಕ್ಕೆ ಆಸ್ಪದ ಕೊಡುವ ವಿಧಾನಗಳು ರೂಪಿತವಾಗಿವೆ. ಜನರು ಕಳ್ಳಬಟ್ಟಿ ಪ್ರಕರಣಗಳಲ್ಲಿ ಬಂಧನಕ್ಕೊಳಗಾದಾಗ, ಕಳ್ಳ ಭಟ್ಟಿ ಸಾರಾಯಿ ತಯಾರಿಕೆಯಲ್ಲಿ ತೊಡಗಿದ ಜನರು, ಪೋಲೀಸರು ಹಾಗೂ ಮಾನ್ಯ ಸಚಿವರನ್ನು ಸಮಾಧಾನಪಡಿಸುವ ದೃಷ್ಟಿಯಿಂದ ತಮ್ಮವರೇ ಆದ ಕೆಲವು ಜನರನ್ನು ಬಂಧನ ಕ್ಕೊಳಗಾಗಲು ಕಳುಹಿಸಿಕೊಟ್ಟು, ತಮ್ಮ ಅಕ್ರಮ ವ್ಯಾಪಾರವನ್ನು ಮುಂದುವರಿಸುತ್ತಾರೆ. ಅಗತ್ಯ ಬಿದ್ದರೆ ಇಂಥ ದುಷ್ಟ ಶಕ್ತಿಗಳು ಬೇರೊಬ್ಬರ ಹೆಸರಿನಲ್ಲಿ ಕೆಲವು ವ್ಯಕ್ತಿಗಳು ಬಂಧನ ಕ್ಕೊಳಗಾಗುವಂತೆ ಮಾಡುವ ಮೂಲಕ ಕೇಂದ್ರ ಜಾಗೃತ ಆಯೋಗದ ಚಟುವಟಿಕೆಗಳನ್ನೇ ನಿಷ್ಕ್ರಿಯಗೊಳಿಸಬಹುದು.

ಸಾಧುಸಂತರು ಮತ್ತು ಸಾಮಾಜಿಕ ಸಂಸ್ಥೆಗಳ ಮುಖಂಡರು ಸಾರ್ವಜನಿಕ ಅಭಿಪ್ರಾಯವನ್ನು ರೂಪಿಸುವ ಮೂಲಕ ಈ ಸಮಸ್ಯೆಯನ್ನು ಪರಿಹರಿಸಲು ಮತ್ತು ಭ್ರಷ್ಟಾಚಾರದ ಪಿಡುಗನ್ನು ನಿರ್ಮೂಲನಗೊಳಿಸಲು ನೆರವಾಗಬಹುದೆಂದು ಮಾನ್ಯ ಗೃಹಮಂತ್ರಿಗಳು ನೀಡಿದ ಹೇಳಿಕೆಯತ್ತ ನಾನು ತಮ್ಮ ಗಮನ ಸೆಳೆಯಬಯಸುತ್ತೇನೆ. ನೈತಿಕತೆ ಎಂದರೇನು ? ಅದು ಸಾಧುಸಂತರಿಗೆ ಮಾತ್ರವೇ ಸೀಮಿತವಾಗಿರಬೇಕೆ ? ಸಾಧುಸಂತರು ಜನರಿಗೆ ಜ್ಞಾನೋಪದೇಶವನ್ನು ನೀಡಿ, ಜನರು ಪ್ರಾಮಾಣಿಕತೆಯಿಂದ ಹಾಗೂ ಸತ್ಯಸಂಧತೆಯಿಂದ ಜೀವನ ನಡೆಸಬೇಕೆಂದು, ಒಳ್ಳೆಯದಾಗುತ್ತದೆ ಎಂದು ಹೇಳುವುದಕ್ಕೆ ಏನೂ ಉಳಿದಿಲ್ಲವೆನ್ನುವಷ್ಟರ ಮಟ್ಟಿಗೆ ಇಂದಿನ ನಮ್ಮ ರಾಜಕೀಯ ಮತ್ತು ಆರ್ಥಿಕ ಸ್ಥಿತಿ ಹದಗೆಟ್ಟಿದೆ.

ಸದಾ ಸತ್ಯಸಂಧತೆಯ ಮತ್ತು ಪ್ರಾಮಾಣಿಕತೆಯ ಬಗ್ಗೆ ಮಾತನಾಡುವ ಹಾಗೂ ಜಾತೀಯತೆಯ ವಿರುದ್ಧ ಸೊಲ್ಲೆತ್ತುವ ಮಾನ್ಯ ಸಚಿವರು ಅತಿ ಹೆಚ್ಚಿನ ಪ್ರಯೋಜನವನ್ನು ತಮ್ಮ ಜಾತಿಯ ಜನರಿಗೇ ಒದಗಿಸುವರೆಂಬುದನ್ನು ನಾನು ಹೇಳಬಯಸುತ್ತೇನೆ. ಭಾರತದ ಯಾವ ಮಂತ್ರಿವರ್ಯರುಗಳು ಜಾತೀಯತೆಯ ವಿರುದ್ಧ ಹೆಚ್ಚು ಹೆಚ್ಚು ಮಾತನಾಡುವರೋ ತಮ್ಮ ನಿಜ ಜೀವನದಲ್ಲಿ ಅವರೇ ಜಾತೀಯತೆಯನ್ನು ಅಧಿಕ ಪ್ರಮಾಣದಲ್ಲಿ ಆಚರಿಸುವರೆಂಬುದನ್ನು ನಾನು ಸ್ಪಷ್ಟಪಡಿಸಬಯಸುತ್ತೇನೆ.

ಆದ್ದರಿಂದ, ಇದು ಮನವರಿಕೆಗೆ ಸಂಬಂಧಿಸಿದ ಪ್ರಶ್ನೆಯಾಗಿದ್ದು ಈ ದಿಶೆಯಲ್ಲಿ ನಾನು ಇನ್ನೊಂದು ನಿದರ್ಶನವನ್ನು ತಮಗೆ ನೀಡಬಯಸುತ್ತೇನೆ. ಈ ಹಿಂದೆ ಈ ಪ್ರಸ್ತಾವವನ್ನು ನಾನೇ ಒಪ್ಪಿಕೊಂಡಿದ್ದೆ - ಆದರೆ, ಯಾರೇ ಸಚಿವರಿಗಾಗಲೀ ಅಥವಾ ನೌಕರರಿಗಾಗಲೀ 500 ರೂ. ಗಳಿಗಿಂತ ಹೆಚ್ಚಿಗೆ ಸಂದಾಯ ಮಾಡಕೂಡದೆಂಬ ವಿಚಾರವನ್ನು ಆ ಸಮಯದಲ್ಲಿ ನಾನು ಸ್ಪಷ್ಟವಾಗಿ ಗ್ರಹಿಸಿರಲಿಲ್ಲ. ಆದರೆ ನ್ಯಾಯವಾದಿ, ವೈದ್ಯ, ವ್ಯಾಪಾರಿ ಮತ್ತು ಜಾಗೀರಾದರ ವರಮಾನದ ಮೇಲೆ ಯಾವುದೇ ಪರಿಮಿತಿಯನ್ನು ವಿಧಿಸಿರಲಿಲ್ಲ. ಭ್ರಷ್ಟಾಚಾರ ಎಲ್ಲ ಕ್ಷೇತ್ರಗಳಲ್ಲೂ ರೂಪಿಸುವುದು ಹೇಗೆ? ಭ್ರಷ್ಟಾಚಾರದಲ್ಲಿ ಅಂತರ್ಗತವಾಗಿರುವ ದುರಾಶೆ ಮತ್ತು ಹಣದ ವ್ಯಾಮೋಹವನ್ನು ತಡೆಯುವ ಶಕ್ತಿ ಈ ನೀತಿ ಸಂಹಿತೆಗೆ ಇರುವುದಿಲ್ಲ. ಅವುಗಳ ಪ್ರಬಲ ಪ್ರವಾಹಕ್ಕೆ ಕೊಚ್ಚಿಕೊಂಡು ಹೋಗುತ್ತದೆ. ಆದ್ದರಿಂದ ಯುಕ್ತ ದೃಷ್ಟಿಕೋನದಿಂದ ಈ ವಿಷಯವನ್ನು ಅವಲೋಕಿಸುವುದು ಅಗತ್ಯವಾಗಿದೆ.

ಇದಲ್ಲದೆ, ಭ್ರಷ್ಟಾಚಾರವು ನಮ್ಮ ಜೀವನದ ಒಂದು ಅವಿಭಾಜ್ಯ ಅಂಗವಾಗಿ ಬಿಟ್ಟಿದೆ ಎಂಬ ನಂಬಿಕೆ ಜನರಲ್ಲಿ ಹುಟ್ಟಿಕೊಂಡಿದೆ ಎಂಬ ಸಂಗತಿಯನ್ನು ನಾನು ತಮ್ಮ

ಗಮನಕ್ಕೆ ತರಬಯಸುತ್ತೇನೆ. ''ನನ್ನ ಹಿಂದಿನ ಕಾಂಗ್ರೆಸ್ ಸಹೋದ್ಯೋಗಿಗಳು'' ಎಂಬ ಪದಗಳು ನನ್ನ ನಾಲಿಗೆಯ ತುದಿಯವರೆಗೂ ಬಂದಿದ್ದವು. ಆದರೆ ಕೆಲವು ಸಲ ನನ್ನ ಅಂತರಾತ್ಮ ಎಡುವಿದರೂ ಆ ಪದಗಳನ್ನು ಬಳಸಲು ನನ್ನ ಮನಸ್ಸು ಅನುಮತಿ ನೀಡುವುದಿಲ್ಲ. ಆದ್ದರಿಂದ ನನ್ನ ಸ್ನೇಹಿತರಾದ ತಾವು ಗ್ರಾಮಾಂತರ ಪ್ರದೇಶಗಳಲ್ಲಿ ಚುನಾವಣೆ ಸಮಯದಲ್ಲಿ ಜನರ ಮುಂದೆ ಭಾಷಣ ಮಾಡುವಾಗ ಆಳವಾದ ಚಿಂತನೆ ಮಾಡಬೇಕೆಂದು ತಮ್ಮನ್ನು ನಮ್ರವಾಗಿ ಕೋರುತ್ತೇನೆ. ಜನರು ಸಂತೃಸ್ತರಾಗಿದ್ದಾರೆಂದ ಜನರ ಮುಂದೆಯೇ ಹೇಳುತ್ತಾರೆ. ಜನರಿಗೆ ಸಾಕಷ್ಟು ಸಂಪಾದನೆ ಇದ್ದು, ಈಗ ನಿಮ್ಮ ಹೊಟ್ಟೆ ತುಂಬಿರುವುದಾಗಿ ಜನರನ್ನು ನಂಬಿಸುತ್ತಾರೆ. ಈ ಮಾತನ್ನು ನಂಬಿ ಜನರು ಬರಿ ಹೊಟ್ಟೆಯ ಹಾಗೂ ತುಂಬಾ ಹಸಿದಿರುವ ರಾಜಕೀಯ ಪಕ್ಷಕ ಅಭ್ಯರ್ಥಿಗಳಿಗೆ ತಮ್ಮ ಮತ ಹಾಕಿದ್ದಾದರೆ ಅವರು ತಮ್ಮ ಸ್ವಾರ್ಥ ಸಾಧನೆಯಲ್ಲಿ ನಿರತರಾಗಿ ಭಾರಿ ಆಸ್ತಿ ಗಳಿಕೆಯಲ್ಲಿ ತೊಡಗುತ್ತಾರೆ ಹಾಗೂ ತಮಗೆ ಬೇಕಾದ್ದನ್ನು ಮಾಡಿಕೊಳ್ಳುತ್ತಾರೆ. ತಾವು ಕಾಂಗ್ರೆಸ್ ಪಕ್ಷದ ವಿರುದ್ಧ ಮತ ಹಾಕಿದ್ದಾದರೆ, ಹೊಸ ಸರ್ಕಾರವು ರಾಷ್ಟ್ರದ ಸಂಪನ್ಮೂಲಗಳನ್ನು ನುಂಗಿ ಹಾಕುತ್ತದೆಂಬ ಭಾವನೆ ಗ್ರಾಮೀಣ ಜನರಲ್ಲಿ ಬೇರೂರಿದೆ. ಆದ್ದರಿಂದ, ಜನರಿಗೆ ಯಾವುದೇ ಇತರ ಪರ್ಯಾಯ ವ್ಯವಸ್ಥೆ ಕಂಡುಬಾರದೆ ಭ್ರಷ್ಟ ವ್ಯಕ್ತಿಗಳು ಈ ಸರ್ಕಾರದಲ್ಲಿ ಉಳಿಯಲು ಅನುವು ಮಾಡಿಕೊಟ್ಟಂತಾಗುತ್ತದೆ. ಇದು ನಗೆ ತರುವ ವಿಷಯವಲ್ಲ, ನಾಚಿಕೆ ಪಡಬೇಕಾದ ವಿಷಯ. ದೇಶದಾದ್ಯಂತ ಜನತೆಗೆ ಚುನಾವಣೆಯ ಮೂಲಕ ಭ್ರಷ್ಟಾಚಾರದ ಪಾಠ ಕಲಿಸಲಾಗುತ್ತಿದೆ ಎಂಬ ವಿಷಯ ತಿಳಿದಾಗ ನನಗೆ ಅತೀವ ವ್ಯಥೆಯಾಗುತ್ತದೆ.

ಅಲ್ಲದೆ, ಅರ್ಥ ವ್ಯವಸ್ಥೆಯಲ್ಲಿ ಹಿಂದುಳಿದಿರುವ ರಾಷ್ಟ್ರವೊಂದು ಪ್ರಗತಿಯತ್ತ ಸಾಗುತ್ತಿರುವಾಗ ಹಳೆಯ ಉತ್ಪಾದನಾ ವಿಧಾನಗಳಿಂದಾಗಿ ಕಡಿಮೆ ಉತ್ಪಾದನೆಯ ಸ್ಥಿತಿ ಇರುತ್ತದೆ. ಅಂಥ ಸನ್ನಿವೇಶದಲ್ಲಿ ಭ್ರಷ್ಟಾಚಾರ ಅನಿವಾರ್ಯವಾಗಿಯೆ ತಲೆ ಎತ್ತುವುದೆಂಬ ತತ್ವವನ್ನು ಭಾರತದ ಅರ್ಥಶಾಸ್ತ್ರಜ್ಞರು ಮಂಡಿಸಿದ್ದಾರೆ. ನಾನು ಎಲ್ಲ ವಿಷಯಗಳನ್ನು ಸ್ಪಷ್ಟಪಡಿಸಿದ್ದೇನೆಂಬುದು ನನ್ನ ಅಭಿಪ್ರಾಯವಾಗಿದೆ. ಆದರೆ ಭಾರತದಲ್ಲಿರುವ ಬಹು ಸಂಖ್ಯೆಯ ಜನರ ಇಂಗ್ಲಿಷ್ ಜ್ಞಾನ ತೀರ ಕಡಿಮೆಯಾದ್ದರಿಂದ ಅವರು ಇದನ್ನು ಅಭಿವೃದ್ಧಿಶೀಲ ಅರ್ಥವ್ಯವಸ್ಥೆ ಎಂದು ಕರೆಯುತ್ತಾರೆ. ಅಭಿವೃದ್ಧಿಶೀಲ ಅರ್ಥವ್ಯವಸ್ಥೆಯಲ್ಲಿ ಭ್ರಷ್ಟಾಚಾರ ಇರುತ್ತದೆ ಎಂಬುದು ಅವರ ಅಭಿಪ್ರಾಯ. ಆದರೆ ಈ ವಿಚಾರ ಸರಣಿ ತಪ್ಪು ಎಂಬುದು ನನ್ನ ಅಭಿಪ್ರಾಯ. ದುರ್ಬಲ ಮತ್ತು ಹಿಂದುಳಿದ ಅರ್ಥ ವ್ಯವಸ್ಥೆಯನ್ನು ಸುಧಾರಿಸಬೇಕಾದರೆ ಮತ್ತು ಬಲಗೊಳ್ಳಬೇಕಾದರೆ ಭ್ರಷ್ಟಾಚಾರಕ್ಕೆ ಅವಕಾಶವೇ ಇರಕೂಡದು. ಈ ಅಂಶವನ್ನು ಸ್ಪಷ್ಟಪಡಿಸಲು ಒಂದು ಉದಾಹರಣೆಯನ್ನು ತಮ್ಮ ಮುಂದೆ ಮಂಡಿಸಬಯಸುತ್ತೇನೆ. ಗಾಂಧಿ ವಿಚಾರ ಸರಣಿಯ ಉದಹಾರಣೆ

ನೀಡಬೇಕಾಗಿದ್ದರೂ ನಾನು ರಷ್ಯಾ ದೇಶದ ಉದಾಹರಣೆಯನ್ನು ನೀಡುತ್ತಿದ್ದೇನೆ.

ರಷ್ಯಾದಲ್ಲಿ ಕಳೆದ 40-50 ವರ್ಷಗಳಿಂದಲೂ ಬಳಕೆಯಾಗುತ್ತಿರುವ ವಸ್ತುಗಳ ಗುಣಮಟ್ಟದ ಬಗ್ಗೆ ಆ ದೇಶವು ಎಂದೂ ತಲೆ ಕೆಡಿಸಿಕೊಂಡಿಲ್ಲ. ಅವರು ತಯಾರಿಸುವ ರೇಜರ್ ಮುಖಕ್ಷೌರಕ್ಕೆ ತುಂಬಾ ಒರಟಾಗಿರುತ್ತದೆ ಹಾಗೂ ಅದರಿಂದ ನೋವಾಗುತ್ತದೆ. ರಷ್ಯಾಕ್ಕೆ ಹೋಗಿ ಬಂದ ವಿದೇಶಿ ಪ್ರವಾಸಿಗಳು ಅಲ್ಲಿನ ಬಳಕೆ ವಸ್ತುಗಳ ಗುಣಮಟ್ಟ ತುಂಬಾ ಕಳಪೆಯದಾಗಿರುತ್ತದೆ ಎಂದು ಹೇಳುತ್ತಿದ್ದರು. ಅವರು ತಮ್ಮ ಉತ್ಪಾದನೆಯ ನೆಲೆಗಟ್ಟನ್ನು ಗಟ್ಟಿಗೊಳಿಸುತ್ತಿದ್ದರೇ ಹೊರತು ಬಳಕ್ಕೆ ವಸ್ತುಗಳ ಮೇಲೆ ಹಣವನ್ನು ಪೋಲು ಮಾಡುತ್ತಿರಲಿಲ್ಲ. ಅದೇ ರೀತಿ ನಮ್ಮ ದೇಶದಲ್ಲಿ ಬಳಕೆ ವಸ್ತುಗಳ ಬದಲು ಉತ್ಪಾದನೆಗೆ ಹೆಚ್ಚಿನ ಒತ್ತು ನೀಡಿದ್ದೇ ಆದರೆ ಭ್ರಷ್ಟಾಚಾರ ಈ ಪ್ರಮಾಣದಲ್ಲಿ ಹೆಚ್ಚುತ್ತಿರಲಿಲ್ಲ.

ನಾನು, ಸರ್ಕಾರ ಮತ್ತು ವ್ಯಾಪಾರೋದ್ಯಮಗಳ ನಡುವಿನ ಸಂಬಂಧದ ಕಡೆಗೆ ನಿಮ್ಮ ಗಮನ ಸೆಳೆಯಬಯಸುತ್ತೇನೆ. ಭಾರತದಲ್ಲಿ ಈ ಸಂಬಂಧವು, ಎಷ್ಟೊಂದು ಕಲುಷಿತ, ಭ್ರಷ್ಟ ಮತ್ತು ಅಪ್ರಾಮಾಣಿಕವಾಗಿದೆಯೆಂದರೆ ಬೇರೆಲ್ಲೂ ಹಾಗಾಗಿಲ್ಲ. ವ್ಯಾಪಾರೋದ್ಯಮಗಳ ಮತ್ತು ಸರ್ಕಾರದ ನಡುವಿನ ಸಂಬಂಧವು ಭಾರತದಲ್ಲಿ ವಿಷಮಗೊಂಡಿರುವಷ್ಟು ಅಮೇರಿಕಾ, ಬ್ರಿಟನ್, ಜರ್ಮನಿ ಮುಂತಾದ ರಾಷ್ಟ್ರಗಳಲ್ಲಿ ಆಗಿಲ್ಲ. ನಾನು ವಿಚಾರಸರಣಿಯ ಬದಲು ಒಂದು ಉದಾಹರಣೆಯನ್ನೇ ನೀಡಬಯಸುತ್ತೇನೆ. ನ್ಯಾಷನಲ್ ಮೋಟಾರ್ಸ್ ಎಂಬುದು ಪಂಜಾಬಿನ ಒಂದು ಕಂಪನಿ. ಆ ಕಂಪನಿಯನ್ನು ಸಚಿವರೊಬ್ಬರ ಮಗ ನಡೆಸುತ್ತಾನೆ. ಲೈಸೆನ್ಸ್, ಕೋಟಾ ಮುಂತಾದವುಗಳನ್ನು ಆತ ಸರ್ಕಾರದಿಂದ ಪಡೆಯುತ್ತಾನೆ. ಆತನು ಅಪಾರ ಹಣ ಸಂಗ್ರಹಿಸುತ್ತಿದ್ದಾನೆ. ಈ ಸಂಬಂಧದಲ್ಲಿ ಪ್ರಶ್ನೆ ಎತ್ತಿದಾಗಲೆಲ್ಲ, ನೀವೇಕೆ ಅಂಥ ಉದಾಹರಣೆ ನೀಡುತ್ತೀರಿ, ಪಂಜಾಬಿನ ಮುಖ್ಯಮಂತ್ರಿಯವರು ತಮ್ಮ ಮಗನಿಗೆ ಯಾವುದೇ ಲೈಸೆನ್ಸು ನೀಡುವ ಸಂಬಂಧದಲ್ಲಿ ಯಾವುದೇ ಶಿಫಾರಸುಗಳನ್ನು ಮಾಡಿರುವರೇ ಎಂದು ಕೇಳಲಾಗುತ್ತದೆ. ಅವರು ಹಾಗೆ ಮಾಡಿರುವುದನ್ನು ರುಜುವಾತುಪಡಿಸಲು ನೀವು ಆಧಾರ ಸಹಿತ ಸಾಕ್ಷ್ಯವನ್ನು ಹಾಗೂ ಇತರ ವಾಸ್ತವಿಕ ಅಂಶಗಳನ್ನು ಒದಗಿಸಿರಿ. ನಾನು ಈ ಸಂಬಂಧದಲ್ಲಿ ಒಂದು ಅಂಶವನ್ನು ವಿಶೇಷವಾಗಿ ಹೇಳಬಯಸುತ್ತೇನೆ. ಮಗನಾಗಲಿ, ಮಗಳಾಗಲೀ ಅಥವಾ ನನ್ನ ಅಭಿಪ್ರಾಯದಲ್ಲಿ ಎರಡು ತಲೆಮಾರುಗಳವರೆಗಿನ ಯಾರೇ ಬಂಧುವಾಗಲೀ ಉನ್ನತ ಅಧಿಕಾರದಲ್ಲಿರುವ ತನ್ನ ಬಂಧುವಿನ ಯಾವುದೇ ಪ್ರಯೋಜನವನ್ನು ಪಡೆದಿರುವನೆ ಎಂಬುದನ್ನು ನಾವು ಮೊದಲು ಗಮನಿಸಬೇಕು. ಇಂದು ಭಾರತದಲ್ಲಿ ಯಾರೇ ವ್ಯಕ್ತಿಯು, ತನ್ನ ವ್ಯಾಪಾರ ಅಥವಾ ವ್ಯವಹಾರದ ಹಿತಾಸಕ್ತಿಗಳ ಅಭಿವೃದ್ಧಿಗಾಗಿ ಸರ್ಕಾರದಲ್ಲಿ ಉನ್ನತಸ್ಥಾನದಲ್ಲಿರುವ ತನ್ನ ಪೋಷಕನ ಸ್ಥಾನದ ಪ್ರಯೋಜನವನ್ನು ಪಡೆದಿರುವನೋ

ಎಂಬುದನ್ನು ಪರೀಕ್ಷಿಸುವ ಮಾನದಂಡಗಳಿರಬೇಕಾದುದು ಅಗತ್ಯವಾಗಿದೆ.

ಇನ್ನೊಂದು ಮಾನದಂಡವನ್ನು ನಾನು ತಮ್ಮ ಮುಂದೆ ಮಂಡಿಸಬಯಸುತ್ತೇನೆ. ಸಚಿವರಿಗೆ ಮಕ್ಕಳಿಲ್ಲವೇ ? ಎಂಬುದು ಆಗಾಗ್ಗೆ ಕೇಳಿಬರುವ ಮಾತಾಗಿದೆ. ಇತರರಿಗೆ ಮಕ್ಕಳಿಲ್ಲವೆ ಎಂಬುದು ಇದಕ್ಕೆ ಮೊದಲನೆಯ ಉತ್ತರ. ಎಲ್ಲ ವಿಧಗಳಲ್ಲೂ ಯಾವಾಗಲೂ ಸಚಿವರ ಮಕ್ಕಳು ಮಾತ್ರ ಫಲವನ್ನು ಅನುಭವಿಸಬೇಕೆ? ಆದರೆ ಪ್ರಸಕ್ತ ಸನ್ನಿವೇಶದಲ್ಲಿ, ಇಂದಿನ ಅರ್ಥವ್ಯವಸ್ಥೆಯಲ್ಲಿ ಒಂದು ಸ್ಪರ್ಧಾತ್ಮಕ ಕ್ಷೇತ್ರವಿದ್ದರೆ ಪರ್ಮಿಟ್, ಕೋಟಾ, ಲೈಸೆನ್ಸ್, ಮುಂತಾದವುಗಳ ಇನ್ನೊಂದು ಕ್ಷೇತ್ರವೂ ಇದೆ. ಇವುಗಳ ನಡುವೆ ಭಿನ್ನತೆ ಕಂಡುಕೊಳ್ಳಲು ನಾವು ಯತ್ನಿಸಬೇಕು. ಮುಕ್ತ ಮತ್ತು ಸ್ವಚ್ಛ ಸ್ಪರ್ಧಾತ್ಮಕತೆಗೆ ಅವಕಾಶವಿರುವಂಥ ಮತ್ತು ಈ ವಿಚಾರದಲ್ಲಿ ಸರ್ಕಾರವು ಯಾವುದೇ ರೀತಿಯ ಹಸ್ತಕ್ಷೇಪ ಮಾಡದಂಥ ಜರ್ಮನಿ, ಬ್ರಿಟನ್ ಮುಂತಾದ ಸ್ವತಂತ್ರ ರಾಷ್ಟ್ರಗಳನ್ನು ಕುರಿತು ಮಾತನಾಡುತ್ತಾರೆ. ಅಲ್ಲಿ ಬಹುತೇಕ ಎಲ್ಲ ಕಡೆಗಳಲ್ಲಿ ಇದೇ ಸನ್ನಿವೇಶ ಕಂಡುಬರುತ್ತದೆ. ಆದರೆ ಇಲ್ಲಿ ಎಂದರೆ ನಮ್ಮ ಭಾರತದಲ್ಲಿ ಸಚಿವರ ಗಂಡುಮಕ್ಕಳು, ಹೆಣ್ಣುಮಕ್ಕಳು ಹಾಗೂ ಬಂಧಗಳು ಸಾಕಷ್ಟು ಬುದ್ಧಿವಂತರಾಗಿದ್ದರೆ, ಸ್ಪರ್ಧೆಯಲ್ಲಿ ಅವರೂ ಭಾಗವಹಿಸಲಿ, ಆದರಲ್ಲವರು ಯಶಸ್ವಿಯಾದರೆ ಅಭಿವೃದ್ಧಿ ಹೊಂದಲಿ. ಯಾವುದೇ ಒಂದು ವ್ಯವಹಾರಕ್ಕೆ ಸಂಬಂಧಿಸಿದಂತೆ ಸಚಿವರು, ಕೋಟಾ ಅಥವಾ ಪರ್ಮಿಟ್ ಅಥವಾ ಲೈಸೆನ್ಸ್ ನೀಡುವುದು ಅಗತ್ಯವಾಗಿರುತ್ತದೋ ಆ ವ್ಯವಹಾರ ಕುರಿತಂತೆ ಸಚಿವರ ಎರಡು ತಲೆಮಾರಿನವರೆಗಿನ ಬಂಧುಗಳು ಮುಂದೆ ಬರಕೂಡದು. ನೀವು ಎಲ್ಲಿಯವರೆಗೆ ಈ ಕಾರ್ಯ ನೀತಿಯನ್ನು ಅನುಸರಿಸುವುದಿಲ್ಲವೋ ಅಲ್ಲಿಯವರೆಗೆ ಸರ್ಕಾರ ಮತ್ತು ವ್ಯಾಪಾರೋದ್ಯಮಿಗಳ ನಡುವಿನ ಸಂಬಂಧ ವಿಷಮವಾಗಿಯೇ ಉಳಿಯುವುದು.

ಈಗ ನಾವು ಉದ್ಯೋಗ ಕ್ಷೇತ್ರದತ್ತ ಗಮನಹರಿಸೋಣ, ಸರ್ಕಾರದಲ್ಲಿ ಉನ್ನತ ಸ್ಥಾನದಲ್ಲಿರುವ ಯಾರೇ ವ್ಯಕ್ತಿಯೂ ತನ್ನ ಬಂಧುಗಳಿಗೆ ಉನ್ನತ ಹುದ್ದೆಗಳನ್ನು ನೀಡಲಾಗದಂತಹ ಕೆಲವು ಮಾರ್ಗೋಪಾಯಗಳನ್ನು ಕಂಡುಕೊಳ್ಳಬೇಕಾಗಿದೆ. ಆ ಬಗ್ಗೆಯೂ ನೀವು ಕೆಲವು ರುಜುವಾತುಗಳನ್ನು ಕೇಳಬೇಕು ಈ ಮುಂಚೆ, ಸಾಮಾನ್ಯ ಕ್ರಮದಲ್ಲಿ ಉದ್ಯೋಗವನ್ನು ಪಡೆಯಲು ವಿಫಲನಾದ ಸಚಿವರ ಮಗನ ವ್ಯವಹಾರ ಮತ್ತು ವ್ಯಾಪಾರ ಸಂವರ್ಧನೆ ಪ್ರಮಾಣವು, ಆತನ ತಂದೆಯ ಸಚಿವ ಸ್ಥಾನಮಾನ ಪ್ರಮಾಣದೊಂದಿಗೆ ಹೋಗಿರುವುದೇ ಇಲ್ಲಿ ರುಜುಮಾತುವಾಗಿದೆ ಪ್ರತಿರುಜುಮಾತು. ಇಲ್ಲದಂತಹ ಭಾರಿ ರುಜುಮಾತು ಇದಾಗಿದೆ. ಈ ಸಂಬಂಧದಲ್ಲಿ ಸಹ ಕೆಲವು ಕಾರ್ಯಸಾಧ್ಯ ನಿಯಮಗಳನ್ನು ರಚಿಸಬೇಕು.....

ಪ್ರಾಚೀನ ಭಾರತದ ಕಟ್ಟಕಡೆಯ ರಾಜಧಾನಿಯಾಗಿದ್ದಂಥ ಕನೋಜದ ಪ್ರತಿನಿಧಿಯಾಗಿರುವ ನಾನು, ಈ ಹೊಸರಾಜಧಾನಿಯ ಬಗ್ಗೆ ಈ ಕೆಲವು ಮಾತುಗಳನ್ನು ಹೇಳಬಯಸುತ್ತೇನೆ . ಆದರೆ, ನಾನು ಹೇಳಬಯಸುವ ಮಾತುಗಳನ್ನು ಅವುಗಳ ಯಾಥಾರ್ಥ ಸ್ವರೂಪದಲ್ಲಿಯೇ ಅರ್ಥೈಸಲಾಗುತ್ತದೆಯೇ ಇಲ್ಲವೆ ಎಂಬುದು ನನಗೆ ತಿಳಿದಿಲ್ಲವಾದ್ದರಿಂದ ಈ ಮಾತುಗಳನ್ನು ಹೇಳಲು ಹಿಂಜರಿಯುತ್ತೇನೆ. ದೆಹಲಿಯು ಕಳೆದ 700-800 ವರ್ಷಗಳಿಂದಲೂ ಈ ರಾಷ್ಟ್ರದ ರಾಜಧಾನಿಯಾಗಿತ್ತು. ಅದಕ್ಕೆ ತನ್ನದೇ ಆದ ವಿಶಿಷ್ಟ ಆಕರ್ಷಣೆ ಹಾಗೂ ಸೌಂದರ್ಯಗಳಿದ್ದರೂ ಅದು ಒಬ್ಬ ಕಲಂಕಿತ ಸ್ತ್ರೀಯ ಸೌಂದರ್ಯವಾಗಿದೆ. ಏಕೆಂದರೆ ವಿದೇಶಿ ದಾಳಿಕೋರರನ್ನು ಹಿಮ್ಮೆಟ್ಟಿಸಲು ಇದಕ್ಕೆ ಎಂದೂ ಸಾಧ್ಯವಾಗಲಿಲ್ಲ. ಈ ರಾಜಧಾನಿಗೆ 700-800 ವರ್ಷಗಳ ಚರಿತ್ರೆ ಇದೆ. ನಾನು ಈಗಷ್ಟೇ ಕನೋಜದಿಂದ ಬಂದಿದ್ದೇನೆ. ಈ ರಾಜಧಾನಿಗೆ ನಾನೊಂದು ಸಂದೇಶ ನೀಡಬಯಸುತ್ತೇನೆ. ಅಲ್ಲಿ ಒಂದು 'ನಾಲಾ' ಇತ್ತು , ಅದರಲ್ಲಿ ನೀರು ಹರಿಯುವುದರ ಜೊತೆಗೆ ಕೊಳೆಯೂ ಹರಿದು ಬರುತ್ತಿತ್ತು. ಮಳೆಗಾಲದಲ್ಲಿ , ಹಾಗೂ ಪ್ರವಾಹ ಕಾಲದಲ್ಲಿ ಜನರಿಗೆ ಯಾವುದೇ ತೊಂದರೆ ಇರಲಿಲ್ಲ. ಈ ನಾಲಾ, 600 -700 ವರ್ಷಗಳಷ್ಟು ಹಳೆಯದು. ಕಾಲಕ್ರಮೇಣ ಇದರಲ್ಲಿ ಹೂಳು ತುಂಬುತ್ತ ಬಂತು. ಈ ದುಸ್ಥಿತಿಗೆ ಕಾಲವೇ ಒಂದು ಕಾರಣವಾದರೆ, 50-60 ಜನ, ಈ ಭೂಮಿಯನ್ನು ಅಕ್ರಮವಾಗಿ ಸ್ವಾಧೀನಕ್ಕೆ ತೆಗೆದುಕೊಂಡು ಸಾಗುವಳಿ ಮಾಡಿ ತರಕಾರಿಗಳನ್ನು ಬೆಳೆಯ ತೊಡಗಿದುದು ಇನ್ನೊಂದು ಕಾರಣ . ಈ ಸಂದರ್ಭದಲ್ಲಿನಾನೊಂದು ಮಾತನ್ನು ಹೇಳಬಯಸುತ್ತೇನೆ. ಒಂದು ರೀತಿಯಲ್ಲಿ ಅದು 1000- 1500 ವರ್ಷಗಳಷ್ಟು ಹಳೆಯ ಚಾಡ್ಯ, ಇನ್ನೊಂದು ರೀತಿಯಲ್ಲಿ ಅದು ಕೇವಲ ಹದಿನೈದು ವರ್ಷಗಳಷ್ಟು ಹಳೆಯದು. ಈ 15 ವರ್ಷಗಳ ಚಾಡ್ಯ ಬದಲಾಗುತ್ತಿರುವ ಹಂತದ್ದು. 1000 - 1500 ವರ್ಷಗಳಷ್ಟು ಹಿಂದಿನ ಜಾಡ್ಯ ಬಗ್ಗೆ ನಾನು ಇನ್ನಷ್ಟು ಹೇಳಬಯಸುತ್ತೇನೆ. ಇದುವರೆಗೆ ಅದೆಷ್ಟೊ ಮಂತ್ರಿಗಳು, ಪ್ರಧಾನ ಮಂತ್ರಿಗಳು, ಮುಖ್ಯಮಂತ್ರಿಗಳು ಆಗಿಹೋಗಿದ್ದಾರೆ. ಕೆಲವೊಮ್ಮೆ ನನ್ನನ್ನು ನಾನು ನಿಯಂತ್ರಿಸಿಕೊಳ್ಳುವುದೇ ಸಾಧ್ಯವಾಗುವುದಿಲ್ಲ. ನನಗೆ ಸಾಕಷ್ಟು ಕಾಲವಕಾಶ ಇದ್ದಿದ್ದರೆ, ಈ ಜಾಡ್ಯದ ಬಗ್ಗೆ ಹಾಗೂ 1500 ವರ್ಷಗಳ ಈ ಜಾಡ್ಯ ಹೇಗೆ 15 ವರ್ಷಗಳ ಜಾಡ್ಯಕ್ಕೆ ನುಸುಳಿ ಸೇರಿಕೊಂಡಿತು ಎಂಬ ಬಗ್ಗೆ ಸುದೀರ್ಘವಾಗಿ ವಿವರಿಸುತ್ತಿದ್ದೆ. ಭಾರತೀಯರು ಎಂದೂ ಒಂದೇ ಘಟಕವಾಗಿಲ್ಲ. ಈ ಜನಾಂಗ, ನೂರಾರು, ಸಾವಿರಾರು ಘಟಕಗಳಿಂದ ಕೂಡಿದೆ. ವಿವಿಧ ಜಾತಿಗಳ ನಡುವೆ ಸಾಮರಸ್ಯವಿಲ್ಲದೆ ಪರಸ್ಪರ ಕಚ್ಚಾಡುತ್ತಿದ್ದಾರೆ. ಅವರ ವೈಚಾರಿಕತೆ ಬೇರೆ, ಸಿದ್ಧಾಂತಗಳೂ ಬೇರೆ. ಅವರ ಪಟ್ಟಭದ್ರ ಹಿತಾಸಕ್ತಿ, ನ್ಯಾಯ, ಚಿಂತನೆ, ವಿವೇಚನೆಗಳಿಗೆ ಬೇರೆ ಬೇರೆ ಅರ್ಥಗಳು ಪ್ರಾಪ್ತವಾಗಿವೆ. ಅವರು ತಮ್ಮ ಸ್ವಹಿತವನ್ನು ಕುರಿತು ಯೋಚಿಸುವಾಗ ವೃತ್ತಿ, ಆಚರಣೆ, ನ್ಯಾಯ - ಅನ್ಯಾಯ ; ಪ್ರಾಮಾಣಿಕತೆ - ಅಪ್ರಾಮಾಣಿಕತೆಗಳ ನಡುವಿನ ವ್ಯತ್ಯಾಸವನ್ನೇ ಮರೆತು ಬಿಡುತ್ತಾರೆ. ಈ ಸಾವಿರಾರು

ಘಟಕಗಳು ರಾಷ್ಟ್ರವನ್ನು ಲೂಟಿ ಮಾಡುತ್ತಿದ್ದು ಈ ಕಾರ್ಯ ಕಳೆದ 1500 ವರ್ಷಗಳಿಂದಲೂ ನಡೆದು ಬಂದಿದೆ. ಯಾರೇ ವ್ಯಕ್ತಿ ತನ್ನ ಜಾತಿಗೆ, ಸಮುದಾಯಕ್ಕೆ ಮತ್ತು ತನ್ನ ಮಕ್ಕಳಿಗೆ ಒಳ್ಳೆಯದನ್ನು ಮಾಡಿದರೆ ಇದರಲ್ಲಿ ತಪ್ಪೇನಿದೆ ಎಂದು ಪ್ರತಿಯೊಬ್ಬರೂ ವಿಚಾರ ಮಾಡುವುದರಿಂದ, ಇವುಗಳ ನಡುವೆ ವ್ಯತ್ಯಾಸದ ಒಂದು ನಿರ್ದಿಷ್ಟ ಗೆರೆಯನ್ನು ಎಳೆಯುವವರೆಗೂ ಭ್ರಷ್ಟಾಚಾರವನ್ನು ನಿರ್ಮೂಲನೆ ಮಾಡಲು ಸಾಧ್ಯವಾಗುವುದಿಲ್ಲ. ಒಬ್ಬ ವ್ಯಕ್ತಿ ಉನ್ನತ ಸ್ಥಾನಕ್ಕೇರಿದರೆ ಅವನು ತನ್ನವರಿಗೆ ಸಹಾಯ ಮಾಡಬೇಕು ಮತ್ತು ಅನುಕೂಲ ಮಾಡಿಕೊಡಬೇಕು ಎಂದು ನಮ್ಮ ಧರ್ಮಶಾಸ್ತ್ರಗಳು ವಿಧಿಸಿದ ಪರಿಕಲ್ಪನೆಯನ್ನು ಮುಂದುವರಿಸಿಕೊಂಡು ಬರಲಾಗಿದೆ. ಇವು ಯಾವುವೆಂದು ನಾನು ಮತ್ತೆ ಹೇಳಬೇಕಾಗಿಲ್ಲ. ಈಗಲೂ ಅದೇ ರೀತಿ ನಡೆಯುತ್ತಿದೆ.

ನನ್ನ ಮೇಲೆ ದೋಷಾರೋಪಣೆ ಮಾಡಲಾಗಿದೆ. ಆದರೆ, ನಿಮಗೇ ತಿಳಿದಿದೆ, ನಾನು ಪ್ರಧಾನ ಮಂತ್ರಿಗಳ ಬಗ್ಗೆ ಮಾತನಾಡಿಲ್ಲ ಹಾಗೂ ಸಾಮಾನ್ಯವಾಗಿ ನಾನು ಅವರ ಬಗ್ಗೆ ಟೀಕೆ ಮಾಡಿರುವುದು ತೀರ ಕಡಿಮೆ. ನನ್ನನ್ನು ದೂಷಿಸಲಾಗಿದೆ, ಆದರೆ ನಾನು ವಾಸ್ತವಾಂಶಗಳನ್ನು ಆಧರಿಸಿಯೇ ವಿವಾದಗಳನ್ನು ಎತ್ತಿದ್ದೇನೆ. ಅವರ ಬಗ್ಗೆ ಗೌರವ ತೋರಿ, ವಿನಯ ಪೂರ್ವಕವಾಗಿ ನಾನು ಕೇಳಿಕೊಳ್ಳುವುದಿಷ್ಟೇ, ಈವರೆಗೂ ನಾನು ಪ್ರಧಾನ ಮಂತ್ರಿಯವರ ಬಗ್ಗೆ, ವೈಯಕ್ತಿಕ ವಿಷಯಗಳ ಬಗ್ಗೆ ಮಾತನಾಡಿಲ್ಲ. ಸರ್ಕಾರಕ್ಕೆ ಸಂಬಂಧಿಸಿದ ವಿಷಯಗಳ ಬಗ್ಗೆ ಮಾತ್ರವೇ ಯಾವಾಗಲೂ ಮಾತನಾಡಿದ್ದೇನೆ. ಅವರು ಪ್ರಧಾನ ಮಂತ್ರಿಗಳಾಗಿ ಅಧಿಕಾರದಲ್ಲಿದ್ದ ಅವಧಿಯಲ್ಲಿ ಅವರ ಕುಟುಂಬಕ್ಕೆ, ಸಮುದಾಯಕ್ಕೆ ಸೇರಿದ ಜನರು ಜೀವನದಲ್ಲಿ ಪ್ರಗತಿ ಹೊಂದಿದಾಗ ಇದು ವೈಯಕ್ತಿಕ ವಿಷಯವಾಗದೇ ಒಂದು ಸಾರ್ವಜನಿಕ ವಿಷಯವಾಗುತ್ತದೆ. ತಮ್ಮ ಸ್ವಸಾಮರ್ಥ್ಯದಿಂದಲೇ ಈ ಜನರು ಜೀವನದಲ್ಲಿ ಮೇಲೆ ಬಂದಿದ್ದಾರೆಂದು ಸಮರ್ಥಿಸಿಕೊಳ್ಳಲಾಗಿದೆ. ಸ್ವಜನರು ಗಟ್ಟಿಕುಳವಾಗಿದ್ದಾಗಲೇ ನೀವು ಪ್ರಧಾನ ಮಂತ್ರಿಗಳಾಗಿದ್ದಿರಾ? ಅರ್ಥ ಮಂತ್ರಿಗಳು ಪ್ರಧಾನ ಮಂತ್ರಿಗಳಾದರೆ, ತಮಿಳರಲ್ಲಿ ಅಯ್ಯಂಗಾರರಲ್ಲಿ ಅತ್ಯಂತ ಯೋಗ್ಯರು ಥಟ್ಟನೆ ಕಾಣಿಸಿಕೊಳ್ಳುತ್ತಾರೆ. ಏಕೆಂದರೆ, ಆಗುವುದೇ ಹಾಗೆ. ಸಂಶಯವೇ ಇಲ್ಲ. ಇದೇ ನಮ್ಮ ದೇಶದಲ್ಲಿ ಯೋಗ್ಯತೆ ಬಗ್ಗೆ ಇರುವ ಮಾನದಂಡ. ಒಬ್ಬ ವ್ಯಕ್ತಿ ಉನ್ನತ ಹುದ್ದೆಗೇರಿದಾಗ ಅಥವಾ ಸ್ಥಾನಮಾನ ಪಡೆದುಕೊಂಡಾಗ, ಅವನ ಕುಟುಂಬಕ್ಕೆ ಸೇರಿದ ಎಲ್ಲ ಜನರಿಗೆ, ಹಾಗೆಯೇ ಆತನ ಸಮುದಾಯದವರಿಗೆ ಬೇರಾರೂ ಸರಿಗಟ್ಟದ ಸಾಮರ್ಥ್ಯ, ಅರ್ಹತೆ, ಬಂದು ಬಿಡುತ್ತದೆ. ಇಂಥ ಪ್ರವೃತ್ತಿಯನ್ನು, ಒಲವನ್ನು ನಾವು ಬದಲಾಯಿಸಬೇಕಾಗಿದೆ. ನಾಲ್ಕು ಸಾವಿರ ಅಥವಾ ಹತ್ತು ಸಾವಿರ ಘಟಕಗಳಾಗಿ ಹಂಚಿಹೋಗಿರುವ ಈ ಘಟಕಗಳ ನಡುವಿನ ತಾರತಮ್ಯವನ್ನು ನಿರ್ಮೂಲನೆ ಮಾಡುವವರೆಗೂ ನಾವು ಭ್ರಷ್ಟಾಚಾರವನ್ನು ತೊಲಗಿಸಲು ಸಾಧ್ಯವಿಲ್ಲ.

ಒಂದು ಕಡೆ 43 ಕೋಟಿ ಜನತೆ ಬಡತನದಲ್ಲಿ ತೊಳಲಾಡುತ್ತಿದ್ದರೆ, ಇನ್ನೊಂದೆಡೆ, 50 ಲಕ್ಷದಷ್ಟು ಜನ ತಮ್ಮ ಜೀವನಮಟ್ಟವನ್ನು ಅಮೇರಿಕಾ - ಯುರೋಪಿನ ಶ್ರೀಮಂತ ಜನರ ಜೀವನ ಮಟ್ಟಕ್ಕೆ ಸಮನಾಗಿ ಏರಿಸಿಕೊಳ್ಳಲು ನಿರಂತರ ಪ್ರಯತ್ನ ನಡೆಸುತ್ತಿದ್ದಾರೆ. ಇಂದು ಒಬ್ಬ ಸಾಮಾನ್ಯ ಭಾರತೀಯನ ಗುರಿಯಾದರೂ ಏನು ? ಅಲಂಕಾರದ ಕುರ್ಚಿಯನ್ನು, ಸುಂದರ ಪೀಠೋಪಕರಣಗಳನ್ನು ಖರೀದಿಸುವುದೇ ? ಇನ್ನೊಬ್ಬರ ಮನೆಯಲ್ಲಿ ನೋಡಿದಂಥ ಆಕರ್ಷಕ ಸೋಫಾವೊಂದು ತಮ್ಮ ಮನೆಯಲ್ಲಿಯೂ ಏಕಿರಬಾರದು ಎಂದು ವಿಚಾರ ಮಾಡುತ್ತಾರೆ. ಮಂತ್ರಿವರ್ಯರ ಹಾಗೂ ಅವರ ಪತ್ನಿಯರ ಮನೆ - ಮನೆಗಳಲ್ಲಿ ಇಂಥ ವಿಚಾರಗಳು ನೆಲೆಯೂರಿದಾಗ, ನೈತಿಕ ಮೌಲ್ಯಗಳು ಹೇಗೆ ತಾನೆ ಊರ್ಜಿತವಾಗಬಲ್ಲವು ? ಅವರಿಗೆ ಪ್ರಾಮಾಣಿಕತೆ ಹಾಗೂ ಅಪ್ರಾಮಾಣಿಕತೆಗಳ ನಡುವಣ ವ್ಯತ್ಯಾಸ ತಿಳಿಯುವುದಿಲ್ಲ ತೀವ್ರ ಹಾಗೂ ಸಹಿಸಲಾಗದಂಥ ಹಸಿವಿನ ಸಮಸ್ಯೆಯಿಂದ ಬಳಲುವ 43 ಕೋಟಿ ಜನರಿದ್ದಾರೆ. 42 1/2 ಕೋಟಿ ಜನರು ಎರಡು ಅಥವಾ ನಾಲ್ಕು ಪೈಸೆಗಾಗಿಯೇ ಅಪ್ರಾಮಾಣಿಕರಾಗ ಬಹುದು. ಆದರೆ, ಕೋಟಿ ಕೋಟಿ ಜನರ ದೃಷ್ಟಿಯಲ್ಲಿ ಈ 50 ಲಕ್ಷ ಜನರೇ ಅಪ್ರಾಮಾಣಿಕರು. ತಮ್ಮ ಸಂಬಳದ 100 -500 ಪಟ್ಟು ಖರ್ಚು ಮಾಡುವ ಜನರೂ ಇದ್ದಾರೆ. ಆಡಳಿತದ ಕಾರ್ಯಭಾರ ಹೊತ್ತಿರುವ, ಕೊನೇ ಪಕ್ಷ ತಮ್ಮ ಸಂಬಳದ ನಾಲ್ಕು ಪಟ್ಟು ವೆಚ್ಚ ಮಾಡುವ ಜನರು ಇದ್ದಾರೆ. ಹೀಗೆ, ಕಳೆದ 15 ವರ್ಷಗಳ ಅವಧಿಯಲ್ಲಿ ನಮಗೆ ಅಂಟಿಕೊಂಡಿರುವ ಈ ಜಾಡ್ಯವನ್ನು ನಿರ್ಮೂಲನೆ ಮಾಡುವುದು ತೀರ ಅಗತ್ಯವಾಗಿದೆ.

............ಈ ಅಂಟು ಜಾಡ್ಯಕ್ಕೆ ಪರಿಹಾರ ಕಂಡುಕೊಳ್ಳುವ ಹೊಣೆ ನಮ್ಮ ಮೇಲಿದೆ. ಸಮಾಜದಲ್ಲಿ ಎದ್ದು ಕಾಣುತ್ತಿರುವ ಅಸಮಾನತೆ, ಮತ್ತು ತಮ್ಮ ತಮ್ಮ ಜೀವನ ಮಟ್ಟವನ್ನು ಏರಿಸಿಕೊಳ್ಳಬೇಕೆಂಬ ಹೆಚ್ಚುತ್ತಲೇ ಇರುವ ಜನರ ಬಯಕೆ, ಭ್ರಷ್ಟಾಚಾರಕ್ಕೆ ಪ್ರೇರೇಪಿಸುತ್ತದೆ. ವಿಶೇಷವಾಗಿ ಈ ಸದನದ ಸದಸ್ಯರು ಈ ಅಸಂಗತತೆ ಬಗ್ಗೆ ಗಮನಹರಿಸಬೇಕೆಂದು ನಾನು ಕೇಳಿಕೊಳ್ಳುತ್ತೇನೆ. ಮಹಾತ್ಮಾಗಾಂಧಿಯವರ ಯುಗವು ಸರಳ ಜೀವನ ಹಾಗೂ ಕರ್ತವ್ಯಕ್ಕಾಗಿ ಸಮರ್ಪಿಸಿಕೊಂಡಂಥ ಯುಗವಾಗಿದ್ದರೆ, ಸನ್ಮಾನ್ಯ ಪ್ರಧಾನ ಮಂತ್ರಿಗಳ ಯುಗವು ಸೊಗಸುಗಾರಿಕೆ ಹಾಗೂ ವಿಲಾಸದ ಯುಗವಾಗಿದೆ. ಕೇವಲ 5 ದಶಲಕ್ಷದಷ್ಟಿರುವ ಜನರ ಹಿತಾಸಕ್ತಿಯನ್ನು ರಕ್ಷಿಸುವುದಕ್ಕಾಗಿ , ಇಡೀ ಜನ ಸಮುದಾಯದ ಸಾಮಾನ್ಯ ಪರಿಸ್ಥಿತಿಯನ್ನು ಕಡೆಗಣಿಸಲಾಗುತ್ತದೆ. ಇಲ್ಲಿಯ ಜನರು ಅಮೇರಿಕಾ ಮತ್ತು ಯುರೋಪ್ ದೇಶಗಳ ಜನರ ಜೀವನ ಪದ್ಧತಿಯ ಅಂಧಾನುಕರಣೆ ಮಾಡುತ್ತಿರುವುದನ್ನು ನಾನು ಕಂಡಿದ್ದೇನೆ. ಆ ದೇಶದ ಜನ, ತಮ್ಮ ಹೊಲಗದ್ದೆಗಳಲ್ಲಿ, ಕಾರ್ಖಾನೆಗಳಲ್ಲಿ ಉತ್ಪಾದನೆಯನ್ನು ಹೆಚ್ಚಿಸುವುದಕ್ಕಾಗಿ ಕಳೆದ 300 ವರ್ಷಗಳ ಕಾಲ ನಿರಂತರ ಶ್ರಮವಹಿಸಿ ದುಡಿದಿದ್ದರಿಂದಲೇ, ಈಗಿರುವ ಐಷಾರಾಮ ಜೀವನ ಸುಖವನ್ನು

ಅನುಭವಿಸಲು ಸಾಧ್ಯವಾಗಿದೆಯೆನ್ನಬಹುದು. ಆದರೆ, ಇಲ್ಲಿ ನಾವು, ಉತ್ಪಾದನೆಯನ್ನು ಹೆಚ್ಚಿಸದೇ, ಪಾಶ್ಚಾತ್ಯ ದೇಶಗಳ ಜೀವನ ಶೈಲಿಗಾಗಿ ಹಾತೊರೆಯುತ್ತೇವೆ ಎಂಬುದನ್ನು ನಾನು ಅವರಿಗೆ ಹೇಳಬಯಸುತ್ತೇನೆ. ಇಂಥ ಸಂದರ್ಭಗಳಲ್ಲಿ ಭ್ರಷ್ಟಾಚಾರದಿಂದಾಗಿ ಸಮಾಜಕ್ಕೆ ಹಿಂಸೆಯಾಗುತ್ತದೆ. ಆದ್ದರಿಂದ ಈ ಎರಡು ವಿಷಯಗಳನ್ನು ನಿಮ್ಮ ಮುಂದೆ ಇಡಬಯಸುತ್ತೇನೆ.

ಅದೇರೀತಿಯಾಗಿ ಈ ಸರ್ಕಾರವು, ಸತ್ಯವನ್ನು ಚಿನ್ನದ ಪೆಟ್ಟಿಗೆಯಲ್ಲಿಟ್ಟು (ಹಿರಣ್ಮಯಪಾತ್ರ) ಬಚ್ಚಿಟ್ಟಿದೆ. ಎರಡು - ಎರಡೂವರೆ ಸಾವಿರ ವರ್ಷಗಳಷ್ಟು ಪುರಾತನವಾದ "ಹಿರಣ್ಮಯಪಾತ್ರ" ಎಂಬ ಪದವನ್ನು ನಾನು ಇಲ್ಲಿ ಪ್ರಯೋಗಿಸುತ್ತಿದ್ದೇನೆ. ಮಂತ್ರಿಗಳಾಗಿದ್ದ ಅಥವಾ ಮಂತ್ರಿಗಳಾಗಲು ಸಾಧ್ಯವಾಗದಿದ್ದ, ಆ ಕೆಲವಾರು ಜನರ ಬಾಯಿಯನ್ನು ಪೂರ್ಣವಾಗಿ ಅಥವಾ ಭಾಗಶ: ಮುಚ್ಚಲು ಸರ್ಕಾರವು ಅಪಾರ ಹಣವನ್ನು ಖರ್ಚು ಮಾಡುವುದನ್ನು ನೀವು ಕಾಣುತ್ತೀರಿ. ಅಂಥ ಜನ, ಅವರು ನೌಕರರಾಗಿರಲಿ, ಸಂತರಾಗಿರಲಿ, ಸಮಾಜ ಸುಧಾರಕರಾಗಿರಲಿ, ಶಿಕ್ಷಣ ತಜ್ಞರಾಗಿರಲಿ ಅಥವಾ ಶಿಕ್ಷಕರಾಗಿರಲಿ, ಜೀವನದ ಎಲ್ಲ ರಂಗಗಳಲ್ಲಿ ಇದ್ದಾರೆ. ನನ್ನ ಅಂದಾಜಿನ ಪ್ರಕಾರ, 5000 ಕೋಟಿ ರೂಪಾಯಿಗಳಷ್ಟಾಗುವ ಒಟ್ಟು ವಾರ್ಷಿಕ ಯೋಜನಾ ವೆಚ್ಚ ಹಾಗೂ ಸರ್ಕಾರದ ವೆಚ್ಚದ ಪೈಕಿ, ಸರ್ಕಾರವು ಮಡಿಕೆಯನ್ನು ಚಿನ್ನದ ಮುಚ್ಚಳದಿಂದ ಮುಚ್ಚಿ, ಸತ್ಯವನ್ನು ಹತ್ತಿಕ್ಕಲು 2000 ಕೋಟಿ ರೂಪಾಯಿಗಳಷ್ಟು ಹಣವನ್ನು ವೆಚ್ಚ ಮಾಡುತ್ತಿದೆ. ಅವರ ಬಾಯಿ ಮುಚ್ಚಿಸಲು ಈ ಉಪಾಯವನ್ನು ಆಚರಣೆಗೆ ತಂದಿರದಿದ್ದರೆ ನನ್ನ ಅಭಿಪ್ರಾಯಕ್ಕೆ ಸಾಕಷ್ಟು ವ್ಯಾಪಕ ಹಾಗೂ ತಕ್ಷಣದ ಪ್ರತಿಕ್ರಿಯೆ ದೊರೆತು, ಹೆಚ್ಚು ಹೆಚ್ಚು ಜನ ಆ ಬಗ್ಗೆ ಚರ್ಚಿಸುತ್ತಿದ್ದರು, ಚಿಂತನ ಮಾಡುತ್ತಿದ್ದರು. ಆದರೆ ಅವರಿಗೆ ಏನೇನೂ ಅನ್ನಿಸದಿರುವ ಕಾರಣ ಈ ಚರ್ಚೆಗಳು, ಅಲ್ಲಲ್ಲೇ ನಿಂತುಬಿಡುತ್ತವೆ.

..........ನಾವು, ಸತ್ಯ ನುಡಿಯುವುದು ಅತ್ಯವಶ್ಯಕ, ಏಕೆಂದರೆ ಅದಿಲ್ಲದ್ದರೆ ಒಳ್ಳೆಯ ನಡತೆ ಸಾಧ್ಯವಿಲ್ಲ. ಆದರೆ ಇಂದಿನ ರಾಜಕೀಯದಲ್ಲಿ, ಈ ಮನೋಧರ್ಮ ಅಪರೂಪವಾಗುತ್ತಲಿದೆ. ನಾನು ಯಾವುದೋ ಒಂದರಲ್ಲಿ ಸಿಕ್ಕಿಹಾಕಿಕೊಂಡಿದ್ದೇನೆಂದು ಕೊಳ್ಳಿ, ನಾನು ಸತ್ಯ ಸಂಗತಿಯನ್ನು ಬಾಯಿಬಿಟ್ಟರೆ ನಾನೇ ಸಿಕ್ಕಿ ಬೀಳುವ ಸಂಭವವಿರುತ್ತದೆ. ಅಂಥ ಸಂದರ್ಭದಲ್ಲಿ, ತಪ್ಪನ್ನು ಮರೆಮಾಚಲು ನಾನು ಸುಳ್ಳು ಹೇಳಬೇಕಾಗುತ್ತದೆ. ಆದರೆ, ಹಾಗೆ ಸುಳ್ಳು ಹೇಳಿದರೆ ಮುಂದೆ ಸುಳ್ಳುಗಳ ಬಲೆಯಲ್ಲಿ ಸಿಕ್ಕಿ ಬೀಳಬೇಕಾಗುತ್ತದೆ. ನಾನು ಸೋಮವಾರ ಬೆಳಗ್ಗೆ 10 ಗಂಟೆಗೆ ವಾಷಿಂಗ್‌ಟನ್ ತಲುಪಬೇಕಾಗಿದ್ದು, ಯಾವುದೋ ಕಾರಣದಿಂದಾಗಿ ನಾನು ಅಲ್ಲಿಗೆ ತಲುಪಲಾಗಲಿಲ್ಲ ವೆಂದುಕೊಳ್ಳಿ ನನಗೆ ಅಲ್ಲಿಗೆ ಹೋಗುವುದಕ್ಕೆ ಆಸಕ್ತಿ ಇತ್ತು, ಆದರೆ ನನಗೆ ಪ್ರಯಾಣ

ಸೌಲಭ್ಯ ದೊರೆಯಲಿಲ್ಲವೆಂಬ ನೆವ ಹೇಳುತ್ತೇನೆ. ಆದರೆ ಸುಳ್ಳು ಹೇಳುವ ಒಬ್ಬ ವ್ಯಕ್ತಿ, ಸಾಮಾನ್ಯವಾಗಿ ತನ್ನ ಸುಳ್ಳುಗಳ ಬಲೆಯೊಳಗೆ ತಾನೇ ಸಿಕ್ಕಿ ಬೀಳುತ್ತಾನೆ. ಉದಾಹರಣೆಗೆ ಬೆಳಗ್ಗೆ ನಾನು ಲಂಡನ್‌ಗೆ ಹೋಗಬಹುದು. ಆದರೆ, ಅದೇ ಕಾಲಕ್ಕೆ ನಾನು ವಾಷಿಂಗ್ಟನ್‌ಗೂ ಹೋಗಬಹುದಿತ್ತು ಎಂದು ಹೇಳಿದರೆ, ಈ ಸುಳ್ಳು ನನ್ನನ್ನು ಸಿಕ್ಕಿಹಾಕಿಕೊಳ್ಳುವಂತೆ ಮಾಡುತ್ತದೆ, ಏಕೆಂದರೆ ಲಂಡನ್ ಮತ್ತು ವಾಷಿಂಗ್‌ಟನ್ ನಗರಗಳ ನಡುವೆ ಕನಿಷ್ಟ 5 ಗಂಟೆಗಳ ಅಂತರವಿದೆ.

..........ಮಾನ್ಯ ಪ್ರಧಾನ ಮಂತ್ರಿಗಳ ಬಗ್ಗೆ ನಿಮಗೆ ನಾನು ಹೇಳಬಯಸುವುದೇನೆಂದರೆ, ಇದು ತಪ್ಪಾಗಿ ತಿಳಿದುಕೊಳ್ಳುವ ವಿಷಯವಲ್ಲ, ನನ್ನ ಮೇಲೆ ಕೋಪಿಸಿಕೊಳ್ಳದೇ ಅವರು ನಾನು ಹೇಳಿದ ವಿಷಯಗಳ ಬಗ್ಗೆ ಗಮನ ಹರಿಸಬೇಕು. ಅನುದಾನಗಳು, ಭತ್ಯಗಳು ಮತ್ತು ನಿಧಿಗಳ ಮೇಲಿನ ವೆಚ್ಚವೂ ಸೇರಿದಂತೆ ಈ ಮೂರು ಬಾಬುಗಳ ಮೇಲಿನ ವೆಚ್ಚದ ಬಗ್ಗೆ ಅವರು ಸಂಪೂರ್ಣ ಪರಿಶೀಲನೆ ಮಾಡಬೇಕು. ವಿವಿಧ ಮಂತ್ರಿಗಳಿಂದ ಮಂಜೂರಾದ ನಿಧಿಗಳ ಬಗ್ಗೆ ನಾನು ಹೇಳಬಯಸುವುದಿಷ್ಟೇ ಮಾನ್ಯ ಪ್ರಧಾನ ಮಂತ್ರಿಗಳ ಮನೆಯಲ್ಲಿ ಇರುವ ವಸ್ತುಗಳ ಬಗ್ಗೆ ಗಮನಹರಿಸುವ ತೊಂದರೆಯನ್ನು ಮಾನ್ಯ ಗೃಹ ಮಂತ್ರಿಗಳು ತೆಗೆದುಕೊಂಡಿದ್ದೇ ಆದರೆ, ಈ ಅನುದಾನಗಳಿಂದ ಏನನ್ನೆಲ್ಲಾ ಪಡೆದುಕೊಳ್ಳಬಹುದೆಂಬುದನ್ನು ತಿಳಿಯಬಹುದೆಂದು ನಾನು ಹೇಳಬಯಸುತ್ತೇನೆ. ಇತರ ಮಂತ್ರಿಗಳು ಮತ್ತು ಮುಖ್ಯ ಮಂತ್ರಿಗಳು ಬೇರೆ ಮಾರ್ಗೋಪಾಯಗಳ ಮೂಲಕ ಪಡೆದುಕೊಂಡದ್ದನ್ನು, ಪ್ರಧಾನ ಮಂತ್ರಿಗಳು ಸಾಮಾನ್ಯ ನಿಯಮಗಳ ಮೂಲಕ ಪಡೆದುಕೊಳ್ಳುತ್ತಾರೆ. ಪ್ರಧಾನ ಮಂತ್ರಿಗಳ ಪರಿಹಾರನಿಧಿ ಎಂಬ ಹೆಸರಿನ ನಿಧಿಯೊಂದಿದೆ. ಕಳೆದ 10 - 15 ವರ್ಷಗಳಲ್ಲಿ ಈ ನಿಧಿಯಿಂದ ಹಣ ತೆಗೆಯುವುದಕ್ಕೆ ಯಾವ ವಿಧಿ ನಿಯಮಗಳೂ ಇಲ್ಲ, ಮತ್ತು ಈ ವಿಷಯದಲ್ಲಿ ಪ್ರಧಾನ ಮಂತ್ರಿಗಳ ವಿವೇಚನೆಯೇ ಸರ್ವೋಚ್ಚ ಅಧಿಕಾರ. ಈ ಉತ್ತರವನ್ನು ಅವರೇ ಈ ಸದನದಲ್ಲಿ ಕೊಟ್ಟಿದ್ದಾರೆ. ಅಂಥ ನಿಧಿಗಳ ನೆರವಿನಿಂದ ಯಾರಾದರೂ ತಮ್ಮ ಸರ್ಕಾರಿ ಸ್ಥಾನಮಾನಗಳನ್ನು ವೃದ್ಧಿ ಪಡಿಸಿಕೊಳ್ಳಬಹುದು. ನಾನು ವಿನಯಪೂರ್ವಕ ವಾಗಿ ಹೇಳಬಯಸುವುದಿಷ್ಟೇ, ಈ ನಿಧಿಯನೂರನೇ ಒಂದಂಶದಷ್ಟಾದರೂ ನನ್ನ ವಿಲೇವಾರಿಗೆ ಕೊಟ್ಟಿದ್ದಾದರೆ, ನಾನೂ ರಾಜಕೀಯವಾಗಿ ಸಾಕಷ್ಟು ಅಧಿಕಾರ ಪ್ರಭಾವಗಳನ್ನು ಬೆಳೆಸಿ ಕೊಳ್ಳುತ್ತಿದ್ದೆ ಹಾಗೂ ನನ್ನ ಸುತ್ತಲೂ ನೂರಾರು ಜನ ಮುತ್ತಿಕೊಂಡೇ ಇರುತ್ತಿದ್ದರು ಇದು ರಾಜಕೀಯ ಅಧಿಕಾರವನ್ನು ಬೆಳೆಸಿಕೊಳ್ಳುವ ಒಂದು ಸಾಧನವಾಗಿದೆ.

........ನನ್ನ ಹೃದಯವನ್ನು ತೀವ್ರವಾಗಿ ಚುಚ್ಚುತ್ತಿರುವ ಒಂದು ವಿಷಯವನ್ನು ತಿಳಿಸ ಬಯಸುತ್ತೇನೆ. ಈ ವಿಷಯವನ್ನು ಸದನದಲ್ಲಿ ಚರ್ಚಿಸಬಹುದಾಗಿತ್ತು. ನಿಯಮಗಳನ್ನು ಹೇಗೆ ಅನ್ವಯಿಸಬೇಕೆಂಬುದನ್ನು ನೀವು ದಯವಿಟ್ಟು ಗಮನಿಸಬೇಕು. ಒಂದು ಗಂಭೀರ ವಿಪತ್ತು ದೇಶವನ್ನು ಆವರಿಸಿಕೊಳ್ಳುತ್ತಿದೆ ಎಂದು ಕಾಣುತ್ತದೆ. ಇಂಥ ವಿಷಯವನ್ನು ಮತ್ತೆ ಮತ್ತೆ ಚರ್ಚಿಸುವುದು ಒಂದು ಒಳ್ಳೆಯ ಸಂಪ್ರದಾಯವೇ ? ಬಿಕ್ಕಟ್ಟಿನ ಪರಿಸ್ಥಿತಿ ಎಲ್ಲ ರಂಗಗಳಲ್ಲಿಯೂ ಹೆಚ್ಚಾಗುತ್ತಿದ್ದರೂ ಕೇವಲ ಒಂದು ಹಂತದಲ್ಲಿಯ ಬಿಕ್ಕಟ್ಟನ್ನು ಕುರಿತು ಸದನವು ಪ್ರಸಕ್ತ ಅಧಿವೇಶನದಲ್ಲಿ ಮತ್ತೆ ಮತ್ತೆ ಚರ್ಚಿಸಿದೆ. ಸರ್ಕಾರವು ತನ್ನ ಒಂದು ಏಜೆನ್ಸಿಯ ಮೂಲಕ, ಜನರ ಗಮನವನ್ನು ಮತ್ತೊಂದು ಕಡೆ ಸೆಳೆಯುವಂಥ ತನಗೆ ಅನುಕೂಲಕರವಾದ ಸುದ್ದಿಗಳನ್ನು, ಎಂದರೆ ಕೊಲೆ, ಡಕಾಯಿತಿ ಮತ್ತು ಗೋಲಿಬಾರು ಮುಂತಾದ ಅನೇಕ ಸುದ್ದಿಗಳನ್ನು ಕೊಡುತ್ತಿದೆ. ಪಾಕಿಸ್ತಾನ ಸರ್ಕಾರವಂತೂ, ಈ ವಿಷಯದಲ್ಲಿ ಎಷ್ಟು ಉತ್ಪ್ರೇಕ್ಷೆ ಮಾಡುತ್ತಿದೆಯೆಂಬುದು ಎಲ್ಲರಿಗೂ ತಿಳಿದ ವಿಷಯವೆ ಆಗಿದೆ. ಆದರೆ ಭಾರತ ಸರ್ಕಾರವೂ ಕೂಡ ಈ ವಿಷಯಗಳ ಬಗ್ಗೆ ವಿಚಾರ ಮಾಡುವುದಿಲ್ಲ ಹಾಗೂ ಹಿತಕರವಲ್ಲದಂಥ ಒಂದು ಪರಿಸ್ಥಿತಿಯನ್ನು ನಿರ್ಮಾಣ ಮಾಡುತ್ತಿದೆ.

ನಾನು ಅಧಿಕಾರಕ್ಕಾಗಿ ಹಾತೊರೆದವನಲ್ಲ ಎಂಬ ಅಂಶವನ್ನು ಈಗ ಮತ್ತೆ ಹೇಳಬಯಸುತ್ತೇನೆ. ಕೇಂದ್ರ ಜಾಗೃತ ಆಯೋಗವನ್ನು ರಚಿಸಿದ್ದಾದರೆ, ಭ್ರಷ್ಟಾಚಾರದ ಕಾರಣಕ್ಕಾಗಿ ಎರಡು ಸಲ ಎಚ್ಚರಿಕೆ ಕೊಟ್ಟತರುವಾಯ ''ಯಾರನ್ನಾದರೂ'' ಬಂಧಿಸುವ ಅಧಿಕಾರ ಅದಕ್ಕಿರಬೇಕೆಂಬ ಅಭಿಪ್ರಾಯ ನನ್ನದು. ಮಾನ್ಯ ಸಭಾಧ್ಯಕ್ಷರೇ, ''ಯಾರ ನ್ನಾದರೂ'' ಎಂಬ ಪದದ ಮೇಲೆ ಒತ್ತು ಕೊಟ್ಟು ಹೇಳುತ್ತಿದ್ದೇನೆ, ಈ ವ್ಯಾಪ್ತಿಗೆ ಪ್ರತಿಯೊಬ್ಬರೂ ಎಂದರೆ ಅವರು ಮುಖ್ಯ ಮಂತ್ರಿಗಳಾಗಿರಲಿ, ಪ್ರಧಾನ ಮಂತ್ರಿಗಳೇ ಆಗಿರಲಿ ಅಥವಾ ಯಾರೇ ಆಗಿರಲಿ, ಎಲ್ಲರೂ ಬರಬೇಕು. ನಮ್ಮ ರಾಷ್ಟ್ರವನ್ನೇ ಕಳಿಸುತ್ತಿರುವ ವ್ಯಾಪಕ ಆರ್ಥಿಕ ಅಸಮಾನತೆಯನ್ನು ನಿರ್ಮೂಲನ ಮಾಡುವ ಅಧಿಕಾರ ಅದಕ್ಕೆ ಇರಬೇಕು. ಬಳಕೆಯ ಬಗ್ಗೆ ಗಮನ ನೀಡುವ ಬದಲಿಗೆ, ಉತ್ಪಾದನೆಯನ್ನು ಹೆಚ್ಚಿಸುವ ಕಡೆಗೂ ಗಮನ ಕೊಡಬೇಕೆಂದು ನಾನು ಹೇಳಬಯಸುತ್ತೇನೆ. ಹೀಗೆ ಮಾಡಿದ್ದಾ ದರೆ, ನಾನು ಮಾತ್ರವೇ ಏಕೆ, ಮಾನ್ಯ ಶ್ರೀ ಮಹಾವೀರ ತ್ಯಾಗಿ ಅವರು ಕೂಡಾ ಎರಡೂ ವರ್ಷಗಳೊಳಗೇ ಭ್ರಷ್ಟಾಚಾರವನ್ನು ನಿರ್ಮೂಲನ ಮಾಡಬಲ್ಲರೆಂಬ ಭರವಸೆ ನನಗಿದೆ. ಆದರೆ ಶ್ರೀ ನಂದಾ ಅವರು ಮಾತ್ರ ನಮ್ಮ ದೇಶದಿಂದ ಭ್ರಷ್ಟಾಚಾರವನ್ನು ನಿರ್ಮೂಲನ ಮಾಡುವಲ್ಲಿ ಎಂದೂ ಸಫಲರಾಗುವುದಿಲ್ಲವೆಂದು ನಾನು ಹೇಳಬಲ್ಲೆ.

ಪ್ರಸಕ್ತ ಪಂಚವಾರ್ಷಿಕ ಯೋಜನೆಯ ಅಡಿಯಲ್ಲಿ 27 ಕೋಟಿ ಜನರ ಸರಾಸರಿ ಆದಾಯ ದಿನಕ್ಕೆ ಕೇವಲ ಮೂರು ಆಣೆಗಳಾಗಿದ್ದರೆ 16.5 ಕೋಟಿ ಜನರ ದಿನದ

ಆದಾಯ ಕೇವಲ ಒಂದು ರೂಪಾಯಿ ಆಗಿದೆ. ಇಷ್ಟರಿಂದಲೇ ಇವರು ಜೀವನ ನಿರ್ವಹಣೆ ಮಾಡಬೇಕಾಗುತ್ತದೆ. ಆದರೆ, ಏಳು ವರ್ಷಗಳೊಳಗೆ ಈ 27 ಕೋಟಿ ಜನರ ದಿನದ ಸರಾಸರಿ ಆದಾಯವನ್ನು ಎಂಟು ಆಣೆಗಳಿಗೂ 16.5 ಕೋಟಿ ಜನ ಆದಾಯ 1.5 ರೂ. ಅಥವಾ 1.75 ರೂ. ಗಳಿಗೂ ಹೆಚ್ಚಿಸುವಂಥ ಅರ್ಥವ್ಯವಸ್ಥೆಯನ್ನು ನಾನು ರೂಪಿಸಬಲ್ಲೆ.

-:=:=:-

## 10. ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಗಳ ಉದ್ಧಾರ *

ಈ ಸರ್ಕಾರ ಸಮಸ್ಯೆಗಳನ್ನು ಪರಿಹರಿಸುವ ಬದಲು ಅವುಗಳನ್ನು ಇನ್ನಷ್ಟು ಜಟಿಲಗೊಳಿಸುತ್ತಿದೆ. ಬರಗಾಲ, ಆಸ್ತಿಯ ಹಕ್ಕು, ಭಾಷಾ ಸಮಸ್ಯೆ ಮತ್ತು ಜಾತೀಯತೆ - ಮುಂತಾದ ಅನೇಕ ಸಮಸ್ಯೆಗಳು ಪರಿಹಾರವಾಗುವ ಬದಲು ಮತ್ತಷ್ಟು ಉಲ್ಬಣಗೊಳ್ಳುತ್ತಿವೆ. ಸವರ್ಣೀಯ ಹಿಂದೂಗಳು ಅದರಲ್ಲೂ ಗ್ರಾಮೀಣ ಪ್ರದೇಶಗಳಲ್ಲಿರುವವರು, ಹರಿಜನರು ಹಾಗೂ ಇತರ ಹಿಂದುಳಿದ ವರ್ಗಗಳ ಜನರ ಏಳಿಗೆಯನ್ನು ಸಹಿಸುತ್ತಿಲ್ಲ. ಒಟ್ಟು 7 - 8 ಕೋಟಿಯಷ್ಟಿರುವ ಹರಿಜನರ ಪೈಕಿ ಸುಮಾರು 70 - 80 ಸಾವಿರ ಹರಿಜನರ ಆರ್ಥಿಕ ಸ್ಥಿತಿ ಮಾತ್ರ ಸುಧಾರಿಸಿದೆ. ಅಂಥವರ ಸಂಖ್ಯೆ ಇನ್ನೂ ಸ್ವಲ್ಪ ಹೆಚ್ಚೇ ಇರಬಹುದು. ಆದರೆ, ಆ ಸಂಖ್ಯೆ ಯಾವುದೇ ಸಂದರ್ಭದಲ್ಲೂ ಪ್ರತಿ ಸಾವಿರಕ್ಕೆ ಒಂದಕ್ಕಿಂತ ಹೆಚ್ಚಾಗಿರಲಾರದು. ಹೀಗಿದ್ದರೂ, ಹರಿಜನರು ಎಲ್ಲ ಸವರ್ಣೀಯ ಹಿಂದೂಗಳ ಕಣ್ಣುರಿಗೆ ಗುರಿಯಾಗಿದ್ದಾರೆ. ಇಂಥ ಸನ್ನಿವೇಶದಲ್ಲಿ ದೇಶವು ಪ್ರಗತಿಯನ್ನು ಸಾಧಿಸಲಿಕ್ಕಾಗದು ಎಂಬುದು ಸುಸ್ಪಷ್ಟ. ಇದಕ್ಕೆ ಮುಖ್ಯ ಕಾರಣ ನಮ್ಮ ದೋಷಪೂರ್ಣ ಆಡಳಿತ ವ್ಯವಸ್ಥೆ. ನಮ್ಮ ಈಗಿನ ಸರ್ಕಾರವೇ ಇದಕ್ಕೆ ಹೊಣೆ. ಈ ದೋಷಪೂರ್ಣ ವ್ಯವಸ್ಥೆಯನ್ನು ನಾವು ಅನುಸರಿಸಿದ್ದಾದರೆ ನಾವೂ ಇದಕ್ಕೆ ಜವಾಬ್ದಾರರಾಗುತ್ತೇವೆ. ಇಂದು ಸರ್ಕಾರ ಮಾಡಿರುವುದೆಲ್ಲವೂ, ಅದಕ್ಕೆ ವೋಟುಗಳನ್ನು ಗಳಿಸಿಕೊಡುವ ಶ್ರೀಮಂತರ ಪ್ರಯೋಜನಕ್ಕಾಗಿ ಮಾತ್ರ. ಜನರಿಗೆ ಅಥವಾ ರಾಷ್ಟ್ರಕ್ಕೆ ಒಳ್ಳೆಯದು ಮಾಡುವ ಉದ್ದೇಶ ಸರ್ಕಾರಕ್ಕೆ ಇಲ್ಲವೇ ಇಲ್ಲ. ತಮಗೆ ವೋಟುಗಳನ್ನು ದೊರಕಿಸಿಕೊಡುವ ಪ್ರಭಾವಿ ವ್ಯಕ್ತಿಗಳನ್ನು ತಮ್ಮ ಕಡೆ ಎಳೆದುಕೊಳ್ಳುವುದಷ್ಟೇ ಅವರ ಉದ್ದೇಶ. ಈ 70 - 80 ಸಾವಿರ ಹರಿಜನರು ಇತರ ಹರಿಜನರ ವೋಟುಗಳನ್ನು ಸರ್ಕಾರಕ್ಕೆ ದೊರಕಿಸಿಕೊಡುವ ಕಾರ್ಯವನ್ನು ಮಾಡುತ್ತಿದ್ದಾರೆ.

ಪಂಚವಾರ್ಷಿಕ ಯೋಜನೆಗಳಲ್ಲಿ ಹರಿಜನರಿಗೆ ಮತ್ತು ಹಿಂದುಳಿದ ವರ್ಗಗಳಿಗೆ ಅನುದಾನಗಳನ್ನು ಪ್ರತ್ಯೇಕವಾಗಿ ನಿಗದಿ ಮಾಡಲಾಗುತ್ತಿದೆ. ಆದರೆ, ಹಿಂದುಳಿದ ವರ್ಗಗಳ ಎಷ್ಟು ಜನರಿಗೆ ಈ ಯೋಜನೆಗಳಿಂದ ನಿಜವಾಗಿಯೂ ಪ್ರಯೋಜನ ಆಗಿದೆಯೆಂಬ ಬಗ್ಗೆ ಯಾವುದೇ ರೀತಿಯಲ್ಲಿ ಮೌಲ್ಯಮಾಪನ ಮಾಡಿಯೇ ಇಲ್ಲ. ಪಂಚವಾರ್ಷಿಕ ಯೋಜನೆಗಳ ಮೌಲ್ಯಮಾಪನವನ್ನು ಬೇರೆ ರೀತಿಯಲ್ಲಿ ಮಾಡಲಾಗುತ್ತದೆ. ನನಗೆ ಅನೇಕ ವರದಿಗಳು ಬಂದಿವೆ. ಆದರೆ, ಯೋಜನೆಗಳಡಿ ಖರ್ಚು ಮಾಡಿದ ಹಣದಿಂದ ಎಷ್ಟು ಮಂದಿ ಹರಿಜನ ಮತ್ತು ಆದಿವಾಸಿ ಫಲಾನುಭವಿಗಳ ಜೀವನ ಮಟ್ಟ ಸುಧಾರಿಸಿದೆ ಎಂಬ ನಿರ್ದಿಷ್ಟ ಸಂಖ್ಯೆಯನ್ನು ವಿವರವಾಗಿ ತಿಳಿಸುವ ಯಾವುದೇ ವರದಿಯನ್ನೂ ನಾನು ನೋಡಿಲ್ಲ.

* ಲೋಕಸಭಾ ಚರ್ಚೆ, ಮಾರ್ಚ್ 12, 1965.

ನಾಲ್ಕನೆಯ ಪಂಚವಾರ್ಷಿಕ ಯೋಜನೆಯನ್ನು ರೂಪಿಸಲಾಗುತ್ತಿದೆ. ಈ ಯೋಜನಾವಧಿಯಲ್ಲಿ ಎರಡು ಸಾವಿರ ಕೋಟಿಗೂ ಅಧಿಕ ಮೊತ್ತವನ್ನು ಖರ್ಚು ಮಾಡಲಾಗುತ್ತದೆ. ಪ್ರಾಯಶಃ, ಹರಿಜನರಿಗೆಂದೇ 70 ರಿಂದ 80 ಕೋಟಿ ರೂಪಾಯಿ ಹಣವನ್ನು ಪ್ರತ್ಯೇಕವಾಗಿ ನಿಗದಿ ಮಾಡಬಹುದು. ಆದರೂ ಈ ಹಣ ಅತ್ಯಲ್ಪವೇ. ವಾಸ್ತವವಾಗಿ, ಈ ಬೃಹತ್ ಪಂಚವಾರ್ಷಿಕ ಯೋಜನೆಗಳಿಂದ ಶ್ರೀಮಂತರು ಮತ್ತಷ್ಟು ಶ್ರೀಮಂತರಾಗುತ್ತಾರೆಯೇ ಹೊರತು ದಲಿತರಿಗೆ ಇವುಗಳಿಂದ ಯಾವುದೇ ಪ್ರಯೋಜನ ದೊರೆಯದು.

ಈ ಸನ್ನಿವೇಶಗಳಲ್ಲಿ ವಿಶಾಲ ಮನೋಭಾವವನ್ನು ಬೆಳೆಯಿಸಿಕೊಳ್ಳುವಂತೆ ಇಡೀ ಸಮಾಜವನ್ನು ನಾನು ಕೋರುತ್ತಿದ್ದೇನೆ. ನಮ್ಮ ಒಟ್ಟು ಜನಸಂಖ್ಯೆ 48 ಕೋಟಿ. ಅದರಲ್ಲಿ 7-8 ಕೋಟಿ ಹರಿಜನರಿದ್ದಾರೆ. ಒಟ್ಟಾರೆ 43 ಕೋಟಿ ಹಿಂದುಳಿದವರಿದ್ದಾರೆ. ಮಹಿಳೆಯರ ಜಾತಿ ಯಾವುದೇ ಇರಬಹುದು, ಅವರೆಲ್ಲರನ್ನೂ ನಾನು ಹಿಂದುಳಿದವರೆಂದು ಪರಿಗಣಿಸುತ್ತೇನೆ. ದೇಶದಲ್ಲಿ 43 ಕೋಟಿ ಹಿಂದುಳಿದ ಸ್ತ್ರೀ ಪುರುಷರಿದ್ದಾರೆ. ಮೇಲ್ಜಾತಿಯವರಲ್ಲೂ ಬಡವರಿದ್ದಾರೆ. ಇಂಥವರ ಸಂಖ್ಯೆ ಸುಮಾರು ನಾಲ್ಕೂವರೆ ಕೋಟಿ. ಹೀಗಾಗಿ, ಶ್ರೀಮಂತರ ಸಂಖ್ಯೆ ಕೇವಲ 50 ಲಕ್ಷ. ಅದರಲ್ಲಿ ಬಹುಪಾಲು ಜನ ಮೇಲ್ಜಾತಿಗೆ ಸೇರಿದವರು. ಈಗಿನ ಸಾಮಾಜಿಕ ವ್ಯವಸ್ಥೆಯಲ್ಲಿ ಮೇಲ್ಜಾತಿಯ ಈ ನಾಲ್ಕೂವರೆ ಕೋಟಿ ಬಡವರು ತಮ್ಮ ಜಾತಿಯ ಜನರೊಂದಿಗೆ ಯಾವಾಗಲೂ ಗುರುತಿಸಿಕೊಳ್ಳ ಬಯಸುತ್ತಾರೆ ಹಾಗೂ ಅವರಿಂದಲೇ ಮಾರ್ಗದರ್ಶನ ಪಡೆಯುತ್ತಾರೆಂಬ ಸೂಕ್ಷ್ಮವನ್ನು ನಾವು ಅರ್ಥ ಮಾಡಿಕೊಳ್ಳಲು ಪ್ರಯತ್ನಿಸದೇ ಹೋದರೆ ಯಾವ ಸುಧಾರಣೆಯೂ ಆಗದು. ಈ ನಾಲ್ಕೂವರೆ ಕೋಟಿ ಜನರು ತಮ್ಮ ಜಾತಿಯ ಶ್ರೀಮಂತರೊಂದಿಗಿನ ತಮ್ಮ ಸಂಬಂಧವನ್ನು ಕಡಿದುಕೊಳ್ಳುವವರೆಗೂ ಮತ್ತು 43 ಕೋಟಿ ಹಿಂದುಳಿದ ವರ್ಗದ ಜನರೊಂದಿಗೆ ಬೆರೆತು ಒಂದಾಗುವವರೆಗೂ ಹೆಚ್ಚಿನದೇನನ್ನೂ ಸಾಧಿಸಲಿಕ್ಕಾಗದು. 43 ಕೋಟಿ ಹಿಂದುಳಿದ ಜನರು ಹಾಗೂ ಮೇಲ್ಜಾತಿಯ ನಾಲ್ಕೂವರೆ ಕೋಟಿ ಬಡವರು ಒಂದುಗೂಡಿದಾಗ ಒಂದು ಪ್ರಬಲ ಶಕ್ತಿ ರೂಪುಗೊಳ್ಳುತ್ತದೆ ಮತ್ತು ಆ ಶಕ್ತಿ ಐವತ್ತು ಲಕ್ಷ ಶ್ರೀಮಂತರ ಭವ್ಯ ಬಂಗಲೆಗಳನ್ನು ಧ್ವಂಸಗೊಳಿಸಿ ಪುಡಿಪುಡಿ ಮಾಡಬಹುದು. ಹಾಗಾದಾಗ ಮಾತ್ರವೇ ನಾವು ಆಧುನಿಕ ಭವ್ಯ ಭಾರತವನ್ನು ನಿರ್ಮಿಸಬಹುದು. ಇದನ್ನು ಬಿಟ್ಟರೆ ಮತ್ತಾವುದೇ ಪರ್ಯಾಯ ಮಾರ್ಗವಿಲ್ಲ.

ಭಾರತದಲ್ಲಿ ಏಕತೆ ಇಲ್ಲ ಎಂಬಂತೆ ಕಂಡು ಬರುತ್ತಿರುವುದು ನಿಜ. ಈ ಸರ್ಕಾರವು ಎಸಗಿರುವ ಪಾಪಕರ್ಮಗಳು ಹಾಗೂ ದುಷ್ಕೃತ್ಯಗಳಲ್ಲಿ ಅತ್ಯಂತ ಘೋರ ಪಾಪ ಕೃತ್ಯ ಎಂದರೆ, ನನಗನ್ನಿಸಿರುವಂತೆ, ಜನತೆಯ ಮನೋಭಾವನೆಯನ್ನೆ ಒಡೆದು ಆಳುವ ನೀತಿ.

ಜಾತಿ ಮತಭಾವವಿಲ್ಲದ ಮತ್ತು ಸಮೀಚೀನ ದೃಷ್ಟಿಕೋನ ಎಲ್ಲಿಯೂ ಕಂಡು ಬರುತ್ತಿಲ್ಲ. ಸಾಮೂಹಿಕ ಪ್ರಯತ್ನಗಳಿಂದ ಇಡೀ ರಾಷ್ಟ್ರದ ಪ್ರಗತಿ ಮತ್ತು ಏಳಿಗೆ ಆಗುತ್ತದೆಂಬುದರಲ್ಲಿ ಜನತೆಗೆ ನಂಬುಗೆ ಇಲ್ಲ. ಪ್ರತಿಯೊಬ್ಬರೂ ರಾಷ್ಟ್ರದ ಸಂಪತ್ತಿನಲ್ಲಿ ತನ್ನ ಪಾಲನ್ನು ಹೆಚ್ಚಿಸಿಕೊಳ್ಳುವ ಯತ್ನದಲ್ಲಿ ತೊಡಗಿದ್ದಾರೆ.

ವಿಶಾಲ ಮನೋಭಾವ ತಳೆಯದೇ ಹೋದಲ್ಲಿ, ಹರಿಜನರು ಹಾಗೂ ಹಿಂದುಳಿದ ವರ್ಗಗಳ ಜನರಿಗೆ ನ್ಯಾಯವಾಗಿ ಸಿಗಬೇಕಾದ ಪಾಲು ಎಂದಿಗೂ ಸಿಗುವುದಿಲ್ಲ. ಹರಿಜನರ ಏಳಿಗೆ ಆದಾಗ ಮಾತ್ರ ಪ್ರತಿಯೊಬ್ಬರ ಏಳಿಗೆ ಸಾಧ್ಯ. ಹರಿಜನರು ಹಾಗೂ ಹಿಂದುಳಿದ ವರ್ಗಗಳ ಜನರ ಸಂಬಳವನ್ನು 50 - 60 ರೂಪಾಯಿಗಳಿಗೆ ಏರಿಸಿದರೆ ತಮ್ಮ ವರಮಾನ ಕಡಿಮೆಯಾಗುವುದೆಂಬ ಭಾವನೆ ಅವರನ್ನು ನೇಮಿಸಿಕೊಳ್ಳುವ ಜನರ ಮನಸ್ಸಿನಲ್ಲಿ ಬೇರೂರಿದೆ. ಈ ರೀತಿ ಆಲೋಚಿಸುವುದನ್ನು ಅವರು ನಿಲ್ಲಿಸದ ಹೊರತು ಮತ್ತು ಹರಿಜನರು ಕುಂಬಾರರು, ಮನೆ ಕೆಲಸಗಾರರು ಹಾಗೂ ಝಾಡಮಾಲಿಗಳು ಇವರೆಲ್ಲರ ಏಳಿಗೆಯಾದರೆ ಮಾತ್ರ ದೇಶ ಪ್ರಗತಿ ಸಾಧಿಸಬಹುದೆಂದು ಅವರು ವಿಶ್ವಾಸ ತಳೆಯುವವರೆಗೆ ಈ ಸಮಸ್ಯೆಗೆ ಪರಿಹಾರವೇ ಇಲ್ಲ.

ಮಾನ್ಯ ಸಭಾಧ್ಯಕ್ಷರೆ, ಝಾಡಮಾಲಿಗಳ ಸಂಬಳವು ಪ್ರಧಾನಮಂತ್ರಿಯ ಸಂಬಳದಷ್ಟೇ ಇರಬೇಕೆಂದು ನಾನು ಹೇಳ ಹೊರಟಿದ್ದೆ. ಆದರೆ, ಪ್ರಧಾನಮಂತ್ರಿ ಸ್ಥಾನದ ಕಾರ್ಯ ಭಾರವನ್ನು ಅವಲೋಕಿಸಲಾಗಿ, ಹಾಗೆ ಹೇಳುವುದು ಸೂಕ್ತವಲ್ಲ ವಾದ್ದರಿಂದ ಹಾಗೆ ನಾನು ಹೇಳ ಹೋಗುವುದಿಲ್ಲ. ಆದರೂ ಅವರ ಸಂಬಳ ಸಚಿವರ ಉದಾ: ಶ್ರೀ ಕೃಷ್ಣಮಾಚಾರಿಯವರಂತಹ ಒಬ್ಬ ಸಚಿವರ ಸಂಬಳಕ್ಕೆ ಸಮಾನವಾಗಿರಬೇಕು. ಒಬ್ಬ ಜಾಡಮಾಲಿಗೆ ತಿಂಗಳಿಗೆ 300 -- 400 ರೂಪಾಯಿ ಸಂಬಳ ಕೊಟ್ಟರೆ ಅದರಿಂದ ಭಾರೀ ಪರಿಣಾಮವೇ ಆಗುತ್ತದೆ. ಆಗ, ಈ ಮೇಲ್ಜಾತಿಯವರು ಕಸ ಗುಡಿಸುವ ಹಾಗೂ ಶೌಚಾಲಯವನ್ನು ಸ್ವಚ್ಛಗೊಳಿಸುವ ಕೆಲಸಕ್ಕೂ ಬರುತ್ತಾರೆ. ಹಾಗಾದಾಗ ಮಾತ್ರ ದೇಶದ ಪ್ರಗತಿ ಸಾಧ್ಯ ಎಂದು ಹೇಳುವುದಕ್ಕೂ ನಾನು ಹಿಂಜರಿಯುವುದಿಲ್ಲ.

-:=:=:-

# 11. ಭಾರತ ಇತಿಹಾಸ ಪುಸ್ತಕ - ವಿಮರ್ಶೆ

ಇಂದು ನಾವು, ವಿಶ್ವ ಸಂಸ್ಥೆಯ ಅಂಗಸಂಸ್ಥೆಯಾದ ಯುನೆಸ್ಕೊ ರಚಿಸಿದ ಅಂತರರಾಷ್ಟ್ರೀಯ ಆಯೋಗವು ಹೊರ ತಂದಿರುವ ಮಾನವ ಇತಿಹಾಸ ಗ್ರಂಥದ ವಸ್ತುವಿಷಯದ ಬಗ್ಗೆ ಚರ್ಚಿಸುತ್ತಿದ್ದೇವೆ. ಮಾನವ ಇತಿಹಾಸ ಕುರಿತಂತೆ ಹೊರ ತಂದಿರುವ ಪ್ರಥಮ ಪುಸ್ತಕ ಇದಾಗಿದ್ದು ಪೌರಾತ್ಯ ಇತಿಹಾಸ ಮತ್ತು ನಾಗರಿಕತೆಯ ಉಗಮ ಕುರಿತ ವಿವರಗಳು ಅದರಲ್ಲಿವೆ. ಮಾನವ ಇತಿಹಾಸ ಕುರಿತ ಅಂತರರಾಷ್ಟ್ರೀಯ ಆಯೋಗವು ಇದನ್ನು ಪ್ರಕಟಿಸಿದ್ದಾಗ್ಯೂ ಪ್ರಕಟಣೆಯ ವಿಷಯದಲ್ಲಿ, ವಿಶ್ವಸಂಸ್ಥೆ, ಯುನೆಸ್ಕೊ ಹಾಗೂ ಭಾರತ ಸರ್ಕಾರಕ್ಕೆ ಸಮಾನ ಹೊಣೆಗಾರಿಕೆ ಇದೆ. ಏಕೆಂದರೆ ಇತಿಹಾಸ ಕುರಿತ ಈ ಅಂತರರಾಷ್ಟ್ರೀಯ ಆಯೋಗದ ಜೊತೆ ಪತ್ರವ್ಯವಹಾರ ಮಾಡಿದವರಲ್ಲಿ ಡಾ:ರಾಧಾಕೃಷ್ಣನ್ ಅವರ ಹೆಸರು ಎದ್ದುಕಾಣುತ್ತಿದೆ. ಇದಿಷ್ಟು ಜವಾಬ್ದಾರಿಗೆ ಸಂಬಂಧಿಸಿದ ಮಾತಾಯಿತು.

ಪ್ರಾಯಶಃ ಇದೇ ಮೊದಲನೇ ಸಲ ಲೋಕಸಭೆಯಲ್ಲಿ ಒಂದು ಪ್ರೌಢ ಕೃತಿಯ ಬಗ್ಗೆ ಚರ್ಚೆ ನಡೆಸುತ್ತಿದ್ದೇವೆ. ಆದ್ದರಿಂದ, ಸರ್ಕಾರ ಹಾಗೂ ಮಾನ್ಯ ಸಚಿವರು ಈ ಗ್ರಂಥದ ಮೂಲಭೂತ ಅಂಶಗಳ ಬಗ್ಗೆ ಹಾಗೂ ಒಂದು ರೀತಿಯಲ್ಲಿ ಅದರ ಗುಣವೈಶಿಷ್ಟ್ಯವನ್ನು ಪುನರ್‌ರೂಪಿಸುವ ಬಗ್ಗೆ ಗಮನಕೊಡುವುದು ಒಳ್ಳೆಯದು. ಗೌಣವಾದ ಮತ್ತು ಸಣ್ಣಪುಟ್ಟ ಅಂಶಗಳ ಬಗ್ಗೆ ಮಾನ್ಯ ಸಚಿವರು ಉತ್ತರ ನೀಡಬೇಕೆಂದು ನಾನು ಬಯಸುವುದಿಲ್ಲ.

ಇತಿಹಾಸ ರಚನೆಯಲ್ಲಿ ತಪ್ಪುಗಳಾದರೆ ಹಾಗೂ ತಪ್ಪು ವ್ಯಾಖ್ಯಾನ ಮಾಡಿ ಮತ್ತು ವಿಷಯ ತಿರುಚಿ ಇತಿಹಾಸ ಬರೆದರೆ ಎಂಥ ಅನಾಹುತಗಳು ಆಗುತ್ತವೆ ಎಂಬುದು ನಮಗೆಲ್ಲರಿಗೂ ಗೊತ್ತು. ಇತಿಹಾಸ ಎಂದರೇನು? ಅದು ನಮ್ಮ ಗತಕಾಲದ ವಿವರಗಳ ದಾಖಲೆ. ಇತಿಹಾಸವೆಂದರೆ, ನಮ್ಮ ಗತಕಾಲದ ವಿಷಯಗಳ ಗ್ರಹಿಕೆ, ಅದು ಪೂರ್ಣವಾಗಿರಬಹುದು, ಅಪೂರ್ಣವಾಗಿರಬಹುದು, ತಪ್ಪಾಗಿರಬಹುದು ಅಥವಾ ಸರಿಯಾಗಿರಬಹುದು. ಗತಕಾಲದ ವಿಷಯಗಳ ಗ್ರಹಿಕೆ ಆಧಾರದ ಮೇಲೆ ನಮ್ಮ ಭವಿಷತ್ ಮತ್ತು ವರ್ತಮಾನ ರೂಪಿತವಾಗುತ್ತದೆ. ಹಿಂದಿನದನ್ನು ನಾವು ತಪ್ಪಾಗಿ ಗ್ರಹಿಸಿದ್ದಾದರೆ ನಮ್ಮ ಭವಿಷತ್ ಹಾಗೂ ವರ್ತಮಾನಗಳು ಸಹ ತಪ್ಪಾಗಿ ರೂಪುಗೊಳ್ಳುತ್ತವೆ. ಈ ಸಂಬಂಧದಲ್ಲಿ ನಾನು ಒಂದು ಉದಾಹರಣೆ ನೀಡಬಯಸುತ್ತೇನೆ. ನಮ್ಮ ದೇವಸ್ಥಾನಗಳು ಮಧ್ಯಕಾಲೀನ ಅವಧಿಯಲ್ಲಿ ನಾಶವಾದವು. ಆದರೆ, ಅವುಗಳ ಇತಿಹಾಸವನ್ನು ಈಗ ದಾಖಲುಮಾಡಿ, ದೇವಸ್ಥಾನಗಳು ಮುಸ್ಲಿಮ್ ಆಕ್ರಮಣಕಾರರಿಂದ ಧ್ವಂಸಗೊಂಡವೆಂದು ಮಾತ್ರ ಬರೆದಲ್ಲಿ,

ಆಗ ಅದು ಅರ್ಧಸತ್ಯವಾಗುತ್ತದೆ. ಭಾಗಶಃ ಐತಿಹಾಸಿಕ ಸತ್ಯವಾಗುತ್ತದೆ, ಕೇವಲ ಪ್ರಾರಂಭಿಕ ವಿಷಯವಾಗುತ್ತದೆ. ಆದರೆ ನಮ್ಮ ಪೂರ್ವಜರು ವಿದೇಶಿ ಆಕ್ರಮಣಕಾರರ ದಾಳಿಯನ್ನು ತಡೆಯಲಾರದಷ್ಟು ಅಶಕ್ತರಾಗಿದ್ದರು ಹಾಗೂ ಅಸಮರ್ಥರಾಗಿದ್ದರೆಂದು ದಾಖಲಿಸಿದ್ದಾದರೆ, ಆಗ ಅದು ಸ್ವಲ್ಪಮಟ್ಟಿಗೆ ಪೂರ್ಣ ಇತಿಹಾಸವಾಗುತ್ತದೆ. ನಮ್ಮ ಸೋಲಿನ ಕಟುಸತ್ಯವನ್ನುತಿಳಿಸುವ ಮತ್ತು ಮುಂದೆ ಇಂಥ ಘಟನೆಗಳು ನಡೆಯದಂತೆ ಎಚ್ಚರವಹಿಸಬೇಕೆಂಬ ತಿಳಿವಳಿಕೆ ಮೂಡಿಸುವ ಇತಿಹಾಸವಾಗುತ್ತದೆ. ಅಷ್ಟೇ ಅಲ್ಲ, ಇಂದು, ನಮ್ಮೊಂದಿಗೆ ಬಾಳುತ್ತಿರುವ ಮುಸ್ಲಿಮರ - ಅವರು ಒಂದು ಕಾಲಕ್ಕೆ ಹಿಂದುಗಳೇ ಆಗಿದ್ದವರಲ್ಲವೇ - ಕೈವಾಡ ಈ ಆಕ್ರಮಣಗಳಲ್ಲಿ ಇರಲಿಲ್ಲ, ಅವರ ವಿರುದ್ಧ ನಾವು ಸೇಡಿನ ಮನೋಭಾವ ತಳೆಯಕೂಡದೆಂಬುದು ಆದರಿಂದ ಮನದಟ್ಟಾಗುತ್ತದೆ. ನಾವು ಇತಿಹಾಸವನ್ನು ನಿರ್ಲಿಪ್ತವಾಗಿ ಹಾಗೂ ರೋಷಾವೇಶವಿಲ್ಲದೆ ಮೌಲ್ಯಮಾಪನ ಮಾಡಲು ಯತ್ನಿಸಬೇಕು.

ಈ ಪುಸ್ತಕದಲ್ಲಿರುವ ತಪ್ಪುಗಳು ತೀರ ಚಿಕ್ಕಪುಟ್ಟವು ಎಂದು ತೋರಬಹುದು. ಆದರೆ, ಭಾರತೀಯ ಮತ್ತು ವಿದೇಶಿ ಲೇಖಕರು ಭಾರತದ ಇತಿಹಾಸವನ್ನು ಯಾವ ತೆರನಾಗಿ ವಿಕೃತಗೊಳಿಸಿದ್ದಾರೆಂಬುದನ್ನು ನಾನು ಉದಾಹರಣೆಗಳ ಮೂಲಕ ತೋರಿಸಲು ಯತ್ನಿಸುತ್ತೇನೆ. ಈ ದೇಶದಲ್ಲಿ ರಚನೆಯಾಗಿರುವ ಸೃಜನಶೀಲ ಕೃತಿಗಳೆಲ್ಲವೂ ಮೂಲತಃ ಚೀನಾ, ಈಜಿಪ್ಟ್ ಮುಂತಾದ ದೇಶಗಳ ಕೃತಿಗಳ ಅನುಕರಣೆ ಎಂದು ಅವರು ಪರಿಗಣಿಸುತ್ತಾರೆ. ಹೀಗಾಗಿ, ವಿಶ್ವಸಂಸ್ಥೆ ವತಿಯ ಈ ಇತಿಹಾಸ ಪುಸ್ತಕದ ಲೇಖಕರಾದ ಲೆನಾರ್ಡ್ ವೂಲಿಯವರು, ಸಾಂಚಿಯ ಬೃಹತ್ ಸ್ತೂಪದ ಉತ್ತರ ಮಹಾದ್ವಾರದ ವಾಸ್ತುಶಿಲ್ಪವು ಚೀನಾದ ಮರದ ವಾಸ್ತುಶಿಲ್ಪದ ಅನುಕರಣೆ ಎಂದು ಭಾವಿಸುತ್ತಾರೆ. ಸನ್ಮಾನ್ಯ ಸಭಾಧ್ಯಕ್ಷರೆ, ಆಶ್ಚರ್ಯದ ಸಂಗತಿಯೆಂದರೆ, ಈ ತಪ್ಪನ್ನು ಎತ್ತಿತೋರಿಸಬೇಕಾಗಿದ್ದ, ಭಾರತೀಯ ಇತಿಹಾಸ ಕುರಿತ ಈ ಆಯೋಗದ ಸದಸ್ಯರಲ್ಲಿ ಯಾರೂ ಎತ್ತಿತೋರಿಸಲಿಲ್ಲ. ಡಾ|| ರಾಧಾಕೃಷ್ಣನ್ ಅವರೂ ಎತ್ತಿತೋರಿಸಲಿಲ್ಲ ಅಥವಾ ಅವರಷ್ಟೇ ಸಾಮರ್ಥ್ಯವುಳ್ಳ ಯಾವ ವ್ಯಕ್ತಿಯೂ ಎತ್ತಿತೋರಿಸಲಿಲ್ಲ, ಅದನ್ನು ತೋರಿಸಿದವರು ರಶಿಯಾದ ಪ್ರೊಫೆಸರ್ ಡಯಕ್ನಾಫ್ ಮತ್ತು ಶ್ರೀಯುತ ಇಲ್ಕಿನ್.

ಲೆನಾರ್ಡ್ ವೂಲಿಯವರು ಒಂದು ಸಣ್ಣ ಟಿಪ್ಪಣಿ ಬರೆದು, ಚೀನಾದ ಪ್ರಭಾವಕ್ಕೆ ಸಂಬಂಧಿಸಿದಂತೆ ಹೇಳುವುದಾದರೆ, ಪ್ರೊಫೆಸರ್ ಇಲ್ಕಿನ ಅವರು ಈ ತಪ್ಪನ್ನು ಗುರುತಿಸಿರುವುದೇನೋ ನಿಜ. ಆದರೆ, ಯಾವ ಪುರಾವೆ ಇಲ್ಲದಿದ್ದರೂ ಆ ಕಲ್ಪನೆ ನನ್ನಲ್ಲಿತ್ತು. ಈ ಪುಸ್ತಕದಲ್ಲಿ ಆ ನನ್ನ ಭಾವನೆಯನ್ನು ದಾಖಲು ಮಾಡುವುದು ಸೂಕ್ತ ಎಂದು ಭಾವಿಸಿದೆ ಎಂದು ಹೇಳಿದ್ದಾರೆ. ಇವರು ಬರೆಯುವ ಇತಿಹಾಸ ಇಂಥಾದ್ದು

ಸ್ತೂಪದ ನಿರ್ಮಾಣ ಸಾಂಚಿಯಲ್ಲಿ, ಪ್ರೇರಣೆ ಚೀನದಿಂದ ಬಂತಂತೆ. ವಿಶ್ವಸಂಸ್ಥೆ ಹೊರತಂದ ಪುಸ್ತಕದಲ್ಲಿನ ತಪ್ಪನ್ನು ರಶಿಯಾದ ಪ್ರೊಫೆಸರ್ ಇಲ್ಯಿನ್ ಎತ್ತಿತೋರಿಸಿದ್ದಾರೆ. ಎಲ್ಲಕ್ಕೂ ಮಿಗಿಲಾಗಿ ಪ್ರೊ. ವೂಲಿ ಎಂಬುವರು ಯಾವುದೇ ಅಧಿಕೃತ ಪುರಾವೆ ಇಲ್ಲದಿದ್ದಾಗ್ಯೂ, ತನ್ನ ಮನಸ್ಸಿಗೆ ಬಂದ ಕಲ್ಪನೆಯನ್ನು ಈ ಪುಸ್ತಕದಲ್ಲಿ ದಾಖಲ್ಮಾಡುವುದು ಸರಿಯೆಂದು ಭಾವಿಸಿದ್ದಾರೆ. ಡಾ॥ಸಿಂಗ್ ಅವರೇ, ಆತನೊಬ್ಬ ಸಿನಿಕನೆಂದು ನೀವು ಹೇಳಬಹುದು. ನಾನು ಹೇಳುವುದೇನೆಂದರೆ ಎಲ್ಲ ಇತಿಹಾಸಕಾರರು, ಭಾರತೀಯರಿರಲಿ ಅಥವಾ ವಿದೇಶೀಯರಾಗಿರಲಿ, ಸಿನಿಕತನ ಅವರನ್ನು ಬಿಟ್ಟಿದ್ದಲ್ಲ. ಇದರಿಂದೇನಾಗಿದೆಯೆಂದರೆ ಭಾರತದಲ್ಲಿ ರಚನೆಯಾಗಿರುವ ಪ್ರತಿಯೊಂದು ಉತ್ತಮ ಕೃತಿಯ ಮೂಲ ಇತರ ರಾಷ್ಟ್ರಗಳಲ್ಲಿರುತ್ತದೆಂದು ಇಂದು ಪ್ರತಿಯೊಂದು ಭಾರತೀಯ ಮಗು ಭಾವಿಸುವಂತಾಗಿದೆ. ಇಷ್ಟೇ ಅಲ್ಲ, ಇನ್ನೂ ಅವಾಂತರ ಆಗಿದೆ. ಆ ಗ್ರಂಥದಲ್ಲಿ ಒಂದು ಪುಸ್ತಕವನ್ನು ಉಲ್ಲೇಖಿಸಲಾಗಿದೆ. ಆ ಪುಸ್ತಕದ ಹೆಸರನ್ನು ಕೇಳಿದರೇನೇ ನಿಮಗೆ ನಗು ಬರುತ್ತದೆ , ಆಶ್ಚರ್ಯವೂ ಆಗುತ್ತದೆ. ಆ ಪುಸ್ತಕದ ಹೆಸರು ''5000 ವರ್ಷಗಳ ಪಾಕಿಸ್ತಾನ''.

...........ಎಲ್ಲ ಪಾಶ್ಚಿಮಾತ್ಯ ಲೇಖಕರೂ, ಪಾಕಿಸ್ತಾನವು ಹರಪ್ಪಾ ಮತ್ತು ಮೊಹೆಂಜೊದಾರೋ ನಾಗರಿಕತೆಯಷ್ಟೇ ಪ್ರಾಚೀನವಾದುದೆಂದು ತೋರಿಸಬಯಸುತ್ತಾರೆ. ಆ ಲೇಖಕರು, ಪಾಕಿಸ್ತಾನವನ್ನು ಈ ನಾಗರೀಕತೆಗಳೊಂದಗೆ ಗುರುತಿಸುತ್ತ, ಅವರು ಅದನ್ನು ಕಲೆ ಎನ್ನಬಹುದು ಅಥವಾ ಇತಿಹಾಸ ಎನ್ನಬಹುದು ಅಥವಾ ಇನ್ನಾವುದೇ ಹೆಸರಿನಿಂದ ಕರೆಯಬಹದು, ಪಾಕಿಸ್ತಾನ ಮತ್ತು ಪಾಕಿಸ್ತಾನದ ಬೇರನ್ನು ಬಲಪಡಿಸುವುದೇ ಅವರ ಉದ್ದೇಶ. ಅದೇ ರೀತಿ ನಾವು ಕೂಡ, ಇಂಗ್ಲೆಂಡಿನ ಇತಿಹಾಸ ಎರಡು ದಶಲಕ್ಷ ವರುಷಗಳಷ್ಟು ಹಿಂದಿನದು ಮತ್ತು ಭಾರತದ ಇತಿಹಾಸ 300 ಕೋಟಿ ವರ್ಷಗಳಷ್ಟು ಪ್ರಾಚೀನವಾದುದೆಂದು ಹೇಳಬಹುದಲ್ಲ. ನಮ್ಮ ಈ ಭೂಮಂಡಲದ ಇತಿಹಾಸದ ವರ್ಣನೆ ಹಾಗೆ ತಾನೆ. ಆದರೆ ಈ ರೀತಿಯ ವರ್ಣನೆಯಿಂದ ತುಂಬಾ ಅಪಾಯಕಾರಿ ಪರಿಣಾಮಗಳು ಉಂಟಾಗುತ್ತದೆ.

ಈ ಪುಸ್ತಕದಲ್ಲಿ ಇನ್ನೊಂದು ವಿಷಯ ಹೇಳಲಾಗಿದೆ. ಕೋಮುವಾದಿ ಜನರು ಇದನ್ನು ಗಮನಿಸಿಲ್ಲವೆಂದು ಕಾಣುತ್ತದೆ. ಒಂದು ದೃಷ್ಟಿಯಿಂದ ಇದೂ ಒಳ್ಳೆಯದೇ. ಅದು ಋಗ್ವೇದಕ್ಕೆ ಸಂಬಂಧಿಸಿದೆ. ಋಗ್ವೇದ ಎಷ್ಟು ಪ್ರಾಚೀನವಾದುದು ಎಂಬ ವಿವಾದಕ್ಕೆ ನಾನು ಇಳಿಯಲಾರೆ. ಆದರೆ, ಕ್ರಿ.ಪೂ. 1100 ಅಥವಾ 1200ಕ್ಕೆ ಮುಂಚೆ ಎಂದರೆ ಸುಮಾರು 3100 ವರ್ಷಗಳ ಹಿಂದೆ ಭಾರತದಲ್ಲಿ ಕಾವ್ಯ ಅಸ್ತಿತ್ವದಲ್ಲಿರಲಿಲ್ಲವೆಂಬ ವಾದವನ್ನು ಒಪ್ಪಿಕೊಳ್ಳಲು ನಾನು ಸಿದ್ಧನಿಲ್ಲ. ಈಜಿಪ್ಟ್ ಮತ್ತು ಚೀನಾ ದೇಶಗಳಲ್ಲಿ

ಕಾವ್ಯ ಅಸ್ತಿತ್ವದಲ್ಲಿತ್ತೆಂದು ಈ ಪುಸ್ತಕದಲ್ಲಿ ಉಲ್ಲೇಖಿಸಲಾಗಿದೆ. ಆದರೆ, ಸಂಗೀತ ಕಲೆಗೆ ಸಂಬಂಧಿಸಿದಂತೆ ನಾನು ಈ ವಾದವನ್ನು ಒಪ್ಪುತ್ತೇನೆ. ಈ ಪುಸ್ತಕ ದಲ್ಲಿ ಹಲವು ವಿಷಯಗಳನ್ನು ಹೇಳಲಾಗಿದೆ. ಆದರೆ, 3100 ವರ್ಷಗಳ ಹಿಂದೆ ಭಾರತದಲ್ಲಿ ಕಾವ್ಯ ಅಸ್ತಿತ್ವದಲ್ಲಿತ್ತೆಂಬುದನ್ನು ರುಜುವಾತುಪಡಿಸುವ ಯಾವುದೇ ಪುರಾವೆ ಇಲ್ಲವೆಂದು ಹೇಳಿ ಅದರ ಅಸ್ತಿತ್ವವನ್ನು ಸಾರಾಸಗಟಾಗಿ ತಳ್ಳಿಹಾಕಲಾಗಿದೆ. ಋಗ್ವೇದಕ್ಕೆ ಸಂಬಂಧಿಸಿದಂತೆ ಹೇಳುವುದಾದರೆ, ಆರ್ಯರು ಕ್ರಿ.ಪೂ. 1500 ರಲ್ಲಿ ಭಾರತಕ್ಕೆ ಬಂದರೆಂದು ಲೇಖಕರು ಹೇಳುತ್ತಾರೆ. ಜನರನ್ನು ಆರ್ಯರು, ಅನಾರ್ಯರು, ದ್ರಾವಿಡರು, ಮಂಗೋಲರು, ಎಂದು ವರ್ಗೀಕರಿಸುವುದು ಕೇವಲ ಪೊಳ್ಳು ಮಾತು. ನಾನು ಎತ್ತಿದ ಅಂಶಗಳನ್ನು ಮಾನ್ಯ ಭಗಲಾ ಸಾಹೇಬರು, ಇವುಗಳನ್ನು ಸಂಪೂರ್ಣವಾಗಿ ಅರ್ಥಮಾಡಿಕೊಳ್ಳದೆಯೇ, ಉತ್ತರಿಸಲು ಮುಂದಾಗಕೂಡದು. ನಾನು ಅವರನ್ನು ಆಕ್ಷೇಪಿಸುತ್ತಿಲ್ಲ, ನಡೆಯೋದೇ ಹೀಗೆ. ಆ ಲೇಖಕರ ಪ್ರಕಾರ, ಆರ್ಯರು ಸುಮಾರು 3500 ವರ್ಷಗಳ ಹಿಂದೆ ಭಾರತಕ್ಕೆ ಬಂದರಂತೆ, ಕಾವ್ಯ ಸೃಷ್ಟಿಯಾಗಲು 500-700 ವರ್ಷಗಳ ಅವಧಿ ಬೇಕಾಯಿತಂತೆ, ಈ ದೃಷ್ಟಿಯಿಂದ, ಆ ಲೇಖಕರ ಪ್ರಕಾರ ಋಗ್ವೇದದಂತಹ ಮಹಾ ಕಾವ್ಯ 2700 ಅಥವಾ 2800 ವರ್ಷಗಳಷ್ಟು ಹಿಂದೆ ಹುಟ್ಟಿತಂತೆ.

ದಯಮಾಡಿ ಮಾನ್ಯ ಭಗಲಾ ಅವರೇ ನೀವೇ ಹೇಳಿ, ಯಾವ ಪುಸ್ತಕದ ಬಗ್ಗೆ ಅವರೂ ಭಾಗಿಯಾಗಿದ್ದಾರೋ ಅದರ ರಚನೆ ವಿಷಯ ಡಾ|| ರಾಧಾಕೃಷ್ಣನ್ ಅವರಿಗೂ ಗೊತ್ತಿದೆಯೋ ಆ ಪುಸ್ತಕದಲ್ಲಿ, ಋಗ್ವೇದ ಅಷ್ಟೊಂದು ಪ್ರಾಚೀನವಾದು ದೆಂದು ಪರಿಗಣಿಸಿಲ್ಲ. ಲೇಖಕರು ಅದು ಹೊಸದೆಂದು ಪರಿಗಣಿಸಿದ್ದಾರಲ್ಲದೆ, ತನ್ನ ವಾದಕ್ಕೆ ಸಮರ್ಥನೆಯಾಗಿ ಅನೇಕ ಕಾರಣಗಳನ್ನೂ ಮಂಡಿಸಿದ್ದಾರೆ. ನಾನು ಒಂದೇ ಒಂದು ಅಂಶವನ್ನು ಮಾತ್ರ ಉಲ್ಲೇಖಿಸಬಯಸುತ್ತೇನೆ. ಈ ಕಾವ್ಯ ಪ್ರಾಚೀನವಾದುದು, ಅದನ್ನು ರುಜುವಾತುಪಡಿಸಲು ಬೇರೆ ಬೇರೆ ಆಧಾರಗಳಿವೆ. ಅಧ್ಯಾಪಕರಾದ ಹಾಗೂ ಕೌಶಾಂಬಿಯ ಉತ್ಖದನ ಕಾರ್ಯದಲ್ಲಿ ತೊಡಗಿರುವ ಶ್ರೀ ಗೋವರ್ಧನ ರಾಯ್ ಶರ್ಮಾ ಅವರನ್ನು, ಆಳವಾಗಿ ಅಧ್ಯಯನ ಮಾಡಿ ಈ ಬಗ್ಗೆ ಒಂದು ಲೇಖನವನ್ನು ಬರೆಯಲು ಕೇಳಿಕೊಂಡಿದ್ದೆ. ಅವರು ತಮ್ಮ ಲೇಖನವನ್ನು ನನಗೆ ಕಳಿಸಿದ್ದಾರೆ. ಅದರಲ್ಲಿ ಅನೇಕ ಭಾಗಗಳಿವೆ. ಅವರಲ್ಲಿ ಕೆಲವು ಶಾಸ್ತ್ರೀಯ ಲೇಖನಗಳಿವೆ. ಅವರ ಲೇಖನದಿಂದ ಒಂದು ವಾಕ್ಯವನ್ನು ಇಲ್ಲಿ ನಾನು ಓದಿ ಹೇಳಬಯಸುತ್ತೇನೆ. ಪ್ರಾಚೀನ ವಸ್ತುಗಳ ವಿಶ್ಲೇಷಣೆಗೆ, ಇಂಗಾಲ ವಿಕಿರಣ ತಂತ್ರವನ್ನು ಬಳಸುವ ಒಂದು ವಿಧಾನವಿದೆಯಂತೆ. ಈ ತಂತ್ರದಿಂದ ಪುರಾತನ ವಸ್ತುಗಳ ಕಾಲವನ್ನು ನಿರ್ಧರಿಸಬಹುದಂತೆ. ಇಂಗಾಲ ವಿಕಿರಣ ತಂತ್ರವನ್ನು ಬಳಸಿ ಕೌಶಾಂಬಿ ಬಗ್ಗೆ ವರದಿಯಪ್ರಕಟಿಸಲಾಯಿತೆಂದು ಶ್ರೀ ಶರ್ಮಾ ಹೇಳಿದ್ದಾರೆ. ಕೌಶಂಬಿ ಉತ್ಖನನ ಕಾಲದಲ್ಲಿ ದೊರೆತ ವಿವಿಧ ಬಗೆಯ ಮಡಿಕೆ, ಕುಡಿಕೆಗಳನ್ನು ಪರೀಕ್ಷಿಸಲಾಗಿ, ಈ ಮಡಿಕೆ,

ಕುಡಿಕೆಗಳಲ್ಲಿ ಕೆಲವು ಕ್ರಿ.ಪೂ. 2035 ರಿಂದ ಕಿ.ಪೂ. 640 ರ ಅವಧಿಯವೆಂದು ನಿಶ್ಚಿತವಾಗಿ ಹೇಳಬಹುದಾಗಿದೆ. ಕೌಶಾಂಬಿ ಮತ್ತಿತರ ಸ್ಥಳಗಳಲ್ಲಿ ನಡೆಸಿದ ಉತ್ಖನನಗಳಿಂದ ಕಂಡುಬಂದಿರುವ ಸಂಗತಿಗಳನ್ನು ವಿದೇಶಿ ವಿದ್ವಾಂಸರು ಉಪೇಕ್ಷಿಸಿದ್ದಾರೆ. ನಮ್ಮ ದೇಶದ ಇತಿಹಾಸಕಾರರೂ ಈ ಸಂಗತಿಗಳಿಗೆ ಹೆಚ್ಚಿನ ಪ್ರಾಶಸ್ತ್ಯ ನೀಡಿಲ್ಲ. ತಾವು ಇಷ್ಟಪಡುವುದಾದರೆ ನಾನು ಈ ಟಿಪ್ಪಣಿಯನ್ನು ತಮಗೆ ಕಳಿಸುತ್ತೇನೆ, ಅದನ್ನು ಸದನದ ಮುಂದೆ ಮಂಡಿಸಬಹುದು. ಭಾರತ ಸರ್ಕಾರವು, ಈ ಟಿಪ್ಪಣಿಯ ಹಿನ್ನೆಲೆಯಲ್ಲಿ ವಿಶ್ವಸಂಸ್ಥೆಯೊಂದಿಗೆ ಈ ವಿಷಯ ಕುರಿತು ಚರ್ಚಿಸಲು ಇಚ್ಛಿಸಬಹುದು.

ಭಾರತದಲ್ಲಿ ಉತ್ಕೃಷ್ಟವಾದದ್ದು ಏನೇ ಆಗಿದ್ದರೂ ಅದು ವಿದೇಶಿಯರದೇ ಕೊಡುಗೆ ಎಂದು ಇತಿಹಾಸಕಾರರು ಸದಾ ಭಾವಿಸುವುದು ಈಗಿನ ದೊಡ್ಡ ಸಮಸ್ಯೆ. ಈ ದೇಶದ ಮೂಲನಿವಾಸಿಗಳಿಗೆ ನವನವೀನ ಆವಿಷ್ಕಾರ ಮಾಡುವ ಸಾಮರ್ಥ್ಯವೇ ಇಲ್ಲ ಎಂಬುದು ಅವರ ಭಾವನೆ. ಈ ಪುಸ್ತಕದಲ್ಲಿ ಹರಪ್ಪಾದ ಬೃಹತ್ ಕೋಟೆ ಕೊತ್ತಳಗಳನ್ನು ಕುರಿತು ಹೇಳುತ್ತಾ.

ನನಗೆ ಇನ್ನೂ ಮೂರ್ನಾಲ್ಕು ನಿಮಿಷಗಳ ಕಾಲಾವಕಾಶ ಸಾಕು. ಅಷ್ಟರೊಳಗೆ ನನ್ನ ಮಾತು ಮುಗಿಸುತ್ತೇನೆ. ಅದನ್ನು ಹಿಂದಿಗೆ ಭಾಷಾಂತರಿಸುವ ಬದಲು ನಾನು ಇಂಗ್ಲೀಷ್ ಸಾಲುಗಳನ್ನೇ ಓದಿ ಹೇಳುತ್ತೇನೆ. ಲೇಖಕ ಈ ರೀತಿ ಹೇಳಿದ್ದಾರೆ:

> "The elaborate fortification of the citadels would hardly have been necessary to protect the cities against raiding parties from the mountains of Baluchistan, more probably they were intended to overawe the countryside, the assumption being that the ruler and citizens were of an alien stock which had reduced their indigenous inhabitants to the status of serfs."

ಇದು ಇತಿಹಾಸಕಾರರು ಬರೆಯುವ ರೀತಿ, ನಾನು ಇನ್ನೂ ಹೆಚ್ಚು ಹೇಳಬೇಕಾಗಿಲ್ಲ. ಈ ಸಂದರ್ಭದಲ್ಲಿ ನಾನು ರಶಿಯಾದ ಇತಿಹಾಸಕಾರರನ್ನು ಶ್ಲಾಘಿಸುತ್ತೇನೆ. ಅವರು ತಮ್ಮ ದೇಶದ ಜಾರ್ ಚಕ್ರವರ್ತಿಗಳ ಬಗ್ಗೆ ನ್ಯಾಯೋಚಿತವಾದ ಅಭಿಪ್ರಾಯವನ್ನು ನೀಡಿಲ್ಲ. ಆದರೂ ಅವರನ್ನು ನಾನು ಅಭಿನಂದಿಸುತ್ತೇನೆ. ಏಕೆಂದರೆ,

ಈ ಇತಿಹಾಸಕಾರರು ಪ್ರಾಚೀನ ಭಾರತದ ಇತಿಹಾಸ ಬರೆಯುವಾಗ ಬ್ರಿಟಿಷ್ ಹಾಗೂ ಇತರ ಪಾಶ್ಚಿಮಾತ್ಯ ಇತಿಹಾಸಕಾರರಿಗಿಂತಲೂ ಉತ್ತಮವಾದುದನ್ನೇ ಬರೆದಿದ್ದಾರೆ. ಪ್ರೊ. ಐ.ಎಂ. ಡಯಕ್ನಾಫ್ ಮತ್ತು ಪ್ರೊ. ಜಿ.ಎಫ್.ಇಲ್ಯಿನ್ ಈ ರೀತಿ ಬರೆದಿದ್ದಾರೆ.

> '' ಇಲ್ಲಿನ ಆಳರಸರು ವಿದೇಶಿ ಮೂಲದವರಾಗಿದ್ದರೆಂಬುದಕ್ಕೆ ಯಾವುದೇ ನಿರ್ಣಾಯಕ ಆಧಾರಗಳು ಇಲ್ಲವೆಂಬುದನ್ನು ಪ್ರೊ.ಐ.ಎಂ. ಡಯಾಕ್ನಾಫ್ ಮತ್ತು ಪ್ರೊ. ಜಿ. ಎಫ್. ಇಲ್ಯಿನ ಗಮನಿಸಿದ್ದಾರೆ. ಮಧ್ಯಕಾಲೀನ ಅವಧಿಯಲ್ಲಿ ಜರ್ಮನಿಯ ಬರೋನಿಯಲ್ ಕೋಟೆಗಳಂತೆಯೇ ಈ ಕೋಟೆಗಳೂ ಇದ್ದಿರಬಹುದು.''

ಈ ಕೋಟೆಯನ್ನು ವಿದೇಶಿಯರು ನಿರ್ಮಿಸಿದರೆಂಬುದನ್ನು ಮತ್ತು ಈ ಕೋಟೆಯ ನಿವಾಸಿಗಳು ಪರಕೀಯರೆಂಬುದನ್ನು ರುಜುವಾತುಪಡಿಸಲು ಎರಡು ಆಧಾರಗಳಿವೆಯೆಂದು ಸರ್ ಲೆನಾರ್ಡ್ ವೂಲಿ ಅವರು ಬರೆದಿದ್ದಾರೆ. ಈ ದೇಶಕ್ಕೆ ಹೊಸ ನಾಗರಿಕತೆ ಬಂತೆಂಬುದು ನಿಸ್ಸಂದೇಹ. ಆದರೆ, ನಮ್ಮದೇ ಪ್ರಾಚೀನ ನಾಗರಿಕತೆಯ ಅವಶೇಷಗಳು ಈಗಲೂ ಇವೆ. ಜರ್ಮನಿ, ರಶಿಯಾ ಮತ್ತು ಇಂಗ್ಲೆಂಡ್ ದೇಶಗಳಲ್ಲೂ ಇದೇ ರೀತಿಯಲ್ಲಿ ಸಂಶೋಧನೆ ನಡೆಸಿದ್ದಾದರೆ, ಅವುಗಳ ನಡುವೆ ಆಗಿ ಹೋದ ಅನೇಕ ಯುದ್ಧಗಳ ಭಗ್ನಾವಶೇಷಗಳು, ಬೇರೆ ಬೇರೆ ನಾಗರಿಕತೆಗಳ ಅವಶೇಷಗಳು ಕಂಡು ಬರಬಹುದೆಂಬುದನ್ನು ನಾನು ಇಲ್ಲಿ ಹೇಳಬಯಸುತ್ತೇನೆ. ಹೊಸ ನಾಗರಿಕತೆಯು ಪರಸ್ಪರ - ಪ್ರಭಾವದಿಂದ ಹಾಗೂ ಸಹಜ ಜ್ಞಾನದಿಂದ ಹುಟ್ಟುತ್ತದೆ. ಆದರೆ, ದೇಶಿಯ ಮೂಲ ನಿವಾಸಿಗಳ ಈ ದೇಶದಲ್ಲಿ ಹೊಸ ನಾಗರಿಕತೆಯು ಬೆಳೆಯಬಲ್ಲದೆಂಬುದನ್ನು ಇತಿಹಾಸಕಾರರು ಒಪ್ಪಿಕೊಳ್ಳಲು ಸಿದ್ಧರಾಗಿಲ್ಲ. ಇಂಥ ಇತಿಹಾಸಕಾರರೇ ಭಾರತದ ನೈಜ ಇತಿಹಾಸವನ್ನು ಪೂರ ಹಾಳು ಮಾಡಿದ್ದಾರೆಂದು ನಾನು ಹೇಳ ಬಯಸುತ್ತೇನೆ. ಏಕೆಂದರೆ, ನಮ್ಮ ದೇಶದಲ್ಲಿ ಯಾವುದೇ ರೀತಿಯ ಪುನರುಜ್ಜೀವನ ಕಾರ್ಯ ಆಗಿದ್ದರೆ, ಅದು ವಿದೇಶಿ ಮೂಲದವರ ಎಂದರೆ, ಅಫ್‌ಘಾನರು, ಮೊಘಲರು ಅಥವಾ ಬ್ರಿಟಿಷರ ನಡುವಣ ಭೌತಿಕ ಕೊಡು - ಕೊಳ್ಳುವಿಕೆಯ ಫಲ ಎನ್ನುವ ಪರಿಕಲ್ಪನೆ ನಮ್ಮ ದೇಶದ ಹೆಸರಾಂತ ಇತಿಹಾಸಕಾರರ ಮನದಲ್ಲಿ ಬೇರೂರಿಬಿಟ್ಟಿದೆ. ತತ್ಪರಿಣಾಮವಾಗಿ, ನಮ್ಮದು ವಿಶಿಷ್ಟ ದೇಶ, ನಮ್ಮ ದೇಶಕ್ಕೆ ಎಲ್ಲ ನಾಗರಿಕತೆಗಳ ಗುಣವಿಶೇಷಗಳನ್ನು ಅರಗಿಸಿಕೊಳ್ಳುವ ಮತ್ತು ಹೊಂದಿಕೊಳ್ಳುವ ಶಕ್ತಿ ಇದೆ ಎಂದು ಹೇಳುವ ಪ್ರವೃತ್ತಿ ನಮ್ಮ ಭಾಷಣಕಾರರಲ್ಲಿ ಬೆಳೆದಿದೆ. ನಮ್ಮ ದೇಶದಲ್ಲಿ ವಿವಿಧತೆಯಲ್ಲಿ ಏಕತೆ ಇದೆ ಎಂಬುದನ್ನು ನಾವು ನಂಬಿಬಿಟ್ಟಿದ್ದೇವೆ. ನಮ್ಮ ಇತಿಹಾಸದಲ್ಲಿನ ಇಂಥ ತೀರ ಹಾನಿಕಾರಕ ಚಿಂತನೆಯಿಂದ ಪರಿಣಾಮ ಏನಾಗಿದೆಯೆಂದರೆ ನಮ್ಮ ದೇಶದ ಇಂದಿನ ರಾಜಕಾರಣಿ, ತಾನು ತುಂಬಾ

ಪ್ರಗತಿವಾದಿ, ವಿದೇಶಿ ಆಕ್ರಮಣಕಾರರು ಬಂದರೆ ಬರಲಿ, ನಮ್ಮ ದೇಶ ಗೆಲ್ಲಲಿ, ಆದರಿಂದ ನಮಗೇನೂ ತೊಂದರೆ ಆಗದು, ಏಕೆಂದರೆ, ನಮ್ಮ ಭವ್ಯ ಅಮರ ಸಂಸ್ಕೃತಿಗೆ ಅಂಥವರನ್ನು ಕಾಲಕ್ರಮೇಣ ತನ್ನಡೆಗೆ ಸೆಳೆದುಕೊಂಡು ತನ್ನಲ್ಲೇ ಲೀನಗೊಳಿಸಿಕೊಳ್ಳುವ ಶಕ್ತಿ ಸಾಮರ್ಥ್ಯ ಇದೆ ಇಂದು ಹೇಳುವ ಮಟ್ಟಿಗೆ ಅದು ಆತನ ತಲೆ ಕೆಡಿಸಿದೆ. ಇತಿಹಾಸದಿಂದ, ಈ ಹಾನಿಕಾರಕ ಚಿಂತನೆಯನ್ನು ಬೇರು ಸಹಿತ ಕಿತ್ತೊಗೆಯಬೇಕು. ಎರಡು ಬಗೆಯ ದೃಷ್ಟಿಕೋನ ಇರುತ್ತವೆ. ಒಂದು, ಗುಲಾಮನದು ಇನ್ನೊಂದು ಧಣಿಯದು. ಕಳೆದ ಒಂದು ಸಾವಿರ ವರ್ಷಗಳಿಂದ ನಮ್ಮದು ಗುಲಾಮನ ದೃಷ್ಟಿಕೋನವೇ ಹೊರತು ಧಣಿಯದಲ್ಲ.

ಈ ಸಂಬಂಧದಲ್ಲಿ ನಾನು ವಿದೇಶಿಯರನ್ನು ಮಾತ್ರವೇ ದೂಷಣೆ ಮಾಡುತ್ತಿಲ್ಲ. ಎಲ್ಲ ಇತಿಹಾಸಕಾರರೂ ಈ ಹಾನಿಕಾರಕ ಚಿಂತನೆಗೆ ಒಗ್ಗಿ ಹೋಗಿದ್ದಾರೆ. ಇಂದು, ಭಾರತದಲ್ಲಿ, ಇತಿಹಾಸಕ್ಕೆ ಸಂಬಂಧಿಸಿದಂತೆ ಎರಡು ಬಗೆಯ ವಿಚಾರ ಧಾರೆಗಳಿವೆ. ಒಂದು ಡಾ: ತಾರಾಚಂದ್‌ರದು, ಇನ್ನೊಂದು ಡಾ: ಮಜೂಂದಾರ್‌ರದು. ಆದರೆ, ಈ ಇಬ್ಬರೂ ವಿವಿಧತೆಯಲ್ಲಿ ಏಕತೆ ಎಂಬ ವಿಷಕ್ಕೆ ಜೋತುಬಿದ್ದಿದ್ದಾರೆ. ನಿಜವಾದ ಭಾರತವನ್ನು ಮರೆತು, ಭಾರತದಲ್ಲಿನ ವೈವಿಧ್ಯತೆಗೇ ನಾವು ಒತ್ತುಕೊಡುತ್ತಿದ್ದೇವೆ.

ಹೊಸ ನಾಗರಿಕತೆಗಳ ಉಗಮಕ್ಕೆ ಸಂಬಂಧಿಸಿದಂತೆ ಹೇಳುವುದಾದರೆ ನಮ್ಮಲ್ಲಿ ಮತ್ತೆ ಮತ್ತೆ ಪುನರುಜ್ಜೀವನ ಕಾರ್ಯ ಆಗುತ್ತಲೇ ಇದೆ. ಕೆಲವೊಮ್ಮೆ ರಾಜಾರಾಮ್ ಮೋಹನರಾಯ್, ಇನ್ನೊಮ್ಮೆ ಮಾನ್‌ಸಿಂಗ ಹಾಗೂ ಅಬುಲ್ ಫಜಲ್ ಪುನರುಜ್ಜೀವನದ ಪ್ರವರ್ತಕರಾಗಿದ್ದಾರೆ. ಅದಕ್ಕೂ ಮುಂಚೆ, ಘಜ್ನಿ ಮತ್ತು ಘೋರಿ ಮಹಮದ್ ಪುನರುಜ್ಜೀವನಕ್ಕೆ ಕಾರಣಕರ್ತರಾಗಿದ್ದಾರೆ. ಆದರೆ ಈ ಪುನರುಜ್ಜೀವನವು ನಂತರ ವಿದೇಶಿ ಆಕ್ರಮಣಕ್ಕೆ ಒಳಗಾಗಲಿಲ್ಲ. ಆದ್ದರಿಂದ, ಇತಿಹಾಸದ ಈ ಅಂಶವನ್ನು ತೀವ್ರವಾಗಿ ಪರಿಶೀಲಿಸುವಂತೆ ನಾನು ಸರ್ಕಾರವನ್ನು ವಿನಂತಿಸಿಕೊಳ್ಳುತ್ತೇನೆ. ಈ ವಿಷಯ ಕುರಿತು ಚರ್ಚಿಸಲು ನಮಗೆ ಅರ್ಧ ಗಂಟೆ ಕಾಲಾವಕಾಶ ಇದೆ. ಆದರೆ, ಈ ವಿಷಯ ಮಿಝೋ, ನಾಗಾ, ಕಾಶ್ಮೀರಿ ಮುಂತಾದ ಇನ್ನಿತರರಿಗೂ ಸಂಬಂಧಿಸಿರುವುದರಿಂದ ಈ ಚರ್ಚೆಯನ್ನು ಇನ್ನೂ ಎರಡು ಅಥವಾ ಮೂರು ದಿನಗಳವರೆಗೆ ಮುಂದುವರಿಸಬೇಕು.

ಇಂದು ಮಿಝೋ ಜನರ, ನಾಗಾ ಜನರ, ಕಾಶ್ಮೀರಿ ಜನರ ಎಲ್ಲ ಸಂಘರ್ಷಗಳಿಗೆ ಇತಿಹಾಸದಲ್ಲಿ ಬಿತ್ತಿದ ಈ ವಿಷವೇ ಕಾರಣ. ಇತಿಹಾಸಕಾರರು ಒಂದು ಸಂಸ್ಕೃತಿಗೂ ಇನ್ನೊಂದು ಸಂಸ್ಕೃತಿಗೂ ಥಳುಕು ಹಾಕುತ್ತಾರೆ, ಜನರನ್ನು ಆರ್ಯರು, ಅನಾರ್ಯರು, ಮಂಗೋಲರು, ದ್ರಾವಿಡರೆಂದು ವರ್ಗೀಕರಿಸುತ್ತಾರೆ. ಒಂದು ನಿರ್ದಿಷ್ಟ ಜನ

ಸಮುದಾಯವೇ ದೇಶದ ಮೂಲ ನಿವಾಸಿಗಳೆಂದು ಹೇಳುತ್ತಾರೆ. ಆದರೆ, ಅದಕ್ಕೆ ಯಾವುದೇ ಪುರಾವೆ ಇಲ್ಲ. ಭಾಷೆಯಂತಹ ಒಂದು ಸಣ್ಣ ವಿಷಯದ ಆಧಾರದ ಮೇಲೆಯೇ ಈ ವಾದ ನಿಂತಿದೆ. ಇವೆಲ್ಲವುಗಳ ಪರಿಣಾಮಗಳನ್ನು ನಾವು ನೋಡುತ್ತಿದ್ದೇವೆ ಜಾಗತಿಕ ಸಂಸ್ಥೆಯಾದ ವಿಶ್ವಸಂಸ್ಥೆಯು ಈ ಒಂದು ಇತಿಹಾಸ ಪುಸ್ತಕವನ್ನು ಹೊರತಂದಿದೆ. ನನಗೆ ಉತ್ತರ ಕೊಡುವ ಪ್ರಯತ್ನ ಮಾಡಬಾರದೆಂದು ಮಾನ್ಯ ಭಗಲಾ ಅವರನ್ನು ನಾನು ವಿನಂತಿಸಿಕೊಳ್ಳುತ್ತೇನೆ.

ನನಗೆ ಯಾವುದೇ ಉತ್ತರ ಬೇಕಾಗಿಲ್ಲ. ಇತಿಹಾಸ ಮತ್ತು ಗಣಿತ ಭವಿಷ್ಯತ್ ಭಾರತದ ನಿರ್ಮಾಣ ಅಥವಾ ಅವನತಿಯನ್ನು ನಿರ್ಧರಿಸುವ ವಿಷಯಗಳಾದ್ದರಿಂದ ಆ ಕುರಿತು ಅವರು ಏನಾದರೂ ಮಾಡಬೇಕೆಂದು ಮಾತ್ರ ನಾನು ಹೇಳ ಬಯಸುತ್ತೇನೆ. ಇತಿಹಾಸ, ಗತಕಾಲದ ಜ್ಞಾನ ಭಂಡಾರ. ನಾವು ನಮ್ಮ ಇತಿಹಾಸವನ್ನು ಸರಿಯಾದ ದೃಷ್ಟಿಕೋನದಿಂದ ತಿಳಿದು ಕೊಳ್ಳದಿದ್ದರೆ ಮತ್ತು ಇತಿಹಾಸದ ಬಗ್ಗೆ ನಮ್ಮ ಮಕ್ಕಳಿಗೆ ಸರಿಯಾದ ರೀತಿಯಲ್ಲಿ ಬೋಧನೆ ಮಾಡದಿದ್ದರೆ ಈ ದೇಶದ ಏಳಿಗೆ ಮತ್ತು ಅಭ್ಯುದಯ ಎಂದಿಗೂ ಆಗದು. ಗಣಿತ, ವಿಜ್ಞಾನದ ಜೀವಾಳ. ಗಣಿತದಿಂದ ರಶಿಯಾದ ಮತ್ತು ಅಮೇರಿಕಾದ ವಿಜ್ಞಾನಿಗಳು ಚಂದ್ರ ಲೋಕದಲ್ಲಿ ಹೆಜ್ಜೆ ಇಟ್ಟಿದ್ದಾರೆ. ಆದರೆ, ನಮ್ಮ ವಿಶ್ವವಿದ್ಯಾನಿಲಯಗಳಲ್ಲಿ ಇತಿಹಾಸ ಮತ್ತು ಗಣಿತ ಅವನತಿಯ ಸ್ಥಿತಿಯಲ್ಲಿವೆ. ಈ ಹೀನಾಯ ಸ್ಥಿತಿಯನ್ನು ಸುಧಾರಿಸಲು ಏನಾದರೂ ಪ್ರಯತ್ನ ಮಾಡುವುದು ಅಗತ್ಯ.

-:=:=:-

## 12. ಪಂಜಾಬ ರಾಜ್ಯದ ಮರುಸಂಘಟನೆ

ನಿನ್ನೆ ಹಾಗೂ ಇಂದು ನನಗೆ ತಿಳಿದುಬಂದ ವಿಷಯವನ್ನು ನಾನು ಸನ್ಮಾನ್ಯ ಸದಸ್ಯರೊಂದಿಗೆ ಹಂಚಿಕೊಳ್ಳಲು ಬಯಸುತ್ತೇನೆ ಈ ವಿಷಯ ದೇಶದ ಜನತೆಯನ್ನು ರೊಚ್ಚಿಗೆಬ್ಬಿಸುತ್ತದೆ. ತೆಲುಗು ಪ್ರಾಂತ, ಮರಾಠಿ ಪ್ರಾಂತ ಹಾಗೂ ಗುಜರಾತ ಪ್ರಾಂತಗಳ ಬಗ್ಗೆ ಈ ಸದನದಲ್ಲಿ ಹಲವು ಬಾರಿ ಚರ್ಚಿಸಲಾಗಿದೆ. ಆದರೆ ಯಾವ ಭರತ ಭೂಮಿಯಿಂದ ಈ ಪ್ರಾಂತಗಳು ರೂಪು ತಳೆದವ್ರೋ ಆ ಭೂ ಪ್ರದೇಶದ ಬಗ್ಗೆ ಚರ್ಚೆ ನಡೆದಿಲ್ಲ. ಭಾರತದ ಹಲಕೆಲವು ಪ್ರದೇಶ ಅಲ್ಲೊಂದಿಷ್ಟು ಇಲ್ಲೊಂದಿಷ್ಟು ಪಾಕಿಸ್ತಾನ ಮತ್ತು ಚೀನಾ ದೇಶಗಳ ಆಳ್ವಿಕೆಗೆ ಸೇರಿ ಹೋಗಿದೆ ಎಂಬುದು ನಿಜ. ಆದರೆ ಇಡೀ ಭಾರತ ಭೂಮಿಯ ಬಗ್ಗೆ ಒಟ್ಟಾರೆಯಾಗಿ ಗಮನವಿಟ್ಟು ಅಭ್ಯಸಿಸಬೇಕಾದ ಕಾಲ ಸದನಕ್ಕೆ ಇಂದು ಸನ್ನಿಹಿತವಾಗಿದೆ. ಸನ್ಮಾನ್ಯ ಸಭಾಧ್ಯಕ್ಷರೇ, ಈ ಸಂದರ್ಭದಲ್ಲಿ ನಾನು ಸಂಯುಕ್ತ ರಾಷ್ಟ್ರ ಸಂಸ್ಥೆಯ 1950ರ ವಾರ್ಷಿಕ ಸಂಚಿಕೆಯ ಉದ್ಧೃತ ಭಾಗವನ್ನು ಓದಿ ತೋರಿಸಲು ಬಯಸುತ್ತೇನೆ. ಆ ಸಂಚಿಕೆಯ 1010ನೇ ಪುಟದಲ್ಲಿ ಹೀಗಿದೆ:-

"ಭಾರತದ ಒಟ್ಟು ವಿಸ್ತೀರ್ಣ 31,62,454 ಚದರ ಕಿ.ಮೀ!" ಆದರೆ ಅದೇ ಸಂಸ್ಥೆಯ 1964 ರ ವಾರ್ಷಿಕ ಸಂಚಿಕೆಯ 579ನೇ ಪುಟದಲ್ಲಿ 'ಭಾರತದ ಒಟ್ಟು ವಿಸ್ತೀರ್ಣ 3046232 ಚ. ಕಿ.ಮೀ' ಎಂದು ಹೇಳಲಾಗಿದೆ. ಈ ಎರಡೂ ಹೊತ್ತಿಗೆಗಳನ್ನು ಅದೇ ಅಂತಾರಾಷ್ಟ್ರೀಯ ಸಂಸ್ಥೆಯಿಂದಲೇ ಪ್ರಕಟಿಸಲಾಗಿದ್ದು, ಭಾರತವೂ ಅದರ ಸದಸ್ಯ ರಾಷ್ಟ್ರಗಳಲ್ಲೊಂದಾಗಿದೆ. ಆ ಎರಡೂ ಸಂಖ್ಯೆಗಳನ್ನು ಹೋಲಿಸಿ ನೋಡಿದರೆ 122222 ಚ. ಕಿ. ಮೀಗಳಷ್ಟು ಪ್ರದೇಶ ಹಾಣಿಯಾಗಿರುವುದು ಕಂಡುಬರುತ್ತದೆ.

ನಿಲುವಳಿ ಸೂಚನೆಗೂ ಈ ಅಂಶಕ್ಕೂ ಯಾವುದೇ ಸಂಬಂಧವೂ ಇಲ್ಲವೆಂದು ಸನ್ಮಾನ್ಯ ಸದಸ್ಯರು ಹೇಳುವುದನ್ನು ಕೇಳಿದರೆ ನನಗೆ ವಿಷಾದವೆನಿಸುತ್ತದೆ. ಅವರೇನೋ ಹಾಗೆ ಹೇಳಿಯಾರು. ಆದರೆ ಇದೇ ಭಾರತಭೂಮಿಯಿಂದಲೇ ಪಂಜಾಬ ರಾಜ್ಯ ರೂಪುಗೊಂಡಿದೆ......... ಈ ವಾಸ್ತವಾಂಶದ ಬಗ್ಗೆ ನಿಸ್ಪೃಹತೆಯಿಂದ ಗಹನವಾಗಿ ಚಿಂತಿಸಬೇಕೆಂದು ಸದಸ್ಯರನ್ನು ನಾನು ವಿನಂತಿಸುತ್ತೇನೆ. ಸಂ.ರಾ.ಸಂ.ಗೆ ಅಂಕಿಅಂಶಗಳನ್ನು ಒದಗಿಸಿದವರಾರು? ಭಾರತ ಸರ್ಕಾರದಿಂದಲೇ ಅವುಗಳನ್ನು ಒದಗಿಸಲಾಗಿದೆಯಷ್ಟೇ. ಭಾರತವು ಸಂಯುಕ್ತ ರಾಷ್ಟ್ರ ಸಂಸ್ಥೆಯ ಸದಸ್ಯರಾಷ್ಟ್ರ. ಇಂಥ ದೋಷವನ್ನು ಎತ್ತಿ ತೋರಿಸಬೇಕಾದುದು ಸದಸ್ಯ ರಾಷ್ಟ್ರದ ಕರ್ತವ್ಯವಲ್ಲವೆ? ಅದು ಸಂಯುಕ್ತರಾಷ್ಟ್ರ ಸಂಸ್ಥೆಯ ಮುಂದೆ ಈ ವಿಷಯವನ್ನು ಪ್ರಸ್ತಾಪಿಸಬಾರದೇ? 1,22,000 ಚ.ಕಿ.ಮೀ. ಗಳಷ್ಟು ಪ್ರದೇಶ ಹೋದುದೆಲ್ಲಿಗೆ? ಅದು ಹೇಗೆ ಕಡಿಮೆಯಾಯಿತು? ಅದು ಚೀನ ಅಥವಾ ಪಾಕಿಸ್ತಾನದ

ವಶದಲ್ಲಿದ್ದರೂ, ಅದನ್ನು ಕಡಿಮೆಗೊಳಿಸಬಾರದಿತ್ತು.

ಇದಿಷ್ಟು ಸಂಯುಕ್ತ ರಾಷ್ಟ್ರ ಸಂಸ್ಥೆಯು ಹೊರತಂದ ಪುಸ್ತಕವನ್ನು ಕುರಿತಾದುದು. ಸರ್ವೆ ಆಫ್ ಇಂಡಿಯಾದವರು ಪ್ರಕಟಿಸಿದ ವಾರ್ಷಿಕ ಸಂಚಿಕೆಯಲ್ಲಿ ಗೋಚರವಾದ ಪ್ರಮಾದದ ಕಡೆಗೆ ನಿಮ್ಮ ಗಮನ ಸೆಳೆಯಲು ಬಯಸುತ್ತೇನೆ. 1953 ರ ವಾರ್ಷಿಕ ಸಂಚಿಕೆಯಲ್ಲಿ ಭಾರತದ ಒಟ್ಟು ವಿಸ್ತೀರ್ಣ 1269640 ಚದರ ಮೈಲುಗಳೆಂದು ಉಲ್ಲೇಖಿಸಲಾಗಿದೆ. ಅದೇ ಇಲಾಖೆಯ 1964 ರ ವಾರ್ಷಿಕ ಸಂಚಿಕೆಯಲ್ಲಿ ಭಾರತದ ವಿಸ್ತೀರ್ಣ 1261597 ಚದರ ಮೈಲುಗಳೆಂದು ಉಲ್ಲೇಖಿಸಲಾಗಿದೆ, ಎಂದರೆ 8042 ಚ.ಮೈಲುಗಳಷ್ಟು ಪ್ರದೇಶ ಕಾಣಯಾಗಿದೆ . ಹಾಗಾದರೆ ಇಷ್ಟು ಪ್ರದೇಶ ಎಲ್ಲಿ ಹೋಯಿತು?

ಶಕ್ತಿಶಾಲಿ ಹಾಗೂ ಬಲಶಾಲಿ ಜನತೆಯಿರುವ ಒಂದು ದೇಶದಲ್ಲಿ ಇಂಥದೇನಾದರೂ ಆಗಿದ್ದರೆ ಅಲ್ಲಿ ಸರ್ಕಾರವು ಮುಂದೊಂದು ಕ್ಷಣವೂ ಅಧಿಕಾರದಲ್ಲಿ ಮುಂದುವರಿಯಲಾರದು. ಪಂಜಾಬ ರಾಜ್ಯ ರಚನೆಯ ಬಗ್ಗೆ ಸದನವು ಚರ್ಚಿಸುವಾಗ ದೇಶದ ಬಗ್ಗೆ ಈ ಸರ್ಕಾರ ಏನು ಮಾಡುತ್ತದೆ ಎಂಬುದರ ಬಗೆಗೂ ಆಲೋಚಿಸಬೇಕಾಗಿದೆ.

ರಾಜ್ಯಗಳ ರಚನೆಗೆ ಸಂಬಂಧಿಸಿದಂತೆ ಹೇಳುವುದಾದರೆ, ಕಳೆದ 14 - 15 ವರ್ಷಗಳಲ್ಲಿ ಭಾರತೀಯ ಭಾಷೆಗಳ ಆಧಾರದ ಮೇಲೆ ಅಥವಾ ಅವುಗಳ ಉನ್ನತಿಗಾಗಿ ಪಂಜಾಬ, ಮಹಾರಾಷ್ಟ್ರ, ಗುಜರಾತಗಳಂಥ ರಾಜ್ಯಗಳು ರಚಿತವಾಗಿವೆ. ಆದರೆ ಆಂಗ್ಲ ಭಾಷೆಗೆ ಹೋಲಿಸಿದರೆ ಯಾವ ಪ್ರಾಂತೀಯ ಭಾಷೆಯೂ ಬೆಳವಣಿಗೆ ಹೊಂದಿಲ್ಲವೆಂದು ನಾನು ಖಂಡಿತವಾಗಿ ಹೇಳಬಲ್ಲೆ. ಔರಂಗಾಬಾದ್‌ನ ಭಾಷೆ ಮರಾಠಿಯಾಗಿತ್ತು. ಆದರೆ ಇಂದು ಮರಾಠಿಯ ಸ್ಥಾನವನ್ನು ಆಂಗ್ಲಭಾಷೆ ಆಕ್ರಮಿಸಿಕೊಂಡಿದೆ. ಇತರ ಪ್ರಾಂತಗಳಲ್ಲಿಯೂ ಇದೇ ಸ್ಥಿತಿ ಇದೆ.

ಇದಲ್ಲದೇ, ಸರ್ಕಾರದ ಇನ್ನೊಂದು ದೊಡ್ಡ ವೈಫಲ್ಯದತ್ತ ನಿಮ್ಮ ಗಮನವನ್ನು ಸೆಳೆಯಬಯಸುತ್ತೇನೆ. ಅದಾವುದೆಂದರೆ ರಾಜ್ಯಗಳ ರಚನೆಯಾಗ ಬೇಕಾಗಿದ್ದಿದ್ದರೆ ಅದು ಒಂದೇ ಬಾರಿಗೆ ನಡೆಯಬೇಕಿತ್ತು. ಮಹಾರಾಷ್ಟ್ರ, ಗುಜರಾತ್, ವಿದರ್ಭ ಮುಂತಾದ ರಾಜ್ಯಗಳು 1948 - 49 ರಲ್ಲೇ ರಚಿತವಾಗಬೇಕಿತ್ತು. ಆದರೆ 1948 - 49 ರಲ್ಲಿ ಈ ರಾಜ್ಯಗಳ ರಚನೆಯಾಗಲೇ ಇಲ್ಲ, ತದನಂತರ ವಿಷಯ ನೆನೆಗುದಿಗೆ ಬಿತ್ತು. ಕಳೆದ 15 ವರ್ಷಗಳಿಂದಲೂ ಈ ವಿಷಯ ಜನತೆಯ ಮನವನ್ನು ಕೊರೆಯುತ್ತಲೇ ಇದೆ. ಆದರೆ

ಈ ವಿಷಯವನ್ನು ಉದ್ದೇಶಪೂರ್ವಕವಾಗಿಯೇ ನೆನೆಗುದಿಗೆ ಬೀಳಿಸಿರುವ ಬಗ್ಗೆ ನಾನು ಸರ್ಕಾರವನ್ನು ದೂಷಿಸುತ್ತೇನೆ. ಆದರೆ ಜನತೆ ಅದೇ ಭ್ರಮೆಯಲ್ಲಿಯೇ ಇರುತ್ತಾರೆ.

ಈಗ ಇನ್ನೊಂದು ವಿಷಯ. ವಿರೋಧ ಪಕ್ಷದವರಾದ ನಾವು ಉಚಿತ ಪ್ರಶ್ನೆಗಳಿಗಿಂತ ಅನುಚಿತ ಪ್ರಶ್ನೆಗಳಿಗೇ ಹೆಚ್ಚಿನ ಗಮನ ನೀಡುತ್ತೇವೆ. ಇಂಥ ಪ್ರಶ್ನೆಗಳು ಸಾಮಾನ್ಯವಾಗಿ ಸರ್ಕಾರದಿಂದ ಉದ್ಭವಿಸುತ್ತವೆ ಅಥವಾ ಕೆಲವು ಸನ್ನಿವೇಶಗಳಲ್ಲಿ ಇತರ ಕೆಲವು ವ್ಯಕ್ತಿಗಳು ಇಂಥ ಪ್ರಶ್ನೆಗಳನ್ನು ಎತ್ತುತ್ತಾರೆ. ವಿರೋಧಪಕ್ಷ ಒಳ್ಳೆಯ ಪ್ರಶ್ನೆಗಳನ್ನು ಎತ್ತಬೇಕು. ಆದರೆ ಅನೇಕ ಬಾರಿ ಅನುಚಿತ ಪ್ರಶ್ನೆಗಳಿಂದಾಗಿ ಮೂಲೋದ್ದೇಶವೇ ವಿಫಲವಾದಂತಾಗುತ್ತದೆ. ಪ್ರತಿಯೊಂದು ಪ್ರಶ್ನೆಗೆ ಉತ್ತರಿಸುವ ಅಗತ್ಯವಿಲ್ಲ. ಆದರೆ ಇಂಗ್ಲಿಷನ್ನು ಹೊಡೆದೋಡಿಸುವ ಕುರಿತಾದ ಮತ್ತು ಕೃಷಿ ಹಾಗೂ ಕೈಗಾರಿಕಾ ಕ್ಷೇತ್ರಗಳಲ್ಲಿ ಅಗತ್ಯವಿರುವ ಸುಧಾರಣೆಗಳನ್ನು ತರುವ ಕುರಿತಾದಂಥ ವಿಷಯಗಳ ಕಡೆ ಹೆಚ್ಚಿನ ಗಮನ ನೀಡಬೇಕು. ಏಕೆಂದರೆ ಮಹಾರಾಷ್ಟ್ರ ರಾಜ್ಯದ ರಚನೆಗಾಗಿ ವಿರೋಧಪಕ್ಷ ಕೇಳಿದಾಗ, ಸರ್ಕಾರ ನಿರಾಕರಿಸುತ್ತದೆ, ಹೋರಾಟ ಪ್ರಾರಂಭವಾಗುತ್ತದೆ. ಇದು ಹಾಗೆಯೇ ನಾಲ್ಕಾರು ವರ್ಷ ಮುಂದುವರಿದು ಜನತೆಗೆ ತೊಂದರೆ ಉಂಟಾಗುತ್ತದೆ. ಅಂತೂ ಒಂದು ದಿನ ಸರ್ಕಾರ ಮಹಾರಾಷ್ಟ್ರ ರಾಜ್ಯವನ್ನು ರಚಿಸುತ್ತದೆ, ಜನತೆ ಸಂತುಷ್ಟರಾಗುತ್ತಾರೆ. ಇದರಿಂದ ಕಾಂಗ್ರೆಸ್ ಸರ್ಕಾರದ ಮೇಲೆ ಯಾವ ಪರಿಣಾಮವೂ ಆಗುವುದಿಲ್ಲ, ಯಾವುದಾಗಬೇಕಿತ್ತೋ ಅದು ಆಯಿತು ಅಷ್ಟೇ. ಇನ್ನುಮುಂದಾದರೂ ವಿರೋಧಪಕ್ಷಗಳು ಅನುಚಿತ ಪ್ರಶ್ನೆಗಳನ್ನು ಕೈಬಿಟ್ಟು ಸಮಂಜಸ ಪ್ರಶ್ನೆಗಳಿಗೆ ಗಮನವನ್ನು ಕೇಂದ್ರೀಕರಿಸಬೇಕು.

............ಈ ವಿಷಯ ಇಲ್ಲಿಗೇ ನಿಲ್ಲಕೂಡದು. ಈ ಅಧಿವೇಶನ ಮುಕ್ತಾಯವಾಗುವುದಕ್ಕೆ ಮುಂಚೆ ನಾವು ಭಾರತದ ವಿಸ್ತೀರ್ಣವನ್ನು ನಿರ್ಧರಿಸಬೇಕು. ನಮ್ಮ ದೇಶದ 1,22,222 ಚದರ ಕಿ.ಮೀ. ಪ್ರದೇಶ ಎಲ್ಲಿ ಹೋಯಿತು ಎಂಬ ಬಗ್ಗೆ ಸ್ಪಷ್ಟ ಉತ್ತರವನ್ನು ದೊರಕಿಸಿಕೊಳ್ಳಬೇಕು.

ಉಚಿತ ಪ್ರಶ್ನೆಗಳನ್ನೇ ಕೇಳಬೇಕೆಂದೂ, ಸರ್ಕಾರದ ಅಥವಾ ಇತರರ ಅನುಚಿತ ಪ್ರಶ್ನೆಗಳಿಗೆ ಉತ್ತರಿಸಬಾರದೆಂದು ನಾನು ವಿರೋಧಪಕ್ಷದವರಿಗೆ ಹೇಳುತ್ತಲೇ ಬಂದಿದ್ದೇನೆ. ಪರಮಾಣು ಬಾಂಬನ್ನು ಉತ್ಪಾದಿಸಲಾಗುತ್ತದೆಯೇ ಅಥವಾ ಇಲ್ಲವೇ ಮತ್ತು ಯಾವುದೋ ಒಂದು ರಾಜ್ಯವನ್ನು ರಚಿಸಲಾಗಿದೆಯೇ ಅಥವಾ ಇಲ್ಲವೇ ಎಂಬಂಥ ಪ್ರಶ್ನೆಗಳಿಗೆ ನಾವು ಉತ್ತರಿಸುವ ಅಗತ್ಯವಿಲ್ಲ. ನಾನು ಒಂದು ಸ್ಥಳಕ್ಕೆ ಭೇಟಿ ನೀಡಿದೆ. ಮಾರ್ಗ ಮಧ್ಯದಲ್ಲಿ ದುರ್ಗ ಇತ್ತು. ವಿದರ್ಭ ರಾಜ್ಯವನ್ನು ರಚಿಸಬೇಕೆಂದು ಹಾಗೂ ಗೊಂಡವನ ರಾಜ್ಯ ರಚಿಸಬೇಕೆಂದು ಹಾಗೂ ಗೊಂಡವನ ರಾಜ್ಯ ರಚಿಸಬೇಕೆಂದು

ಅಲ್ಲಿ ಬೇಡಿಕೆಯನ್ನು ಮಂಡಿಸಲಾಯಿತು. ಜಾರಖಂಡ ಹಾಗೂ ಹರಿಯಾಣಾ ರಾಜ್ಯಗಳನ್ನು ರಚಿಸಬೇಕೆಂದೂ ಬೇಡಿಕೆಗಳು ಬಂದವು. ವಿರೋಧಪಕ್ಷ ಇಂಥ ಬೇಡಿಕೆಗಳನ್ನು ಈಡೇರಿಸುವ ಯತ್ನದಲ್ಲೇ ತೊಡಗಿದ್ದರೆ, ನಾಲ್ಕೈದು ವರ್ಷಗಳು ಹಾಗೇ ವ್ಯರ್ಥವಾಗಿ ನಾವು ಮಾತ್ರ ಇದ್ದಲ್ಲೇ ಇರುತ್ತೇವೆ. ಆದ್ದರಿಂದ ವಿರೋಧಪಕ್ಷ ಈ ಬಗ್ಗೆ ಒಂದು ಸೂಕ್ತ ನೀತಿಯನ್ನು ಅನುಸರಿಸಬೇಕು. ಎತ್ತಲಾದ ಪ್ರಶ್ನೆಗಳ ಕಡೆಗೆ ವಿಶೇಷ ಗಮನ ವಹಿಸಬೇಕು. ಸಮುಚಿತ ಪ್ರಶ್ನೆಗಳನ್ನು ಕೇಳಬೇಕು, ಅನುಚಿತ ಪ್ರಶ್ನೆಗಳನ್ನು ಎತ್ತಲೇಬಾರದು. ಅನುಚಿತ ಪ್ರಶ್ನೆಗಳಿದ್ದರೂ ಅವುಗಳಿಗೆ ಉತ್ತರಿಸಬಾರದು, ನಮ್ಮ ದೇಶದ ವಿಸ್ತೀರ್ಣದ ಬಗ್ಗೆ ಈ ಸರ್ಕಾರದಿಂದ ಒಂದು ಖಚಿತ ಉತ್ತರ ಪಡೆಯಲು ನಾವು ಯತ್ನಿಸಬೇಕು. ಇದರ ಹಿಂದೆ ಏನೋ ಗೂಢವಿದೆ. ಆದ್ದರಿಂದಲೇ ಈ ಜನ ಅಧಿಕಾರದಲ್ಲಿ ಉಳಿಯುವ ತಮ್ಮ ಹಕ್ಕನ್ನು ಕಳೆದುಕೊಂಡಿದ್ದಾರೆ. ಸಂಯುಕ್ತ ರಾಷ್ಟ್ರಸಂಸ್ಥೆಯ ವಿಷಯದಲ್ಲಿ ಹಾಗೂ ಸರ್ವೆ ಆಫ್ ಇಂಡಿಯಾದ ವಿಷಯದಲ್ಲಿ ನಾವು ಯಾವುದೇ ತೀವ್ರ ಕ್ರಮ ಕೈಗೊಳ್ಳಬೇಕಾಗಲಿಕ್ಕಿಲ್ಲವೇ ಎಂಬ ಸಂದೇಹ ನನಗಿದೆ.

-:=:=:-

## 13. ಪ್ರತಿಯೊಬ್ಬ ವ್ಯಕ್ತಿಯ ತಿಂಗಳ ವೆಚ್ಚವನ್ನು ನಿರ್ಬಂಧಿಸಲು ಸಮಿತಿಯ ನೇಮಕ ಕುರಿತು ನಿಲುವಳಿ *

" ಅಭಿವೃದ್ಧಿ ಕಾರ್ಯಗಳಲ್ಲಿ ತೊಡಗಿಸುವುದಕ್ಕಾಗಿ ವರ್ಷಕ್ಕೆ 1000 ಕೋಟಿ ರೂ. ಗಳನ್ನುಸಂಗ್ರಹಿಸಲು ಪ್ರತಿಯೊಬ್ಬ ವ್ಯಕ್ತಿಯ ತಿಂಗಳ ವೆಚ್ಚವನ್ನು 1500 ರೂ.ಗಳಿಗೆ ನಿರ್ಬಂಧಿಸುವ ಯೋಜನೆಯನ್ನು ರೂಪಿಸಲು ಒಂದು ಸಮಿತಿಯನ್ನು ಸರ್ಕಾರವು ನೇಮಿಸಬೇಕೆಂದು ಈ ಸದನವು ನಿರ್ಣಯಿಸಿದೆ.

ಮುಂಚಿನ ಚರ್ಚೆಯು, ವರಮಾನವು 3 ಆಣೆ ಇತ್ತೇ ಅಥವಾ 15 ಆಣೆಗಳಾಗಿತ್ತೇ ಎಂಬ ವಿಷಯಕ್ಕೆ ಸಂಬಂಧಿಸಿತ್ತು. ಇಂದು ನಾನು ಎತ್ತಿರುವ ಅಂಶ ವ್ಯಕ್ತಿಯ ತಿಂಗಳ ಖರ್ಚಿನ ಮಿತಿಯನ್ನು 1500 ರೂ ಗಳಿಗೆ ನಿಗದಿಪಡಿಸುವುದು. ಇಂಥ ನಿರ್ಬಂಧವೇ ಆ ಸಮಸ್ಯೆಗೆ ಪರಿಹಾರ. ಈ ವಿಷಯದ ಬಗ್ಗೆ ಹೇಳುವಾಗ ನಾನು ಇನ್ನೊಂದು ಅಂಶವನ್ನು ಸ್ಪಷ್ಟಪಡಿಸುತ್ತೇನೆ. ಇದೇ ವಿಷಯವನ್ನು ಕುರಿತು ಮಾತನಾಡಲು ಆರು ತಿಂಗಳ ಹಿಂದೆ ಅಥವಾ ಒಂದು ವರ್ಷದ ಹಿಂದೆ ಕೇಳಿದ್ದರೆ ಆಗ ನಾನು ವ್ಯಕ್ತಿಯ ತಿಂಗಳ ಖರ್ಚನ್ನು 1000 ರೂ.ಗಳಿಗೆ ಮಿತಗೊಳಿಸಬೇಕೆಂದು ಸೂಚಿಸುತ್ತಿದ್ದೆ. ನನ್ನ ಸಲಹೆಯನ್ನು ಕಾರ್ಯಗತಗೊಳಿಸಿದರೆ ಹಣದುಬ್ಬರದ ಕಾರಣದಿಂದಾಗಿ ಒಂದು ತಿಂಗಳ ನಂತರ ಈ ಮಿತಿ 1500 ರೂ. ಗಳಿದ್ದುದು 2000 ರೂ. ಗಳಿಗೆ ಏರಬಹುದು ಎಕೆಂದರೆ 100 ರೂ. ಗಳಿಗೆ ಖರೀದಿಸಬಹುದಾಗಿದ್ದಕ್ಕೆ 125 ರೂ. ತೆರಬೇಕಾಗಬಹುದು. ಏಕೆಂದರೆ ವಸ್ತುವಿನ ಬೆಲೆ ಏರಿದಂತೆ ಹಣದ ಖರೀದಿ ಸಾಮರ್ಥ್ಯ ತಗ್ಗುತ್ತದೆ.

ಮೊಟ್ಟಮೊದಲು ನಾನೊಂದು ಪ್ರಶ್ನೆ ಎತ್ತಬಯಸುತ್ತೇನೆ. ಹಲವಾರು ಸಂದರ್ಭಗಳಲ್ಲಿ ಮಾನ್ಯ ಸದಸ್ಯರು ಹಾಗೆ ಮಾಡುವುದು ಹೇಗೆ? ಎಂದು ಕೇಳಿದ್ದಾರೆ. ಅವರ ಮಾತು ನಿಜ. ನಾನು ವಿಷಯದ ಮೂಲಕ್ಕೇ ಹೋಗುತ್ತೇನೆ. ಅದು ಹೇಗೆ ಸಾಧ್ಯ? ನಾವು ಹಲವು ರೀತಿಯ ತೆರಿಗೆಗಳನ್ನು ವಿಧಿಸುತ್ತೇವೆ. ಒಂದು ಲಕ್ಷ ರೂ. ಗಳ ವರಮಾನದ ಮೇಲೆ 92,000 ರೂ. ತೆರಿಗೆ ವಿಧಿಸುತ್ತೇವೆ ಹಾಗೆ ಆದಾಗಲೂ ನಮ್ಮ ಉದ್ದೇಶ ಸಾರ್ಥಕವಾಗುವುದಿಲ್ಲ. ಆಗ ಸಂಪತ್ತು ತೆರಿಗೆ ವಿಧಿಸಿದೆವು. ಅದೂ ನಿರೀಕ್ಷಿತ ಪರಿಣಾಮ ನೀಡಲಿಲ್ಲ. ಆಗ ವೆಚ್ಚದ ಮೇಲೆ ತೆರಿಗೆ ವಿಧಿಸಿದೆವು. ಅದೂ

---

* ಡಾ|| ರಾಮಮನೋಹರ ಲೋಹಿಯಾ ಅವರು ದಿನಾಂಕ 4.8.67 ರಂದು ಲೋಕಸಭೆಯಲ್ಲಿ ಈ ನಿಲುವಳಿಯನ್ನು ಮಂಡಿಸಿದರು. ಚರ್ಚೆಯ ಸಮಯದಲ್ಲಿ ಡಾ||ಲೋಹಿಯಾ ವ್ಯಕ್ತಪಡಿಸಿದ ವಿಚಾರಗಳ ಆಯ್ದ ಭಾಗಗಳನ್ನು ಇಲ್ಲಿ ನೀಡಲಾಗಿದೆ.

ಪರಿಣಾಮಕಾರಿಯಾಗಲಿಲ್ಲ. ಉದಾಹರಣೆಗೆ ಒಂದು ಮಾತು ಹೇಳುತ್ತೇನೆ . ನಾವು ಮೂಲ ಹುಡುಕಬೇಕು. ಮೂಲ ಯಾವುದು ? ಉಪಭೋಗದ ವಸ್ತುಗಳ ಮೇಲೆ ಜನತೆ ಮಾಡುವ ವೆಚ್ಚವನ್ನು ತಡೆಗಟ್ಟಬಹುದು. ಜನರು ವಾಹನಗಳನ್ನು ಇಟ್ಟುಕೊಂಡಿರುವ ಅಂಶವನ್ನೇ ಉದಾಹರಣೆಯಾಗಿ ನೋಡೋಣ. ಪ್ರಸ್ತುತ, ದೇಶದಲ್ಲಿ 4 ಲಕ್ಷ ಖಾಸಗಿ ಕಾರುಗಳಿವೆ. ಖಾಸಗಿ ವಾಹನದ ಮೇಲಣ ಸರಾಸರಿ ವೆಚ್ಚವನ್ನು ನಾವು 500 ರೂ. ಗಳಿಗೆ ನಿಗದಿಪಡಿಸುತ್ತೇವೆ ಎಂದಿಟ್ಟುಕೊಳ್ಳೋಣ. ಆದರೆ ವಾಸ್ತವವಾಗಿ ತಿಂಗಳ ವೆಚ್ಚ 200 ರೂ. ಗಳಿಂದ 300 ರೂ. ಆಗುವ ಕಾರುಗಳೂ ಇವೆ. ತಿಂಗಳ ವೆಚ್ಚ 1000 ರೂ. ಗಳಿಂದ 2000 ರೂ. ಆಗುವ ಕಾರುಗಳೂ ಇವೆ. ಆದ್ದರಿಂದ ಒಂದು ಕಾರಿನ ಸರಾಸರಿ ವೆಚ್ಚದ ಮಿತಿಯನ್ನು 500 ರೂ. ಗಳಿಗೆ ನಿಗದಿಪಡಿಸಿದರೆ 200 ಕೋಟಿ ರೂ. ಗಳಷ್ಟನ್ನು ಉಳಿತಾಯ ಮಾಡಬಹುದು. ಒಂದು ಸ್ಥಳದಿಂದ ಇನ್ನೊಂದು ಸ್ಥಳಕ್ಕೆ ಹೋಗಬೇಕಾದ ಅಂಶವನ್ನು ನೋಡಿದರೂ ಆ ಉದ್ದೇಶಕ್ಕೆ ಬಸ್ಸುಗಳು, ಟ್ಯಾಕ್ಸಿಗಳು ಮತ್ತು ಸಾರ್ವಜನಿಕ ಸಂಸ್ಥೆಗಳ ಒಡೆತನದಲ್ಲಿರುವ ಇತರ ಸಾರಿಗೆ ಸೌಕರ್ಯಗಳನ್ನೂ ಬಳಸಿಕೊಳ್ಳಬಹುದು. ಹಾಗೆ ಮಾಡಿಯೂ ಖಾಸಗಿ ಕಾರುಗಳ ಓಡಾಟವನ್ನು ನಿರ್ಬಂಧಿಸಿ 200 ಕೋಟಿ ರೂ. ಗಳಷ್ಟು ಉಳಿತಾಯ ಮಾಡಬಹುದು. ಈ ವಿಧಾನದ ಮೂಲಕ ನಾವು ಉಳಿತಾಯದ ಮೂಲವನ್ನು ಕಂಡುಕೊಳ್ಳಬೇಕು.

ಸಮಾಜದಲ್ಲಿ ನ್ಯಾಯ ಸ್ಥಾಪನೆಗಾಗಿ ಮಾತ್ರವೇ ಈ ವಿಷಯವನ್ನು ನಾನು ಪ್ರಸ್ತಾಪಿಸಿದೆ ಎಂದಲ್ಲ. ಮುಖ್ಯ ಅಂಶವೆಂದರೆ ಅಭಾವ ಕ್ಷಾಮ ಹಾಗೂ ಇತರ ನೈಸರ್ಗಿಕ ವಿಕೋಪಗಳು, ಬಡತನ ಮುಂತಾದುವುಗಳ ಕಾರಣದಿಂದಾಗಿ ವಿವಿಧ ವಸ್ತುಗಳ ಕೊರತೆ ತಲೆದೋರುತ್ತದೆ . ಈ ಕೊರತೆ ಸಮಾಜದ ಎಲ್ಲರಲ್ಲಿ ಸಮನಾಗಿರುತ್ತದೆ. ಎಂಬುದನ್ನು ಖಾತ್ರಿಪಡಿಸಿಕೊಳ್ಳಲು ಒಂದು ವ್ಯವಸ್ಥೆಯನ್ನು ನಾವು ಜಾರಿಗೊಳಿಸಿದ ಹೊರತು ದೇಶದ ಅಭಿವೃದ್ಧಿಗಾಗಿ ತ್ಯಾಗ ಮಾಡಿ ಎಂದು ನಾವು ಜನತೆಯನ್ನು ಹೇಗೆ ಕೇಳಲಾದೀತು ? ದೇಶದ ವ್ಯವಹಾರಗಳಸೂತ್ರ ಹಿಡಿದಿರುವವರು, ಕಾನೂನುಗಳನ್ನು ಮಾಡುವವರು, ಸರ್ಕಾರ ನಡೆಸುವವರು ಐಷಾರಾಮದ ಜೀವನ ನಡೆಸುತ್ತಲಿದ್ದರೆ, ರಾಷ್ಟ್ರ ನಿರ್ಮಾಣ ಕಾರ್ಯಕ್ಕಾಗಿ ತ್ಯಾಗ ಮಾಡುವಂತೆ ಜನತೆಯನ್ನು ಕೇಳುವಂಥ ನೈತಿಕ ಬಲ ಅವರಿಗೆ ಇರುವುದಿಲ್ಲ............

ಸಮಾಜ ಸರ್ಕಾರವನ್ನು ಅವಲಂಬಿಸಿದೆ, ಸರ್ಕಾರ ಅಧಿಕಾರಶಾಹಿಯನ್ನು ಅವಲಂಬಿಸಿದೆ. ಎಂದರೆ ಜನತೆ ಸರ್ಕಾರದ ಅಧೀನದಲ್ಲಿದೆ, ಸರ್ಕಾರ ಅಧಿಕಾರಶಾಹಿಯ ವಶದಲ್ಲಿದೆ. ನಾನು ಹೇಳಿದ್ದು ಕೆಲಮಟ್ಟಿಗೆ ನಿಜ.............

ಸರ್ಕಾರಿ ನೌಕರರ ಸಂಖ್ಯೆ ಸುಮಾರು ಒಂದು ಕೋಟಿ. ಆ ಪೈಕಿ ಬಹುಪಾಲು ಜನ ಯಾವುದೇ ಉತ್ಪಾದನಾ ಪರ ಕಾರ್ಯ ಮಾಡುತ್ತಿಲ್ಲ. ಇತರ ಕೆಲವು ದೇಶಗಳಲ್ಲಿಯಂತೆ ನಮ್ಮ ದೇಶದಲ್ಲಿ ಪಾರ್ಕಿನ್‌ಸನ್‌ನ ನಿಯಮ ಜಾರಿಯಲ್ಲಿಲ್ಲವೆಂಬುದು ನಿಜ. ಒಬ್ಬ ವ್ಯಕ್ತಿಯ ನೆಂಟರಿಷ್ಟರಿಗೆ ಉದ್ಯೋಗ ಒದಗಿಸಿಕೊಡುವುದಕ್ಕಾಗಿಯೇ ನಮ್ಮ ದೇಶದಲ್ಲಿ ಖಾಲಿಸ್ಥಾನಗಳು ಹುಟ್ಟಿಕೊಳ್ಳುತ್ತವೆ. ಅವುಗಳಿಂದ ಯಾವ ಉಪಯೋಗವೂ ಇರುವುದಿಲ್ಲ. ನಾನು ಅಂದಾಜು ಮಾಡಿರುವ ಪ್ರಕಾರ, ಹಾಗೆ ಪ್ರಯೋಜನಕ್ಕೆ ಬಾರದ ನೌಕರರೇ 30 - 40 ಲಕ್ಷ ದಷ್ಟಿದ್ದಾರೆ. ಹಾಗಿದ್ದರೂ ಅವರು ಸರ್ಕಾರಿ ನೌಕರಿಯಲ್ಲಿದ್ದಾರೆ. ಈ ಪ್ರಯುಕ್ತ ತಗಲುವ ನಿರರ್ಥಕ ವೆಚ್ಚವನ್ನು ನಿರ್ಧರಿಸುವುದು ಕಷ್ಟ. ಹೀಗೆ ಅನುತ್ಪಾದಕ ಕೆಲಸದಲ್ಲಿ ತೊಡಗಿರುವ ಉದ್ಯೋಗಿಗಳ ಸಂಖ್ಯೆ 30-40 ಲಕ್ಷ ದಷ್ಟಿರಲಾರದೆಂದೂ ಹಾಗೂ ಅದು 20 ಲಕ್ಷವೇ ಎಂದು ಲೆಕ್ಕ ಹಾಕಿದರೂ ಈ ಲೆಕ್ಕ ಶೀರ್ಷಿಕೆಯಲ್ಲಿ ನಾವು 300 ಕೋಟಿ ರೂ. ಉಳಿತಾಯ ಮಾಡಬಹುದು.

ತಾನೂ ಶ್ರೀಸಾಮಾನ್ಯನಂತೆಯೇ ತಾಪತ್ರಯಗಳನ್ನು ಅನುಭವಿಸುತ್ತಿರುವುದಾಗಿ ಸರ್ಕಾರ ಜನತೆಯ ಮುಂದೆ ತನ್ನ ಕಷ್ಟಗಳನ್ನು ತೋಡಿಕೊಳ್ಳಲು ಸಿದ್ಧವಾಗಿ, ಅದನ್ನು ರುಜುವಾತುಪಡಿಸಿದ ಹೊರತು ಏನು ಮಾಡುವುದೂ ಸಾಧ್ಯವಿಲ್ಲ. ಆ ನೌಕರರನ್ನು ಕೆಲಸದಿಂದ ತೆಗೆದುಹಾಕಬೇಕೆಂದು ನಾನು ಹೇಳುತ್ತಿಲ್ಲ. ನಾನು ಸೂಚಿಸುವುದೇನೆಂದರೆ ಕಡತಗಳ ಕೆಲಸಕ್ಕೆ ಬದಲು ಅವರನ್ನು ಯಾವುದಾದರೂ ಉತ್ಪಾದಕ ಕಾರ್ಯದಲ್ಲಿ ತೊಡಗಿಸಿದರೆ ದೇಶದ ಅಭ್ಯುದಯಕ್ಕೆ ಅವರ ಪರಿಶ್ರಮದ ಕೊಡುಗೆಯೂ ಸಂದಂತಾಗುತ್ತದೆ. ಸರ್ಕಾರ ಈ ಕೆಲಸ ಮಾಡಬಹುದು. ಇಂದು ಏನು ನಡೆಯುತ್ತಿದೆ? ಸರ್ಕಾರದ ಕಾರ್ಯ ವೈಖರಿ ಹೀಗೇ ಸಾಗಿದರೆ ಒಂದು ದಿನ ನಮ್ಮ ದೇಶ ಸೋಮಾರಿಗಳ ಸಂತೆಯಾಗುತ್ತದೆ. ಈಗ, ಪ್ರತಿಯೊಂದು ಕಾರ್ಮಿಕ ವರ್ಗ ತುಟ್ಟಿಭತ್ಯೆ ಕೇಳುತ್ತಿದೆ. ಶ್ರೀ ಬ್ಯಾನರ್ಜಿಯವರು ಈ ಬೇಡಿಕೆಯನ್ನು ಪ್ರಬಲವಾಗಿ ಬೆಂಬಲಿಸುತ್ತಿದ್ದಾರೆ. ಅವರು ಸರಿಯಾದ ಕ್ರಮ ಏಕೆ ಕೈಗೊಳ್ಳುತ್ತಿಲ್ಲ ಎಂಬುದು ನನ್ನ ಪ್ರಶ್ನೆ. ಮೇಲಿನ ಅಧಿಕಾರಿಗಳೇಕೆ ಐಷಾರಾಮದ ಜೀವನ ನಡೆಸಬೇಕು ? ನಾನೇನಾದರೂ ಟ್ರೇಡ್ ಯೂನಿಯನ್‌ಗಳ ಮುಂದಾಳುವಾಗಿದ್ದಿದ್ದರೆ ನಾನು ತುಟ್ಟಿಭತ್ಯದ ಬಗ್ಗೆ ಮಾತನಾಡುತ್ತಿರಲಿಲ್ಲ. ದೊಡ್ಡ ಮನುಷ್ಯರೆನಿಸಿಕೊಂಡವರು ಮಾಡುತ್ತಿರುವ ವೆಚ್ಚಗಳನ್ನು ಕಡಿತಗೊಳಿಸಲು ಕೇಳುತ್ತಿದ್ದೆ. ಹಾಗಾದಾಗ ಬೆಲೆಗಳೂ ತಗ್ಗುತ್ತಿದ್ದವು, ಸಮಾಜವೂ ಸುಗಮವಾಗಿ ಸಾಗುತ್ತಿತ್ತು.

ಬಿರ್ಲಾಗಳು ಹಾಗೂ ಹಿರಿಯ ಸರ್ಕಾರಿ ಉದ್ಯೋಗಿಗಳಂಥ ದೊಡ್ಡ ಜನರು ಮಾಡುವ ವೆಚ್ಚಗಳನ್ನು ನಾವು ಕಡಿಮೆ ಮಾಡಿಸಬಲ್ಲೆವಾದರೆ ನಾವು ನಮ್ಮ ಸಮಾಜವನ್ನು ಕಟ್ಟಲು ಸಮರ್ಥರಾಗುತ್ತೇವೆ.

ನಾನು ನಿಮಗೆ ಅಂಕಿಅಂಶಗಳನ್ನು ನೀಡುತ್ತಿದ್ದೇನೆ. ಆದರೆ ಅಂಕಿಅಂಶಗಳಿಗೆ ಪ್ರಾಮುಖ್ಯತೆ ನೀಡಬೇಡಿ. ನನ್ನ ಅಂದಾಜಿನ ಅಂಕಿ 1500 ಕೋಟಿ ರೂ. ಗಳಿದ್ದರೂ ನಾನು ಹಿಂಜರಿಯುತ್ತಲೇ 1000 ಕೋಟಿ ರೂ. ಎಂದಿರಬಹುದು. ಇಬ್ಬರೂ ಮಾನ್ಯ ಸಚಿವರು, ಎಂದರೆ ಶ್ರೀ ಮೆಹತಾ ಒಬ್ಬರು ಹಾಗೂ ಇನ್ನೊಬ್ಬರು ಶ್ರೀ ಮೊರಾರ್ಜಿ ದೇಸಾಯಿ 25 ಕೋಟಿ ರೂ. ಎಂಬ ಅಂಕಿಯನ್ನು ಉಲ್ಲೇಖಿಸಿದ್ದಾರೆ. ಶ್ರೀ ಮೆಹತಾ ಅವರು ಉದ್ಗಾರ ಎತ್ತುತ್ತಿದ್ದ ಕಾಲವೊಂದಿತ್ತು ಶ್ರೀ ಮೊರಾರ್ಜಿ ದೇಸಾಯಿಯವರು ಹಾಗೆ ಮಾಡಿದ್ದರೋ ಇಲ್ಲವೋ ನನಗೆ ಗೊತ್ತಿಲ್ಲ. ಏಕೆಂದರೆ, ಅವರು ಯಾವುದೇ ಮಹತ್ವದ ಹೇಳಿಕೆ ಕೊಟ್ಟಿಲ್ಲ. ಆದರೆ ಶ್ರೀ ಮೆಹತಾ ಉಲ್ಲೇಖನೀಯವಾದ ಹಲವಾರು ಹೇಳಿಕೆ ಕೊಟ್ಟಿದ್ದಾರೆ. ಆ ಪೈಕಿ ಒಂದನ್ನು ಇಲ್ಲಿ ಉದ್ಧರಿಸುತ್ತೇನೆ. ''ದೇಶದ ವರಮಾನದ ಶೇಕಡಾ 5, ಶೇಕಡಾ 0. 14 ರ ಪಾಲಾಗುತ್ತದೆ!''

ಎಂದರೆ ರಾಷ್ಟ್ರೀಯ ವರಮಾನದ 1000 ಕೋಟಿ ರೂ. ಏಳು ಲಕ್ಷ ಜನರಿಗೆ ಅಥವಾ 1.5 ಲಕ್ಷ ಕುಟುಂಬಗಳ ಪಾಲಾಗುತ್ತದೆ. ಈ ಅಂಕಿಸಂಖ್ಯೆಗಳನ್ನು ನಾನು ಒಪ್ಪುತ್ತೇನೆ. ಆದರೆ ವಾಸ್ತವ ಸಂಗತಿಯೆಂದರೆ ಅವರು ಈ ಪುಸ್ತಕವನ್ನು ಬರೆದ ತರುವಾಯ ಎಂದರೆ 1953 ರಿಂದೀಚೆಗೆ ಏರುಪೇರು ಇನ್ನೂ ಹೆಚ್ಚಾಗಿದೆ. ಅಂಕಿಸಂಖ್ಯೆಗಳು 1000 ಕೋಟಿ ರೂ. ಗಳನ್ನು ಮೀರಿ ಮೇಲೇರಿವೆ. ಅದನ್ನು ನೀವು 1000 ಕೋಟಿ ರೂ. ಗಳೆಂದೇ ಇಟ್ಟುಕೊಂಡು ಈ 1.5 ಲಕ್ಷ ಕುಟುಂಬಗಳ ವೆಚ್ಚವನ್ನು 1500 ಕೋಟಿ ರೂ. ಗಳಿಗೆ ಮಿತಿಗೊಳಿಸುವ ನನ್ನ ಸೂಚನೆಯನ್ನು ಕೃತಿಗಿಳಿಸಿದರೆ ವೆಚ್ಚ 250 ಕೋಟಿ ರೂ. ಗಳಾಗುತ್ತದೆ. ಹಾಗೂ ಇದರಿಂದ 750 ಕೋಟಿ ರೂ. ಉಳಿತಾಯವಾಗುತ್ತದೆ.

ಅದು, ಶ್ರೀ ಮೆಹತಾ ಅವರು ಯೌವನದ ಹುರುಪಿನಲ್ಲಿದ್ದಾ ಹೇಳಿದ ಮಾತು. ಈಗ ಅವರು 25 ಕೋಟಿ ರೂ. ಗಳಿಗೆ ಬಂದಿದ್ದಾರೆ. ಶ್ರೀ ಮೊರಾರ್ಜಿ ದೇಸಾಯಿಯವರು ಯಾವಾಗಲಾದರೂ ಇಂಥ ಹೇಳಿಕೆ ಕೊಟ್ಟಿದ್ದಾರೆಯೇ ಇಲ್ಲವೇ ನನಗೆ ಗೊತ್ತಿಲ್ಲ. ಇದ್ದರೂ ಇರಬಹುದು. ಆದರೆ ಉಲ್ಲೇಖಾರ್ಹವಾದ ಅಂಥಯಾವುದೇ ಉದಾಹರಣೆ ನನಗೆಸಿಕ್ಕಿಲ್ಲ. ಹೀಗಾಗಿ ಅವರ ಬಗ್ಗೆ ನಾನು ಏನನ್ನೂ ಹೇಳಲಾರೆ.

.......ಈಗ ನಾನು ರಾಷ್ಟ್ರೀಯ ವರಮಾನದ ವಿತರಣೆಯ ವಿವರಗಳನ್ನು ನೀಡಲು ಬಯಸುವುದಿಲ್ಲ. ಆದರೆ ನನ್ನ ಸಲಹೆಯಂತೆ ನಡೆದರೆ, ಚೇಂಬರ ಆಫ್ ಕಾಮರ್ಸ್‌ನ ಅಂಕಿಅಂಶಗಳಿಗನುಸಾರವಾಗಿಯೇ ನಾವು 57 ಕೋಟಿ ರೂ.ಗಳ ವರೆಗೂ ಉಳಿತಾಯ ಮಾಡಬಹುದೆಂದು ಭರವಸೆ ನೀಡಬಲ್ಲೆ, ಆದರೆ ವರಮಾನ ತೆರಿಗೆ ಆಯುಕ್ತರು ನೀಡುವ ಅಂಕಿಅಂಶಗಳನ್ನು ನೀವು ಅನುಸರಿಸಿದರೆ ನಿಮಗೇನೂ ಸಿಗುವುದಿಲ್ಲ, ಏಕೆಂದರೆ ಆ

ಅಂಕಿ ಅಂಶಗಳಿಂದ ಏನನ್ನೂ ಸಾಧಿಸಲಾಗುವುದಿಲ್ಲ. ತೆರಿಗೆ ಸಂದಾಯ ಮಾಡದಿರುವವರು ಸಾಕಷ್ಟು ಸಂಖ್ಯೆಯಲ್ಲಿದ್ದಾರೆ. ಅವರು ತೆರಿಗೆ ಸಂದಾಯ ಮಾಡುವುದರಿಂದ ತಪ್ಪಿಸಿ ಕೊಳ್ಳುತ್ತಾರೆ. ನಾನು ಇಂಥವರ ವರಮಾನವನ್ನು ಲೆಕ್ಕಕ್ಕೆ ತೆಗೆದುಕೊಂಡರೆ ಆ ಸಂಖ್ಯೆ 57 ಕೋಟಿ ರೂ.ಗಳ 3 ಪಟ್ಟು ಹೆಚ್ಚಾಗುತ್ತದೆ. ಅದನ್ನು ನೀವು ಇಮ್ಮಡಿಗೊಳಿಸಿದರೂ 114 ಕೋಟಿ ರೂ. ಗಳಾಗುತ್ತದೆ. ಕೃಷಿ ಮುಂತಾದುವುಗಳಿಂದ ಬರುವ ವರಮಾನವನ್ನು ಇದಕ್ಕೆ ಸೇರಿಸಿದರೆ ನಾವು 300 ಕೋಟಿ ರೂ.ಗಳನ್ನು ಉಳಿತಾಯ ಮಾಡಬಹುದು. ಪ್ರತಿಯೊಂದು ಲೆಕ್ಕ ಶೀರ್ಷಿಕೆಯ ಕೆಳಗೆ ಬರುವ ಅಂಕಿಅಂಶಗಳನ್ನು ನಾನು ಲೆಕ್ಕ ಹಾಕಿದರೆ ಇನ್ನೂ ಹೆಚ್ಚು ಮೊತ್ತವನ್ನು ನಾವು ಉಳಿತಾಯ ಮಾಡಬಲ್ಲೆವೆಂಬುದನ್ನು ನಾನು ನಿಮಗೆ ರುಜುವಾತು ಪಡಿಸಬಲ್ಲೆ.

ಒಮ್ಮೆ ಚರ್ಚೆ ನಡೆಯುತ್ತಿತ್ತು. ಇಲ್ಲಿ ಶ್ರೀ ನಂದಾ ಕುಳಿತಿದ್ದರು. ಅವರು ಒಂದು ಸಂಗತಿಯನ್ನು ಒಪ್ಪಿಕೊಂಡಿದ್ದರು. ಆಗಿನ ಅವರ ನಾಯಕನ ಬಗ್ಗೆ ನಾನು ಏನನ್ನೂ ಹೇಳಲಾರೆ. ಅವರು 7 1/2 ಆಣೆಗಳೆಂದು ಹೇಳಿದ್ದರು, ಸರಿಸುಮಾರು 8 ಆಣೆ ಎನ್ನಬಹುದು. ಅದು 3 ಆಣೆಗಳಾಗ ಬೇಕೆಂದು ನಾನು ಹೇಳಿದ್ದೆ. ಈಗ ನಾನು ಅದನ್ನು 4 ಅಣೆಗೆ ಏರಿಸುತ್ತೇನೆ. ಶ್ರೀ ನಂದಾ ಅವರು ನೀಡಿದ ಅಂಕಿ ಅಂಶಗಳನ್ನೇ ಅನುಸರಿಸಿದರೂ..... 6000 ಕೋಟಿ ರೂ. ಉಳಿತಾಯ ಮಾಡಬಹುದು ಹಾಗೂ ನನ್ನ ಪ್ರಕಾರ ಅದು 9000 ಕೋಟಿ ರೂ. ಗಳಾಗಬೇಕು.

.....ನಾನು ಹೇಳಿದ 6000 ಕೋಟಿ ರೂ. ಗಳ ಉಳಿತಾಯ ಸಂಪೂರ್ಣ ವಾಗಿ ದೊಡ್ಡ ಮನುಷ್ಯರಿಗೇ ಸಂಬಂಧಿಸಿದ ಅಲ್ಲದಿರಬಹುದು ಹಾಗೂ ಅದರಲ್ಲಿ ಭಾಗಶಃ ಮಧ್ಯಮವರ್ಗದವರೂ ಇರಬಹುದು. ಆದರೆ ನಾನು ನೀಡಿರುವ 1000 ಕೋಟಿ ರೂ.ಗಳ ಅಂದಾಜು ತಪ್ಪಾಗಲಾರದು.

ನೋಬೆಲ್ ಪಾರಿತೋಷಕ ವಿಜೇತ ಶ್ರೀ ಪೌಲಿಂಗ ಒಮ್ಮೆ ಇಲ್ಲಿಗೆ ಬಂದಿದ್ದರು. ಭಾರತದ ಆರ್ಥಿಕ ಸ್ಥಿತಿ ಕುಸಿಯುತ್ತಿದೆ ಎಂದು ಅವರು ಹೇಳಿದರು. ಈ ಬಗ್ಗೆ ದೊಡ್ಡ ಕೋಲಾಹಲ ಎದ್ದಿತು. ಸಾಕಷ್ಟು ವಾದ ಪ್ರತಿವಾದಗಳಾದವು. ಸಮರ್ಪಕ ಉತ್ತರ ನೀಡಲು ಜನತೆಗೆ ಸಾಧ್ಯವಾಗಲಿಲ್ಲ. ಸರ್ಕಾರದ ರಾಷ್ಟ್ರೀಯ ಅನುಭೋಗ ಸರ್ವೆಕ್ಷಣೆ ನೀಡಿದ ಅಂಕಿಅಂಶಗಳನ್ನು ನೋಡಿದಾಗ ಸಮಾಜದ ಕೆಳವರ್ಗಕ್ಕೆ ಸೇರಿದ ಶೇಕಡಾ 20 ರಷ್ಟು ಜನರು ಎಣ್ಣೆ, ಸಕ್ಕರೆ, ಖಂಡಸಾರಿ ಮುಂತಾದವುಗಳನ್ನು ಬಳಸುವ ಪ್ರಮಾಣ ಕುಗ್ಗಿದೆ. ಸರ್ಕಾರವೇ ಇದನ್ನು ಒಪ್ಪಿಕೊಂಡಿದೆ.

ನನ್ನ ವಿಚಾರಗಳಿಗೆ ಪ್ರತಿಕ್ರಿಯೆಯಾಗಿ ಕೆಲವರು, ನನ್ನ ವಿಚಾರಗಳು ಯಾರನ್ನೂ ಪ್ರೇರೇಪಿಸುವುದಿಲ್ಲವೆಂದೂ ಹಾಗೂ ನನ್ನ ವಿಚಾರಧಾರೆಯಿಂದಾಗಿ ಕೆಲಸ ಕಡಿಮೆ ಯಾಗುತ್ತದೆಂದು, ಏಕೆಂದರೆ ಕಡಿಮೆ ವೇತನಕ್ಕೆ ಕಡಿಮೆ ಕೆಲಸವೆಂದೂ ಅರ್ಥವಾಗುವುದೆಂದೂ ಇದರಲ್ಲಿ ದೇಶದ ಆರ್ಥಿಕತೆಯ ಹಿತ ಇಲ್ಲವೆಂದೂ ವಾದಿಸಬಹುದು. ಇಂಥವರಿಗೆ ನಾನು ರಾಜಾಜಿಯವರ ನಿದರ್ಶನವನ್ನು ತೋರಿಸಬಯಸುತ್ತೇನೆ. ರಾಜಾಜಿಯವರು 1200 ಎಕರೆ ವಿಸ್ತೀರ್ಣ ಪ್ರದೇಶವನ್ನು ಒಳಗೊಂಡಿದ್ದ ಅರಮನೆಯಂಥ ಬಂಗಲೆಯಲ್ಲಿ ವಾಸಿಸುತ್ತಿದ್ದಾಗ, ಅವರು, ಈಗ ಅದಕ್ಕೆ ಹೋಲಿಸಿದರೆ ತೀರ ಚಿಕ್ಕದೆನಿಸಬಹುದಾದ ಕೇವಲ 1/4 ಎಕರೆ ವಿಸ್ತೀರ್ಣದ ಪ್ರದೇಶವನ್ನೊಳಗೊಳ್ಳುವ ತೀರ ಚಿಕ್ಕ ಮನೆಯಲ್ಲಿದ್ದುಕೊಂಡು ಮಾಡುತ್ತಿದ್ದುದಕ್ಕಿಂತ ಕಡಿಮೆ ಕೆಲಸ ಮಾಡುತ್ತಿದ್ದರು.

ಅವರು ಶತಾಯುಷಿಯಾಗಿ ಕೆಲಸದಲ್ಲಿ ತೊಡಗಿರಲಿ ಎಂದು ಹಾರೈಸುತ್ತೇನೆ. ಹಣ ಅಥವಾ ಕೂಲಿಯ ಮೊತ್ತಕ್ಕೂ ಮತ್ತು ಫಲಿತಾಂಶಕ್ಕೂ ಯಾವುದೇ ಸಂಬಂಧವಿಲ್ಲವೆಂಬುದನ್ನು ಇದು ತೋರಿಸುತ್ತದೆ.

ಅಧಿಕಾರಶಾಹಿಗಳು ಹಾಗೂ ಬಂಡವಾಳಶಾಹಿಗಳ ನಡುವಣ ಸಂಬಂಧ ನಿಮಗೆ ತಿಳಿಯಲಿ ಎಂದು ನನ್ನ ಬಯಕೆ. ಈ ದೇಶದಲ್ಲಿರುವ ಬಂಡವಾಳಶಾಹಿಗಳಿಗೆ ಹೋಲಿಸಿದರೆ ಅಧಿಕಾರ ಶಾಹಿಗಳ ಸಂಖ್ಯೆ ಜಾಸ್ತಿಯೇ ಇದೆ. ಮೂವತ್ತು ಲಕ್ಷ ಅಧಿಕಾರಶಾಹಿಗಳಿದ್ದಾರೆ ಎಂದಿಟ್ಟು ಕೊಂಡರೆ ಬಂಡವಾಳಶಾಹಿಗಳ ಸಂಖ್ಯೆ ಇಪ್ಪತ್ತು ಲಕ್ಷ ಅಥವಾ ಅವರಿಬ್ಬರಿದೂ ಸೇರಿ ಒಟ್ಟು ಇಪ್ಪತ್ತೇ ಲಕ್ಷವಿದ್ದರೂ, ಎಂದರೆ ಹನ್ನೆರಡು ಲಕ್ಷ ಅಧಿಕಾರಶಾಹಿಗಳು ಹಾಗೂ ಎಂಟು ಲಕ್ಷ ಬಂಡವಾಳಶಾಹಿಗಳು ಇರುತ್ತಾರೆ. ಕರಾಚಿ ಗೊತ್ತುವಳಿಯಲ್ಲಿ ಮಾಡಿದ ತಪ್ಪಿನ ಪುನರಾವರ್ತನೆಯಾಗುವುದು ಬೇಡ. ಆಗ ಸರ್ಕಾರಿ ಉದ್ಯೋಗಿಗಳಿಗೆ ಹಾಗೂ ಸಚಿವರಿಗೆ ಉನ್ನತ ಆದರ್ಶಗಳ ಚೌಕಟ್ಟು ಹಾಕಿ, ಅವರ ಸುತ್ತ ಎಲ್ಲ ಆಕರ್ಷಣೆಗಳಿದ್ದರೂ ಅವರನ್ನು ಮಾತ್ರ ಆದರ್ಶಗಳ ಮಾನದಂಡವಾಗಿಸಿ, ಅವರ ವೇತನಗಳ ಮೇಲೆ ಮಿತಿ ಹೇರಿ ಬಂಡವಾಳಶಾಹಿಗಳಿಗೆ ಮಾತ್ರ ಮತ್ತಷ್ಟು ಇನ್ನಷ್ಟು ಹಣ ಸಂಗ್ರಹಿಸಲು ಪೂರ್ಣ ಸ್ವಾತಂತ್ರ್ಯ ನೀಡಲಾಗಿತ್ತು. ಇದೊಂದು ವಿಧದ ವಿಪರ್ಯಾಸ. ಇದು ಅಸಾಧ್ಯವಾದುದಾಗಿತ್ತು. ಸಮಾಜದ ಎಲ್ಲ ವರ್ಗಗಳಿಗೂ ಒಟ್ಟಾರೆಯಾಗಿ ನಿರ್ಬಂಧವಿದ್ದರೆ ಸರ್ಕಾರಿ ಉದ್ಯೋಗಿಗಳು ಹಾಗೂ ಸಚಿವರು ಪ್ರಾಮಾಣಿಕರಾಗಿರಬಲ್ಲರು , ಆದರ್ಶಪ್ರಾಯರಾಗಿರಬಲ್ಲರು.

ಈಗ ಒಂದು ಪ್ರಶ್ನೆ, ಪದಾರ್ಥಗಳ ಬಳಕೆಯನ್ನು ಕಡಿಮೆ ಮಾಡುವ ಬಗ್ಗೆ ಹಾಗೂ ವೆಚ್ಚವನ್ನು ತಗ್ಗಿಸಬೇಕಾದುದರ ಕುರಿತೇ ನೀವು ಒತ್ತು ಕೊಡುವುದೇಕೆ ?

ರಾಷ್ಟ್ರೀಕರಣದ ಬಗ್ಗೆ ಏಕೆ ಮಾತನಾಡುವುದಿಲ್ಲ? ಎಂದು ಹಲವರು ಕೇಳುತ್ತಾರೆ. ಆದರೆ ನಾನು ಅದಕ್ಕಿಂತ ಹೆಚ್ಚಿನದರ ಬಗೆಗೆ ಪ್ರಸ್ತಾಪಿಸುತ್ತೇನೆ ಎಂಬುದೇ ನನ್ನ ಉತ್ತರ. ಬ್ಯಾಂಕ್ ರಾಷ್ಟ್ರೀಕರಣವಾದರೆ ಈಗ ಇಲ್ಲದಿರುವ ಪ್ರೇರಣೆ ಪ್ರೋತ್ಸಾಹ ಕೆಲಸಕ್ಕೆ ಆಗ ದೊರೆಯುತ್ತದೆ ಎಂದು ಜನರು ಭಾವಿಸಿರುವುದು ತಮಾಷೆಯ ಸಂಗತಿ. ಅವರ ಭಾವನೆ ತಪ್ಪು. ಬ್ಯಾಂಕ್ ರಾಷ್ಟ್ರೀಕರಣದಿಂದ ಅವರಿಗೆ ಕೆಲಸಕ್ಕೆ ಸ್ಫೂರ್ತಿ ದೊರೆಯುತ್ತದೆ ಎಂದವರು ತಿಳಿದಿದ್ದರೆ ಅದನ್ನು ಒಪ್ಪೋಣ. ಮನುಷ್ಯ ತನ್ನ ಮಕ್ಕಳ ಭವಿಷ್ಯದ ಬಗ್ಗೆ ಹೆಚ್ಚು ಕಾತರನಾಗಿದ್ದು ಭಾವನಾತ್ಮಕವಾಗಿ ಅದಕ್ಕೆ ಅತುಕೊಂಡಿರುತ್ತಾನೆ ಎಂದು ಕೇಳಿದ್ದೇನೆ. ಹಾಗಿದ್ದರೆ ಅವರ ಹೆಸರಿನಲ್ಲಿ ಒಂದು ಬ್ಯಾಂಕ್ ಉಳಿತಾಯ ಖಾತೆ ತೆರೆದು ಇಪ್ಪತ್ತು ವರ್ಷಗಳ ಅವಧಿಯ ವರೆಗೆ ನಿರ್ದಿಷ್ಟ ಮೊತ್ತದ ಹಣವನ್ನು ಉಳಿತಾಯ ಮಾಡಿದರಾಯಿತೆಂದು ನನ್ನ ಸಲಹೆ. ಕೇವಲ ಇಪ್ಪತ್ತು ವರ್ಷ ಎಂದು ನಾನು ಹೇಳುವುದರ ಕಾರಣವೆಂದರೆ ಇಪ್ಪತ್ತು ವರ್ಷಗಳ ನಂತರ ನಿಮ್ಮ ದೇಶ ಸ್ವಾವಲಂಬಿಯಾದಾಗ ನೀವು ನಿಮ್ಮ ಇಷ್ಟಬಂದಂತೆ ಹಣವನ್ನು ವೆಚ್ಚ ಮಾಡಬಹುದು. ಉಳಿತಾಯದ ಹಣವನ್ನು ಅವರಿಗೆ ಅಥವಾ ಅವರ ಮಕ್ಕಳಿಗೆ ನೀಡಬಹುದು. ನಾನು ಹೇಳಿದಂತೆ ಮಾಡಿದರೆ, 20 ವರ್ಷಗಳ ಅವಧಿಯಲ್ಲಿ ನೀವು ನಿಮ್ಮ ಖರ್ಚು ವೆಚ್ಚವನ್ನು ಆ ದೃಷ್ಟಿಯಿಂದ ಸರಿತೂಗಿಸಿ ಕೊಳ್ಳುತ್ತೀರಿ.

ನನ್ನ ಗತಿಸ್ಥಿತಿಯ ಬಗ್ಗೆ ಜನ ಆಗಾಗ ಕೇಳುತ್ತಿರುತ್ತಾರೆ. ಆದರೆ ನಾವು ವಿಶೇಷ ಸೌಲಭ್ಯಗಳುಳ್ಳ ವರ್ಗ ಎಂದು ನಾನು ಅವರಿಗೆ ಹೇಳುತ್ತೇನೆ. ನನ್ನ ಮಾಸಿಕ ವೇತನ ಕೇವಲ 500 ರೂ. ಗಳಾದರೂ, ನಾನು ಬಳಸುವ ಸೌಕರ್ಯಗಳನ್ನೆಲ್ಲ ಎಂದರೆ ವಸತಿ ಮುಂತಾದುವುಗಳನ್ನು ಲೆಕ್ಕಕ್ಕೆ ತೆಗೆದುಕೊಂಡರೆ, ನನ್ನ ಮಾಸಿಕ ವೇತನ 2500 ರೂ. ಗಳಿಗಿಂತ ಕಡಿಮೆಯಾಗಲಾರದು. ನಾನು ನನ್ನ ನಿದರ್ಶನವನ್ನೆ ಕೊಟ್ಟಿದ್ದೇನೆ. ಆದರೆ ಸಚಿವರ ಬಗೆಗೂ ಹೇಳಬೇಕು. ಅವರೂ ತಿಂಗಳೊಂದಕ್ಕೆ ಸುಮಾರು 7000 ರೂ. ಪಡೆಯುತ್ತಾರೆ. ಆದರೆ ಅದು ವರ್ಷವೊಂದಕ್ಕೆ ಸುಮಾರು ಒಂದು ಲಕ್ಷ ರೂ.ಗಳಾಗುತ್ತದೆ. ಅವರ ಜೀವನ ರೀತಿ ಇತರರಲ್ಲಿ ಅಸೂಯೆ ಮೂಡಿಸುವಂತಿರುತ್ತದೆ. ರಾಷ್ಟ್ರಪತಿ ಭವನದಲ್ಲಿಯ ಲಿಫ್ಟಗಳನ್ನು ಬದಲಿ ಮಾಡಲು 40 ಲಕ್ಷ ರೂ ಗಳನ್ನು ವೆಚ್ಚ ಮಾಡಲು ಅವರು ಒಮ್ಮೆ ಯೋಜನೆ ಹಾಕಿದ್ದರು. ಅದಕ್ಕಾಗಿ ಆಗಲೇ 5 - 6 ಲಕ್ಷ ರೂ. ಗಳಷ್ಟು ವೆಚ್ಚ ಮಾಡಲಾಗಿತ್ತು. ಭಾರತದ ರಾಷ್ಟ್ರಪತಿ ಹಾಗೂ ಪ್ರಧಾನಮಂತ್ರಿಗಾಗಿ ಖರ್ಚು ಮಾಡಬೇಕಾದ ಹಣವನ್ನು 10 ರಿಂದ 30 ಲಕ್ಷ ರೂ. ಗಳಷ್ಟು ಮಾತ್ರ ತೋರಿಸಲಾಗುತ್ತದೆ. ಎಂಬುದು ಎಲ್ಲರಿಗೂ ತಿಳಿದ ವಿಷಯ. ಆದರೆ ಅವರಲ್ಲಿ ಪ್ರತಿಯೊಬ್ಬರಿಗೂ ವಾರ್ಷಿಕವಾಗಿ ಕನಿಷ್ಠ ಪಕ್ಷ ಒಂದು ಕೋಟಿ ರೂ. ವೆಚ್ಚ ಮಾಡಲಾಗುವುದೆಂಬ ಅಂಶವನ್ನು ನಾನು ರುಜುವಾತು ಮಾಡಿದ್ದೇನೆ. ಇಂಥ ಉಪಭೋಗದ ಜೀವನ ರೀತಿ ಈ ದೇಶದಲ್ಲಿ ನ್ಯಾಯೋಚಿತವೇ? ಯೂರೋಪ್

ಅಮೇರಿಕಾಗಳಲ್ಲಿಯ ಪದ್ಧತಿಗಳನ್ನು ಅನುಕರಿಸುವ ಮಾತ್ರದಿಂದಲೇ ನಮ್ಮ ದೇಶದ ಕೃಷಿ ಉತ್ಪಾದನೆಯನ್ನು ಹೆಚ್ಚಿಸಲು ಬಯಸುವ ರೀತಿ ಇದೇ ಏನು ? ಮೊದಲ ಇಪ್ಪತ್ತು ವರ್ಷಗಳಲ್ಲಿ ನಾವು ನಮ್ಮ ದೇಶದ ಕೃಷಿ ಉತ್ಪಾದನೆಯನ್ನು ಹೆಚ್ಚಿಸಬಲ್ಲೆವಾದರೆ, ಪಾಶ್ಚಿಮಾತ್ಯರ ಜೀವನ ಶೈಲಿಯನ್ನು ಅನುಕರಿಸುವುದರ ಬಗ್ಗೆ ನನ್ನ ಆಕ್ಷೇಪಣೆಯೇನೂ ಇಲ್ಲ.

ನಾನೂ ಸೌಕರ್ಯಪೂರ್ಣವಾಗಿ ಬದುಕಲು ಇಚ್ಛಿಸುತ್ತೇನೆ. ನನಗೊಬ್ಬ ರಷ್ಯನ ಸ್ನೇಹಿತ ಇದ್ದ. ಆತ ಬಹುಶಃ ರಷ್ಯಾದ ಗುಪ್ತದಳದ ಏಜೆಂಟ್ ಆಗಿದ್ದಿರಬಹುದು. ದಿನಕ್ಕೆರಡು ಬಾರಿ ಆತ ನನ್ನನ್ನು ಸಂಧಿಸುತ್ತಿದ್ದ. ತಾಷ್ಕೆಂಟ್ ಒಪ್ಪಂದಕ್ಕೆ ಮುಂಚಿನ ದಿನಗಳವು. ಈಗ ಆತ ಎಲ್ಲೂ ಕಾಣುತ್ತಿಲ್ಲ. ನನ್ನ ಮನೆಗೆ ನಾನು ಹವಾ ನಿಯಂತ್ರಕವನ್ನೇಕೆ ಹಾಕಿಸಿಲ್ಲ ಎಂದವನು ಕೇಳಿದ್ದ. ಕಾರ್ಮಿಕರ ಕಲ್ಯಾಣಕ್ಕಾಗಿ ದುಡಿಯುವ ನಾನು ಅದಿಲ್ಲದೇ ಹೇಗೆ ಕೆಲಸ ನಿರ್ವಹಿಸುತ್ತೇನೆ ಎಂದೂ ಕೇಳಿದ್ದ. ರಷ್ಯಾದಂತೆ ನನ್ನ ದೇಶವೂ ಒಕ್ಕಲುತನದಲ್ಲಿ ಸ್ವಾವಲಂಬಿಯಾದ ತರುವಾಯ ನಾನು ಹವಾ ನಿಯಂತ್ರಕದ ಬಗ್ಗೆ ಯೋಚಿಸುತ್ತೇನೆ ಎಂದು ಹೇಳಿದ್ದೆ.

ಜನತೆ ತಮ್ಮ ಹಳೆಯ ಸಂಪ್ರದಾಯಗಳನ್ನು ಬಿಡಬೇಕೆಂದು ನಾನು ಯಾವುದೇ ಗೊತ್ತುವಳಿಯಲ್ಲಿಯೂ ಹೇಳಿಲ್ಲವೆಂಬುದನ್ನು ಇಲ್ಲಿ ಸ್ಪಷ್ಟಪಡಿಸಬಯಸುತ್ತೇನೆ. ಅದನ್ನು ಧರ್ಮಸಂಬಂಧಿ ಜನರೇ ಮಾಡುತ್ತಾರೆ. ಇದಕ್ಕೆ ಅವರಿಗೆ ಯಾವುದೋ ಪ್ರೇರಣೆ ಇರಬಹುದು ಅಥವಾ ಅವರ ಸ್ವಂತ ಸ್ವಭಾವವೇ ಕಾರಣವಾಗಿರಬಹುದು. ಆದರೆ ರಾಜಕಾರಣದಲ್ಲಿ ಮಾತ್ರ ಸ್ಫೂರ್ತಿ ಹಾಗೂ ಸಂವಿಧಾನದ ಮೇರೆಗೆ ಮಾತ್ರವೇ ಕಾರ್ಯ ಮಾಡುತ್ತೇವೆ. ಇಲ್ಲಿ ನಾವು ನಮ್ಮ ಸ್ವಂತ ಸ್ವಭಾವವನ್ನು ಪ್ರದರ್ಶಿಸಲಿಲು ನಾವಿಲ್ಲಿಲ್ಲ. ನಾವು ಕೋಟಿಗಟ್ಟಲೆ ಜನತೆಯ ಕಲ್ಯಾಣಕ್ಕಾಗಿ ಶಾಸನದ ರಚನೆ ಕಾರ್ಯ ಕೈಗೊಳ್ಳಲು ನಾವಿಲ್ಲಿದ್ದೇವೆ. ಜನರ ಮೆಚ್ಚುಗೆ ಗಳಿಸಲು ನಮ್ಮಲ್ಲಿನ ಕೆಲವರ ಗುಣ ಹಣ ಸ್ವಂತ ಸ್ವಭಾವವನ್ನು ಬಿಂಬಿಸಲು ನಾವಿಲ್ಲಿಲ್ಲ. ಜಲಸಂಪನ್ಮೂಲಗಳ ನಿರ್ವಹಣೆಯ ಬಗ್ಗೆ ನಿಮಗೆ ನಾನು ಹೇಳಬಯಸುತ್ತೇನೆ. ನಾನು ಸ್ಥೂಲವಾಗಿ ಲೆಕ್ಕಹಾಕಿರುವ ಪ್ರಕಾರ, ಇಂಡಿಯ ದೇಶದಲ್ಲಿ ನೀರಾವರಿ ಸೌಲಭ್ಯ ಕಲ್ಪಿಸಲು 4000 ಕೋಟಿ ರೂ. ಗಳಿಂದ 10000 ಕೋಟಿ ರೂ. ಅಗತ್ಯವಿದೆ. ಇಂಥ ಬೃಹತ್ ಕಾರ್ಯವನ್ನು ಕೈಗೊಳ್ಳಬೇಕಾದರೆ, ಜನರು, ಸ್ವಯಂಸೇವಕರಂತೆ ಭಾಗವಹಿಸಬೇಕೆಂದು ಕೋರಬೇಕಾಗುತ್ತದೆ. ಅದಕ್ಕಾಗಿ, ದೇಶದಲ್ಲಿಯ ಅಭಾವದ ಪರಿಸ್ಥಿತಿಯನ್ನು ಅವರೊಂದಿಗೆ ನಾವೂ ಹಂಚಿ ಕೊಳ್ಳುತ್ತೇವೆ ಎಂದು ಅವರಿಗೆ ಮನವರಿಕೆ ಮಾಡಿಕೊಡುವುದರಿಂದಲೂ ಅದನ್ನು ಸಾಧಿಸಬಹುದು.

ನಾನು ಖಾಸಗಿ ವಲಯ ಹಾಗೂ ಸಾರ್ವಜನಿಕ ವಲಯದ ಉದ್ದಿಮೆಯ ಬಗ್ಗೆ ಏನನ್ನೂ ಏಕೆ ಹೇಳುತ್ತಿಲ್ಲ ಎಂದು ಕೆಲವರು ಕೇಳಬಹುದು. ಆದರೆ, ನಾನು ಹೇಳಬಯಸುವ ಒಂದು ಮೂಲಭೂತ ಅಂಶವೆಂದರೆ, ಈ ದೇಶವನ್ನು ನಡೆಸುವ ಜನ, ಅವರು ಖಾಸಗಿ ವಲಯದ ಉದ್ದಿಮೆಗೆ ಸೇರಿದವರಾಗಿರಬಹುದು ಅಥವಾ ಸಾರ್ವಜನಿಕ ವಲಯದ ಉದ್ದಿಮೆಯವರಿರಬಹುದು, ಆದರೆ ತಮ್ಮ ಉತ್ಪಾದನೆಯನ್ನು ಬರ್ಮಾ, ಇಂಡೋನೇಷ್ಯಾ ಅಥವಾ ಮತ್ತಿತರ ದೇಶಗಳಿಗೆ ರಫ್ತು ಮಾಡಿ ಅಲ್ಲಿಂದ ಅಕ್ಕಿ, ಗೋಧಿಯನ್ನು ಆಮದು ಮಾಡಿಕೊಳ್ಳಲು ಇಚ್ಛಿಸುವುದಾಗಿ ಹೇಳುವುದು ನನಗೆ ಸರಿ ತೋರದು. ಇಂಥ ಮಾತುಗಳು ಸಾರ್ವಜನಿಕ ವಲಯದ ಉದ್ದಿಮೆಯ ಜನರಿಂದಷ್ಟೇ ಅಲ್ಲ ಖಾಸಗಿ ವಲಯದ ಉದ್ದಿಮೆಯ ಜನರಿಂದಲೂ ವ್ಯಕ್ತವಾಗುತ್ತವೆ. ಕಳೆದ ಇಪ್ಪತ್ತು ವರ್ಷಗಳಿಂದಲೂ ನಾವು ಅದೇ ತಪ್ಪನ್ನೇ ಮಾಡುತ್ತಾ ಬಂದಿದ್ದೇವೆ. ನೈಲಾನ್, ರೆಯಾನ್, ಟೆರಿಲಿನ್‌ಗಳಂಥ ಅನಗತ್ಯ ಸರಕುಗಳನ್ನು ಧಾರಾಳವಾಗಿ ಉತ್ಪಾದಿಸಬಲ್ಲ ಕಾರ್ಖಾನೆಗಳನ್ನು ಸಾಕಷ್ಟು ಸಂಖ್ಯೆಯಲ್ಲಿ ಕಟ್ಟಿಸಿರುವ ನಾವು ನೀರಾವರಿ ಸೌಕರ್ಯಗಳನ್ನು ಕಲ್ಪಿಸುವತ್ತ ದಾಪುಗಾಲು ಹಾಕುತ್ತಿಲ್ಲ.

ನಿರ್ಧಾರದ ಹೊಣೆಯನ್ನು ಗ್ರಾಹಕರ ಮೇಲೆ ಬಿಡಬೇಕು ಹಾಗೂ ಮುಕ್ತ ವ್ಯಾಪಾರಕ್ಕೆ ಅನುಮತಿಸಬೇಕು ಎಂದು ಹೇಳುವ ಜನ ಇಂದು ನಾವು ಅದರ ಫಲವನ್ನು ಅನುಭವಿಸುತ್ತಿರುವುದನ್ನು ನೋಡಬೇಕು. ಸಾರ್ವಜನಿಕ ವಲಯದ ಉದ್ದಿಮೆಗಳನ್ನು ಹೆಚ್ಚು ಹೆಚ್ಚಾಗಿ ಸ್ಥಾಪಿಸಬೇಕು ಎಂದು ಹೇಳುವವರಿಗೆ ನಾನು ಹೇಳುವುದೊಂದೇ. ರೂರ್ಕೆಲಾ ಉಕ್ಕಿನ ಕಾರ್ಖಾನೆಯಲ್ಲಾಗಲೀ ಹಾಗೂ ಜೆಮ್‌ಷೆಡ್‌ಪುರ ಉಕ್ಕಿನ ಕಾರ್ಖಾನೆಯಲ್ಲಾಗಲೀ ಹೆಚ್ಚಿನ ವ್ಯತ್ಯಾಸವಿಲ್ಲ. ಕೆಲಸಗಾರರು ಮತ್ತು ಕಾರ್ಮಿಕರನ್ನು ಅಧಿಕಾರಶಾಹಿವರ್ಗ ಶೋಷಿಸುತ್ತದೆ. ರೂರ್ಕೆಲಾದಲ್ಲಿಯಂತೆಯೇ ಜೆಮ್‌ಷೆಡ್‌ಪುರದಲ್ಲಿಯೂ ಇದು ನಡೆಯುತ್ತಿದೆ. ತಮ್ಮ ತಮ್ಮ ಜಾತಿಯ ಹಾಗೂ ಕುಟುಂಬಗಳ ಜನರನ್ನು ಕೆಲಸಕ್ಕೆ ಸೇರಿಸಿಕೊಳ್ಳುತ್ತಿದ್ದಾರೆ ಎಂಬುದನ್ನು ಹೇಳಲೂ ನಾನು ಹಿಂಜರಿಯುವುದಿಲ್ಲ.

ಇದು ಸ್ವತ್ತು ಹಾಗೂ ಆಸ್ತಿಗೆ ಸಂಬಂಧಿಸಿದ ವಿಷಯ. ಸಂಪತ್ತಿನ ಆಸೆ ಹಾಗೂ ಸಂಪತ್ತಿನ ನಿಯಮಬದ್ಧತೆ ಎರಡೂ ಮೇಳೈಸಲಾರವು. ಈ ಸಮಸ್ಯೆಗೆ ಯಾವುದೇ ಸಮಾಜ ಅಥವಾ ದೇಶ ಪರಿಹಾರ ಕಂಡುಹಿಡಿದಿಲ್ಲ. ಸಂಪತ್ತನ್ನು ಸಾರ್ವತ್ರಿಕಗೊಳಿಸಲು ಮಾರ್ಕ್ಸ್ ಒಂದು ಪರಿಹಾರವನ್ನು ಕಂಡುಹಿಡಿದ. ಸಂಪತ್ತಿನ ಅತಿ ಆಮಿಷಕ್ಕೆ ಒಳಗಾಗದಿರುವುದಕ್ಕೆ ದಾರಿ ಹುಡುಕಲು ನಮ್ಮ ಉಪನಿಷತ್ತುಗಳೂ ಪ್ರಯತ್ನಿಸಿವೆ. ನಾವೂ ಈ ಸಮಸ್ಯೆಗೆ ಪರಿಹಾರ ಹುಡುಕಲು ಯತ್ನಿಸಬೇಕು. ಅದರಲ್ಲೂ ವಿಶೇಷವಾಗಿ

ಐಷಾರಾಮದ ಜೀವನಕ್ಕಾಗಿ ಹಂಬಲಿಸುವುದನ್ನು ಬಿಡಬೇಕು. ಐಷಾರಾಮದ ವಸ್ತುಗಳ ಹಂಬಲಕ್ಕೂ ಹಾಗೂ ಅವುಗಳ ಉತ್ಪಾದನೆಗೂ ತಡೆಯೊಡ್ಡಬೇಕು ಎಂಬುದೇ ನನ್ನ ಮನದಿಂಗಿತ.

ಸ್ವಲ್ಪ ಸಮಯದ ಮುಂಚೆ ನಾನು ವಾಹನಗಳ ಉದಾಹರಣೆ ನೀಡಿದೆ. ಈಗ ಶಾಲೆಗಳ ನಿದರ್ಶನವನ್ನು ನೀಡುತ್ತೇನೆ. ಅತ್ಯುತ್ತಮ ಶಾಲೆಗಳಲ್ಲಿ ಓದುತ್ತಿದ್ದು ಪ್ರತಿ ತಿಂಗಳೂ 20 ರಿಂದ 100 ರೂ. ಗಳ ವರೆಗೂ ಫೀಜು ನೀಡುತ್ತಿರುವ ಮಕ್ಕಳು ನಮ್ಮ ದೇಶದಲ್ಲಿ 5 ರಿಂದ 10 ಲಕ್ಷ ದಷ್ಟಿದ್ದಾರೆ. ಫೀಜು ಎಂದರೆ ಕೇವಲ ಶಾಲಾ ಶುಲ್ಕ ಅಷ್ಟೇ. ಇದರ ಹೊರತಾಗಿ ಬಸ್ ಖರ್ಚು, ಅವರ ಊಟ ತಿಂಡಿ, ಬಟ್ಟೆ ಬರೆಗೆ ಬೇರೆ ಮತ್ತಷ್ಟು ಹಣ ಖರ್ಚಾಗುತ್ತದೆ. ಇಂಥ ವೆಚ್ಚವನ್ನು ತಗ್ಗಿಸಿ, ಅಂಥ ಶಾಲೆಗಳನ್ನು ದೇಶದ ಎಲ್ಲೆಡೆಗಳಲ್ಲೂ ತೆರೆದು, ರಾಷ್ಟ್ರಪತಿಯ ಮಗನಾಗಲೀ ಕಸಗುಡಿಸುವವನ ಮಗನಾಗಲೀ ಸಮಾಜದ ಎಲ್ಲ ಸ್ತರದ ಮಕ್ಕಳೂ ಒಟ್ಟಿಗೆ ಒಂದೇ ಕಡೆ ಕಲಿಯುವಂಥ ಅವಕಾಶ ಕಲ್ಪಿಸಿದರೆ ನಾವು 60 ರಿಂದ 100 ಕೋಟಿ ರೂ. ಗಳಷ್ಟು ಉಳಿತಾಯ ಮಾಡಬಹುದು.

ನಾನು ಮಾತನಾಡುತ್ತಿರುವ ವಿಷಯಗಳನ್ನೆಲ್ಲ ಮನನ ಮಾಡಬೇಕೆಂದು ಮಾನ್ಯ ಸದಸ್ಯರನ್ನು ನಾನು ವಿನಂತಿಸುತ್ತೇನೆ. ಸಂಪತ್ತನ್ನು ಅರ್ಜಿಸುವ ಆಸೆ, ಸಂಪತ್ತನ್ನು ಸಾರ್ವತ್ರಿಕಗೊಳಿಸುವುದು ಹಾಗೂ ಐಷಾರಾಮದ ವಸ್ತುಗಳಿಗೆ ಅವಕಾಶ ಕಲ್ಪಿಸುವುದು ಮುಂತಾದ ವಿಷಯಗಳ ಕುರಿತು ನಾನು ಮಾತನಾಡಿದೆ. ನಾನು ನನ್ನ ದೇಶಕ್ಕಾಗಿ ಒಂದು ಪರಿಹಾರ ಮಾರ್ಗವನ್ನು ಕಂಡುಹಿಡಿಯಲು ಯತ್ನಿಸುತ್ತಿದ್ದೇನೆ. ಜನ ಈ ದಿಕ್ಕಿನಲ್ಲಿ ಯೋಚಿಸಲೂ ಯತ್ನಿಸಿರಲಿಕ್ಕಿಲ್ಲವೆಂದು ನನ್ನ ಭಾವನೆ. ಮಾನ್ಯ ಸದಸ್ಯರು ಈ ವಿಷಯಗಳ ಬಗ್ಗೆ ಯೋಚಿಸಬೇಕು ಹಾಗೂದೇಶವನ್ನು ಕಟ್ಟುವ ಕಾರ್ಯಕ್ಕೆ ತಮ್ಮ ಕೊಡುಗೆ ನೀಡಬೇಕು. ಮಾನ್ಯ ಸಚಿವರು ಮೂರು ವಾರಗಳ ಹಿಂದೆ 25 ಕೋಟಿ ರೂ. ಗಳಿಗಿಂತ ಹೆಚ್ಚಿನ ಉಳಿತಾಯ ಸಾಧ್ಯವಿಲ್ಲ ಎಂದಿದ್ದವರು 50 ಕೋಟಿ ರೂ. ಗಳ ವರೆಗೆ ಉಳಿತಾಯ ಮಾಡಬಹುದು ಎಂದಿದ್ದಾರೆ. ಅದೇ ಸಂತೋಷ. 50 ರಿಂದ 60 ಕೋಟಿ ರೂ. ಉಳಿತಾಯ ಮಾಡಬಹುದೆಂದು ಇಂದು ಹೇಳಿದ್ದಾರೆ. ಈ ಏರಿಕೆ ಹೀಗೆ ಹೆಚ್ಚುತ್ತ ಹೋದರೆ ಇನ್ನಾರು ತಿಂಗಳಲ್ಲಿ ಅವರು ನನ್ನ ಮಾತನ್ನು ಒಪ್ಪುತ್ತಾರೆ.

ಸಂಕಟಕ್ಕೆ ಸಿಲುಕಿದಾಗ ನೀವು ಉದ್ವಿಗ್ನರಾಗಬಾರದು. ಸ್ವಲ್ಪ ಸಮಯ ನಿಮಗೆ ನಿರ್ಬಂಧವೆನಿಸಬಹುದು. ಇಂದು ನೀವು 50 ಕೋಟಿ ಉಳಿತಾಯ ಮಾಡಬಹುದು ಎಂದು ಒಪ್ಪಿರುವಿರಾದರೆ ಸೋಮವಾರದ ವೇಳೆಗೆ ನಾವು ಸಭೆ ಸೇರಿದಾಗ ಅದು 300 ಕೋಟಿ ರೂ. ಗಳಾಗುತ್ತದೆ. ಆದರೂ ನಾನು ಅದು 1000 ದಿಂದ 1500 ಕೋಟಿ

ರೂ. ಗಳಾಗಬಲ್ಲದೆಂದು ಹೇಳುತ್ತೇನೆ ಈ ಬಗ್ಗೆ ನಾನು ಈಗಾಗಲೇ ಅಂಕಿಅಂಶಗಳನ್ನು ಕೊಟ್ಟಿದ್ದೇನೆ ಮತ್ತೆ ಸಮಯವನ್ನು ವ್ಯರ್ಥಗೊಳಿಸಲು ನಾನು ಬಯಸುವುದಿಲ್ಲ.

ಶ್ರೀ ರಾಮಮೂರ್ತಿಯವರಿಗೆ ಶ್ರೀ ಶರ್ಮಾ ಅವರಿಗೆ ನಾನೊಂದು ಮಾತನ್ನು ಹೇಳಬೇಕೆಂದು ಬಯಸುತ್ತೇನೆ. ವೈಯಕ್ತಿಕ ವೆಚ್ಚವನ್ನು ಮಿತಗೊಳಿಸಬೇಕೆಂದು ನಾನು ಉದ್ದೇಶಪೂರ್ವಕವಾಗಿ ಹೇಳಿದ್ದೆ. ಹಲವು ಅಧಿಕಾರಸ್ಥರು ಹಾಗೂ ಸಚಿವರ ವೇತನ 3000 ದಿಂದ 4000 ರೂ. ಇದ್ದರೂ, ಅವರು ಪಡೆಯುವ ಆನುಷಂಗಿಕ ಪ್ರಯೋಜನಗಳ ಮೊತ್ತ 10000 ರೂ. ಗಳಿಂದ ಒಂದು ಲಕ್ಷ ರೂ. ಆಗುತ್ತದೆ. ಖರ್ಚಿನ ಬಗ್ಗೆ ನಾನು ಮಾತನಾಡಿದಾಗ ಅದರಲ್ಲಿ ವೇತನ ಹಾಗೂ ಆನುಷಂಗಿಕ ಪ್ರಯೋಜನಗಳು ಎರಡೂ ಸೇರುತ್ತದೆ ಎಂಬುದು ಸುಸ್ಪಷ್ಟ. ನಮ್ಮ ದೇಶದಲ್ಲಿ ಅಪಾರ ಸೌಕರ್ಯಗಳನ್ನು ಅನುಭವಿಸುತ್ತೇವೆ ಹಾಗೂ ಈ ವಿಷಯದಲ್ಲಿ ಪ್ರಪಂಚದಲ್ಲಿ ನಮ್ಮ ದೇಶಕ್ಕೇ ಅಗ್ರಸ್ಥಾನ. ನನ್ನ ಆನುಷಂಗಿಕ ಪ್ರಯೋಜನಗಳ ವಿಷಯ ನಾನು ನಿಮಗೆ ಹೇಳಿದೆ. ಯಾವ ವ್ಯಕ್ತಿಯೂ ತನಗೆ ದೊರಕುವ ಸೌಕರ್ಯಗಳನ್ನು ಬಿಟ್ಟು ಕೊಡಲು ಬಯಸುವುದಿಲ್ಲ. ಆದ್ದರಿಂದ, ಈ ಬಗ್ಗೆ ಒಂದು ಕಾನೂನು ಮಾಡಿದರೆ ನಾವು ಕಡ್ಡಾಯವಾಗಿ ಆ ಸೌಕರ್ಯಗಳನ್ನು ಬಿಟ್ಟು ಕೊಡಬೇಕಾಗುತ್ತದೆ. ಆದ್ದರಿಂದ, ನಾನು ವೆಚ್ಚದ ಬಗ್ಗೆ ಮಾತನಾಡಿದಾಗ ಅದರಲ್ಲಿ ವೇತನ ಹಾಗೂ ಆನುಷಂಗಿಕ ಪ್ರಯೋಜನಗಳು ಎರಡೂ ಸೇರುತ್ತದೆ ಎಂಬುದು ಸ್ಪಷ್ಟವಾಗಬೇಕು. ವರಮಾನ ಮಿತಿ ಇರಬೇಕು ಎಂದು ಕೆಲ ಸದಸ್ಯರು ಸೂಚಿಸಿದರು. 1500 ರೂ. ಗಳ ವೆಚ್ಚದ ಮಿತಿ ಎಂಬುದು ಇಡೀ ಕುಟುಂಬಕ್ಕೆ ಅನ್ವಯಿಸುತ್ತದೆಯೇ ಹೊರತು ಒಬ್ಬ ವ್ಯಕ್ತಿಗಲ್ಲ ಎಂದು ನಾನು ಸ್ಪಷ್ಟಪಡಿಸುತ್ತೇನೆ. ಅವರ ಬೊಕ್ಕಸವನ್ನು ತುಂಬಿಕೊಳ್ಳಬೇಕು ಎಂದು ಇದರ ಅರ್ಥವಲ್ಲ. ಒಬ್ಬ ವ್ಯಕ್ತಿಗೆ ಅವನ ಮಕ್ಕಳ ಪೋಷಣೆಗಾಗಿ 500 ರೂ. ಗಳಿಂದ 1000 ರೂ. ವರೆಗೂ ಕೊಟ್ಟರೆ ಅದು ಬೇರೆ ಮಾತು. ಯಾವೊಬ್ಬ ವ್ಯಕ್ತಿಯ ಬಳಿ ಸಂಪತ್ತು ಅಪ್ರತ್ಯಕ್ಷವಾಗಿ ಸಂಗ್ರಹವಾಗಬಾರದೆಂಬುದೇ ಈ ಗೊತ್ತುವಳಿಯ ಮರ್ಮ.

ನನ್ನ ಕಮ್ಯುನಿಸ್ಟ್ ಸ್ನೇಹಿತರು ನನ್ನ ಬಗ್ಗೆ ಅನ್ಯಥಾ ಭಾವಿಸಬಾರದು. ಅಧಿಕಾರಿಗಳು 2000 ರೂ. ಗಳಿಂದ 3000 ರೂ. ಗಳ ವರೆಗೆ ವೇತನ ಹಾಗೂ 50000 ರೂ. ಗಳ ವರೆಗೂ ಆನುಷಂಗಿಕ ಪ್ರಯೋಜನಗಳನ್ನು ಪಡೆಯುವಂಥ ರಾಷ್ಟ್ರೀಕರಣವನ್ನು ನಾನು ಬೆಂಬಲಿಸುವುದಿಲ್ಲ. ಈಗ ರಾಷ್ಟ್ರೀಕೃತವಾಗಿರುವ ಕಾರ್ಖಾನೆಗಳನ್ನೂ ಸಹ ಖಾಸಗಿ ಕಾರ್ಖಾನೆಗಳಂತೆ ನಡೆಸುತ್ತಿರುವುದರಿಂದಲೇ ನಾನು ವೆಚ್ಚ ಎಂಬ ಪದ ಬಳಸಿದೆ.

ಶ್ರೀ ಸೋಮನಿಯವರು ಇಂದು ತಮ್ಮ ವಿಚಾರಗಳನ್ನು ವ್ಯಕ್ತಪಡಿಸಿದ್ದಾರೆ. ನಾನು ಸಾಕಷ್ಟು ಆತ್ಮನಿಗ್ರಹವನ್ನು ಪಾಲಿಸುತ್ತೇನೆಂಬುದು ನಿಮಗೂ ಗೊತ್ತು. ಮಿಂಕ್ ಕೋಟು

ಅಧಿಕಾರಶಾಹಿಗಳು ಪರಸ್ಪರ ಶಾಮೀಲಾಗಿರುವುದು ಶತಮಾನ ಗಳಿಂದಲೂ ನಡೆದುಕೊಂಡು ಬಂದಿರುವ ಸಂಗತಿ. ಹೀಗಾಗಿ ನನ್ನ ಮಾತು ಅವರಿಗೆ ಕಹಿಯೆನಿಸುತ್ತದೆ, ಅಸಂತುಷ್ಟಗೊಳಿಸುತ್ತದೆ.

ಈ ಮುಂಚೆ ಪ್ರೇರಣೆಯ ಪ್ರಸ್ತಾಪ ಬಂತು. ಸಾಮಾನ್ಯವಾಗಿ ನಾನು ಸ್ವೈರಣೆ ತಪ್ಪುವುದಿಲ್ಲ. ಆದರೆ ನಾನು ಉತ್ತರಿಸಲು ಬಯಸುತ್ತೇನೆ. ಅಧಿಕ ವರಮಾನದ ವ್ಯಾಪ್ತಿಯಲ್ಲಿ ಬರುವಂಥವರು ಕೇವಲ ಒಂದು ಲಕ್ಷದಷ್ಟಿದ್ದಾರೆ ಎಂದು ಶ್ರೀ ಮೊರಾರ್ಜಿ ದೇಸಾಯಿ ಹೇಳಿದರು. ನನ್ನ ಅಂದಾಜಿನ 1500ರೂ. ಮಿತಿಯ ಪ್ರಕಾರ ನಮ್ಮ ದೇಶದಲ್ಲಿ ಶ್ರೀಮಂತರು 20 ಲಕ್ಷದಷ್ಟಿದ್ದಾರೆ. ಈ 20 ಲಕ್ಷ ಜನ ಸತ್ತುಹೋಗಿ ಜನ ಅವರಿಂದ ಯಾವುದೇ ರೀತಿಯಲ್ಲಿ ಪ್ರೇರಣೆ ಪಡೆಯದಿದ್ದರೂ ಅದರಿಂದ ದೇಶಕ್ಕೆ ಲಾಭವೇ. ದೇಶಕ್ಕೆ ಇಂಥವರ ಅಗತ್ಯವಿಲ್ಲ. ಅವರು ಹೇಳುವ ಪ್ರೇರಣೆಯ ಅಗತ್ಯವೂ ಇಲ್ಲ. ಈ 20 ಲಕ್ಷ ಜನ ಸಂಪತ್ತು ಕೂಡಿ ಹಾಕುವುದರಲ್ಲೇ ಹಾಗೂ ವ್ಯರ್ಥವಾಗಿ ವ್ಯಯಿಸುವುದರಲ್ಲೇ ತಮ್ಮ ಸ್ಫೂರ್ತಿಯ ಸೆಲೆಯನ್ನು ಕಂಡುಕೊಂಡರೆ ಅವರಿಗೆ ಜೀವಿಸಿರುವ ಯಾವ ಹಕ್ಕೂ ಇಲ್ಲ. ಅವರು ಎಷ್ಟು ಬೇಗ ಇಲ್ಲವಾಗುತ್ತಾರೋ ಅಷ್ಟೂ ಸಮಾಜಕ್ಕೆ ಒಳಿತೇ . ಅವರ ಸಂಖ್ಯೆ ಬರೀ 20 ಲಕ್ಷ. ಅವರ ಸಂಖ್ಯೆ ಇದಕ್ಕಿಂತ ಹೆಚ್ಚಿಲ್ಲದಿರುವುದರಿಂದ ಅವರನ್ನು ಕಡೆಗಣಿಸಿ ಉಳಿದ 49 ಕೋಟಿ 80 ಲಕ್ಷ ಸಂಖ್ಯೆಯ ಜನತೆಯ ಆಶೋತ್ತರಗಳಿಗೆ ಪ್ರಾಧಾನ್ಯ ನೀಡಬೇಕಾಗಿದೆ. 49 ಕೋಟಿ 80 ಲಕ್ಷ ಜನರ ಆಸೆಗಳ ಬಗ್ಗೆ ಗಮನವನ್ನೇ ಹರಿಸಿಲ್ಲ. 500 ರೂ. 400 ರೂ. 200 ರೂ. 8 ಆಣೆ , 4 ಆಣೆ, 2 ಆಣೆ ಗಳಿಸುವವರ ಆಕಾಂಕ್ಷೆಗಳನ್ನೂ ಪರಿಗಣಿಸಬೇಕಾದುದು ಅಗತ್ಯ. ಆದ್ದರಿಂದ ವಜ್ರಗಳ ವಿಷಯ ಚರ್ಚೆಗೆ ಬಂದಾಗಲೆಲ್ಲ ನಿಮಗೆ ನಾನು ತಿಳಿಯಪಡಿಸುವ ಅಂಶವೊಂದಿದೆ. ಈ ವಿಷಯ ನನಗೆ ಯಾರಿಂದ ಗೊತ್ತಾಯಿತು ಎಂದು ಹೆಸರನ್ನು ನಾನು ಪ್ರಕಟಿಸಲಿಚ್ಛಿಸುವುದಿಲ್ಲ. ಸ್ವತಂತ್ರ ಪಕ್ಷದ ಸದಸ್ಯರು ನಮ್ಮ ಮನೆಗೆಬಂದಾಗ 8 ಸಾವಿರ ಕೋಟಿ ರೂ. ಬೆಲೆಬಾಳುವ ಬೆಳ್ಳಿ 4 ಸಾವಿರ ಕೋಟಿ ಬೆಲೆಬಾಳುವ ಚಿನ್ನ , 15 ಸಾವಿರ ಕೋಟಿ ರೂ. ಗಳಷ್ಟು ವಜ್ರ ಹಾಗೂ ಇತರ ಅನರ್ಘ್ಯ ವಸ್ತುಗಳ ಸಂಗ್ರಹ ಇದೆಯೆಂಬ ಸ್ವಾರಸ್ಯಪೂರ್ಣ ವಿಷಯ ತಿಳಿಸಿದರು. ಹೀಗೆ ಉಪಯೋಗಕ್ಕೆ ಬಾರದ ವಸ್ತುಗಳ ಸಂಗ್ರಹ ಇರುವುದನ್ನು ನೀವೂ ಗಮನಿಸಿ. ಆದ್ದರಿಂದ ಒಂದು ಕಾನೂನು ಮಾಡಿ. ಒಂದು ಸಿಬ್ಬಂದಿಯನ್ನು ನೇಮಿಸಿದರೆ ಚಿನ್ನ, ಬೆಳ್ಳಿ, 15000 ಕೋಟಿ ರೂ. ಬೆಲೆಬಾಳುವ ವಜ್ರ.....

ಕೆಲವು ವಿಷಯಗಳು ತಪ್ಪು ಅಭಿಪ್ರಾಯಕ್ಕೆ ಎಡೆ ಕೊಡಬಹುದು. 20 ಲಕ್ಷ ಜನ ಸರ್ಕಾರಿ ನೌಕರರನ್ನು ಕೆಲಸದಿಂದ ತೆಗೆದುಹಾಕಬೇಕೆಂದು ನಾನು ಹೇಳಿದೆನೆಂದು ಡಾ|| ಸುಶೀಲಾ ನಯ್ಯರ್ ಹೇಳಿದರು ಹಾಗೂ ಇತರ ಕೆಲವರು ಅದನ್ನು ಪುನರುಚ್ಚರಿಸಿದರು.

ಆದರೆ ನಾನು ಅಂಥ ಯಾವುದೇ ಮಾತನ್ನು ಹೇಳಿಲ್ಲ. ಅವರನ್ನು ಟೇಬಲ್ ಕೆಲಸದಿಂದ ತೆಗೆದು ಕೃಷಿ ಅಥವಾ ಕೈಗಾರಿಕೆಯಂಥ ಉತ್ಪಾದನಾಪರ ಕೆಲಸಕ್ಕೆ ಬಳಸಿಕೊಳ್ಳಬೇಕೆಂದು ಹೇಳಿದೆ.

ನನ್ನ ಸರ್ಕಾರ ಮೇಲ್ಪಂಕ್ತಿ ಹಾಕಿಕೊಡಬೇಕೆಂದು ಹೇಳಲಾಗಿದೆ. ನನ್ನ ಸರ್ಕಾರ ಎಂದು ಕರೆಯಲಾಗುವಂಥ ಯಾವುದೇ ಸರ್ಕಾರ ಇಲ್ಲ ಎಂಬುದು ಮೊದಲನೇ ಸಂಗತಿ. ಇದು ನನ್ನ ಸರ್ಕಾರ ಅಲ್ಲ. ಶ್ರೀ ಮೊರಾರ್ಜಿ -ದೇಸಾಯಿ ನನ್ನ ಪಕ್ಷಕ್ಕೆ ಸೇರಿದಾಗ ಅಥವಾ ನನ್ನ ಪಕ್ಷ ಸರ್ಕಾರ ರಚಿಸಲು ಸಾಧ್ಯವಾದಾಗ ನನ್ನ ಸರ್ಕಾರವಾಗುತ್ತದೆ. ನನ್ನ ಪಕ್ಷ ಪಾಲ್ಗೊಂಡ ಸರ್ಕಾರ ಬೇರಾವುದೆ ರೀತಿಯಲ್ಲಿಯೂ ಇರಲು ಸಾಧ್ಯವಿಲ್ಲ. ಶ್ರೀ ಮೊರಾರ್ಜಿ ದೇಸಾಯಿಯವರು ಮೂರನೆಯ ವಿಧಾನವನ್ನು ಸೂಚಿಸುತ್ತಾರೆಯೆ ? ನಾನು ತಕ್ಕಮಟ್ಟಿನ ಪ್ರಭಾವ ಬೀರಬಹುದಾದ ಈ ಸಚಿವರಿಗೆ ಪೋಲೀಸರು ಬೆಂಗಾವಲು, ರಕ್ಷಣೆ ಒದಗಿಸುತ್ತಾ ಬಂದಿರುವ ಬಗ್ಗೆ ಸೆಲ್ಯೂಟ್ ಹೊಡೆಯುವ ಬಗ್ಗೆ ನಾನು ಹೇಳುತ್ತಲೇ ಬಂದಿರುವುದನ್ನು ಒಪ್ಪುತ್ತೇನೆ. ನೀವು ಲಂಗೂರ್‌ಗಳಾಗಲು ಬಯಸುತ್ತೀರಾ ? ನನ್ನ ಹಲವಾರು ಭಾಷಣಗಳಲ್ಲಿ ನಾನು ಇದನ್ನೇ ಒತ್ತಿ ಹೇಳಿದ್ದೇನೆ. ಕೆಲಸಚಿವರಾದರೂ ಪೋಲೀಸ್ ಬೆಂಗಾವಲನ್ನು ನಿರಾಕರಿಸಿರುವ ಸಂಗತಿಯಿಂದ ನನಗೆ ಸಂತೋಷವಾಗಿದೆ. ಕೆಲಮಟ್ಟಿಗೆ ಸರ್ಕಾರಿ ವಾಹನ ಹಾಗೂ ಅಂಥ ಇತರ ಕೆಲ ಸೌಕರ್ಯಗಳನ್ನು ಬಿಟ್ಟುಕೊಡಲು ಮನಸ್ಸು ಮಾಡುವ ಮಟ್ಟಿಗೆ ಕೆಲವು ಸಚಿವರ ಮೇಲಾದರೂ ಪ್ರಭಾವ ಬೀರುವಲ್ಲಿ ನಾನು ಯಶಸ್ವಿಯಾಗಿದ್ದೇನೆ.

ಎರಡು ಬಗೆಯ ಲೆಕ್ಕಪತ್ರಗಳ ನಿರ್ವಹಣೆಯು ಒಂದು ಪ್ರಮುಖ ಕುಂದು. ಒಂದು ಲಕ್ಷ ರೂ. ವರಮಾನದ ಪೈಕಿ ಎಂಟು ಸಾವಿರ ರೂ. ಮಾತ್ರ ಉಳಿದಿದೆ ಎಂದು ಶ್ರೀ ಮೊರಾರ್ಜಿ ದೇಸಾಯಿ ಭಾವಿಸುತ್ತಾರೆ. ಎಂದರೆ ಒಂದು ಲಕ್ಷರೂ.ಗಾಗಿ ಸಂದಾಯ ಮಾಡಬೇಕಾದ ತೆರಿಗೆಯನ್ನು ಸಂದಾಯ ಮಾಡಿದ ತರುವಾಯ ಉಳಿದ ಹಣ ಎಂಟು ಸಾವಿರ ರೂ. ಮಾತ್ರ. ನಾನು ಇಲ್ಲಿ ಯಾರದೇ ಹೆಸರನ್ನೂ ಉಲ್ಲೇಖಿಸುವುದಿಲ್ಲ. ಆದರೆ ಕೆಲವರು ಹೇಳಿರುವ ಪ್ರಕಾರ ಬರವಣಿಗೆಯಲ್ಲಿ ತೋರಿಸುವ ಉಳಿತಾಯ ಬೇರೆ, ಆದರೆ ನಿಜವಾದ ಉಳಿತಾಯ 50 ಸಾವಿರ ರೂ. ಅಂದಾಜು ಲೆಕ್ಕಕ್ಕಾಗಿ ಇಂಥ ತಪ್ಪನ್ನು ಮಾಡಲಾಗುತ್ತದೆ. ಏಕೆಂದರೆ ಸರ್ಕಾರದ ಅಧಿಕಾರಿಗಳು ಹಾಗೂ ಹಣಕಾಸು ಮಂತ್ರಾಲಯಕ್ಕೆ ತೋರಿಸಲು ಒಂದು ಲೆಕ್ಕವಾದರೆ ಇನ್ನೊಂದು ಲೆಕ್ಕ ರಹಸ್ಯವಾಗಿದ್ದು, ಅದರಲ್ಲಿ 50 ಸಾವಿರ ಮರೆಯಾಗಿರುತ್ತದೆ. ಆದರೆ ಈ ಎರಡೂ ಲೆಕ್ಕಗಳನ್ನೂ ಲೆಕ್ಕಕ್ಕೆ ತೆಗೆದುಕೊಳ್ಳಬೇಕು, ಲಿಖಿತದಲ್ಲಿರುವ ಅಂಕಿಅಂಶಗಳು ವ್ಯರ್ಥ.

ನನಗಿರುವ ದೃಷ್ಟಿಕೋನ ವಿಭಿನ್ನವೇ ಆದರೂ ಸ್ವತಂತ್ರ ಪಕ್ಷ ಹಾಗೂ ಕಮ್ಯುನಿಸ್ಟ್ ಪಕ್ಷಗಳೆರಡರ ಸದಸ್ಯರನ್ನು ಒಂದುಗೂಡಿಸಲು ನನಗೆ ಹೇಗೆ ಸಾಧ್ಯ ಎಂಬುದು ಸ್ವತಂತ್ರ ಪಕ್ಷ ಹಾಗೂ ಕಮ್ಯುನಿಸ್ಟ್ ಪಕ್ಷಗಳೆರಡರ ಸದಸ್ಯರು ಆಗಾಗ ನನ್ನ ಬಗ್ಗೆ ಕಟಕಿ ನುಡಿಯುತ್ತಾರೇ ಇರುತ್ತಾರೆ. ಏಕೆ ? ಅವರನ್ನು ಒಂದುಗೂಡಿಸಲು ನಾನೇಕೆ ಯತ್ನಿಸಬಾರದು ? ಕಾಂಗ್ರೆಸ್ ಪಕ್ಷ ಕುಗ್ಗಿ ನನ್ನ ಪಕ್ಷದ ಪ್ರಮಾಣಕ್ಕೇ ಸಮನಾದರೆ ಆಗ ನಾನು ಕಾಂಗ್ರೆಸ್ ಪಕ್ಷದ ಸದಸ್ಯರನ್ನು ನನ್ನೊಂದಿಗೆ ಸೇರಿಸಿಕೊಳ್ಳುತ್ತೇನೆ. ದೈತ್ಯಾಕಾರದ ಪಕ್ಷದ ಮನ ಒಲಿಸಲು ನಾನು ಬಯಸುವುದಿಲ್ಲ. ಅದು ನಮ್ಮನ್ನೆಲ್ಲ ಕಬಳಿಸಿಬಿಡುತ್ತದೆ. ನಮ್ಮ ಪಕ್ಷಗಳ ಗಾತ್ರವೂ ಅಷ್ಟೇ ಇದ್ದಿದ್ದರೆ ಪರಿಸ್ಥಿತಿಯೇ ವಿಭಿನ್ನ ವಾಗಿರುತ್ತಿತ್ತು . ಕಾಂಗ್ರೆಸ್‌ನ ಬಗ್ಗೆ ನನಗಾವ ವೈಯಕ್ತಿಕ ರೋಷವೂ ಇಲ್ಲ. ಈ ವಿಷಯ ನನ್ನಲ್ಲಿ ಖಿನ್ನತೆಯನ್ನುಂಟು ಮಾಡಿದರೂ, ಆ ಖಿನ್ನತಾಭಾವ ಒಂದೆರಡು ದಿನ ಮಾತ್ರ ಇರುತ್ತದೆ. ನನ್ನ ಖಿನ್ನತೆ ಅಲ್ಪಾಯುಷಿ , ತಾತ್ಕಾಲಿಕ. ಈ ರೀತಿ ಎರಡು ವಿರೋಧ ಪಕ್ಷಗಳನ್ನು ಒಂದೆಡೆ ತರುವ ಬಗ್ಗೆ, ನೀವು, ನಾನು ಎರಡು ಬೇರೆ ಬೇರೆ ಕಾರಣ ತೋರಿಸಿ ಅವರ ಬೆಂಬಲ ಪಡೆಯುತ್ತೇನೆ ಎಂದು ಗ್ರಹಿಸಿರಬಹುದು. ಅಧಿಕಾರಿ ವರ್ಗವು ಮಾಡುವ ವ್ಯರ್ಥ ವೆಚ್ಚವನ್ನು ತಡೆಗಟ್ಟುವ ನನ್ನ ನಿಲುವನ್ನು ಸ್ವತಂತ್ರ ಪಕ್ಷ ಬೆಂಬಲಿಸುತ್ತದೆ. ಬಂಡವಾಳ ಶಾಹಿಗಳು ಹಣವನ್ನು ಕೂಡಿ ಹಾಕುವುದನ್ನು ಹಾಗೂ ದುಂದು ವೆಚ್ಚ ಮಾಡುವುದನ್ನು ತಡೆಯಲು ಕಮ್ಯುನಿಸ್ಟರು ನನಗೆ ಬೆಂಬಲ ನೀಡುತ್ತಾರೆ. ಹೀಗಿರುವಾಗ ನಾನು ಆ ಎರಡೂ ಪಕ್ಷಗಳ ಬೆಂಬಲ ಪಡೆದರೆ ತಪ್ಪೇನು ? ಒಟ್ಟಿನಲ್ಲಿ ಅಂತಿಮ ತೀರ್ಮಾನ ಆಗುವುದು ಆಗಿಯೇ ತೀರುತ್ತದೆ ನಾವು ಕೈಗೊಂಡಿರುವ ಕಾರ್ಯದ ಮಧ್ಯದಲ್ಲಿಯೇ ನಾವು ಕೆಲವರನ್ನು ಕಳೆದುಕೊಂಡರೆ ನಷ್ಟವೇನಿಲ್ಲ. ನಾವು ಅವಿರತವಾಗಿ ಒಗ್ಗಟ್ಟಾಗಿ ಶ್ರಮಿಸಿದರೆ ನಮ್ಮ ಗುರಿಯನ್ನು ಸಾಧಿಸುತ್ತೇವೆ, ನವಭಾರತ ನಿರ್ಮಾಣ ವಾಗುತ್ತದೆ.

-:=:=:-